CPMG / KA / BG-GPO/13 / 2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜುಲೈ ೨೧, ೨೦೦೫ (ಆಷಾಢ ೩೦, ಶಕ ವರ್ಷ ೧೯೨೭) | ಸಂಚಿಕೆ ೨೯ |
|---|---|---|

## ಭಾಗ-೪-ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 52 ಎಲ್‌ಆರ್‌ಎಂ 2005, ಬೆಂಗಳೂರು, ದಿನಾಂಕ: 10ನೇ ಜೂನ್ 2005**

ಶ್ರೀ ಸಾಯಿನಾಥ ಎಜುಕೇಷನ್ ಟ್ರಸ್ಟ್ (ರಿ), ಬೆಂಗಳೂರು ಇವರು ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಕಸಬ ಹೋಬಳಿ, ಕರ್ಪೂರು ಗ್ರಾಮದ ಸರ್ವೆ ನಂ.54/2 ರಲ್ಲಿ 0-27 ಎಕರೆ, 54/3 ರಲ್ಲಿ 0-34 ಎಕರೆ, 59 ರಲ್ಲಿ 1-05 ಎಕರೆ, 61 ರಲ್ಲಿ 0-24 ಎಕರೆ, 73/ಪಿ5 ರಲ್ಲಿ 0-15 ಎಕರೆ, 73/ಪಿ6 ರಲ್ಲಿ 0-20 ಎಕರೆ ಮತ್ತು 73/ಪಿ16 ರಲ್ಲಿ 1-20 ಎಕರೆ ಹೀಗೆ ಒಟ್ಟು 5 ಎಕರೆ 15 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15-ಎ ಮತ್ತು 15-ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಎಲ್‌ಆರ್‌ಎಫ್/ಸಿಆರ್/124/04-05, ದಿನಾಂಕ: 27.04.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸರ್ವೆ ನಂಬರುಗಳಲ್ಲಿ ಒಟ್ಟು 5 ಎಕರೆ 15 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109ರ ಅಡಿ ಸರ್ಕಾರದ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಸಂಸ್ಥೆಯು ಉಪ ನೋಂದಣಾಧಿಕಾರಿಗಳ ಕಛೇರಿ, ಜಯನಗರ ಇವರಲ್ಲಿ ದಿನಾಂಕ: 20.02.2002 ರಂದು ನೋಂದಾಯಿಸಲ್ಪಟ್ಟಿದೆ. ಅರ್ಜಿದಾರರು ಪ್ರಾಜೆಕ್ಟ್ ವರದಿಯನ್ನು ಸಲ್ಲಿಸಿದ್ದು, ಅದು ಅರ್ಜಿದಾರರ ಉದ್ದೇಶಕ್ಕೆ ಪೂರಕವಾಗಿದೆ. ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಅಧಿನಿಯಮ, 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109 (1) (ii)ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ವರೆಗೆ ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ, 1995ರ ಕಲಂ 109 (1) (ii) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38-ಬಿ (2)(ಎ) ಮತ್ತು (ಬಿ) ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 63, 79-ಎ, 79-ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಶ್ರೀ ಸಾಯಿನಾಥ ಎಜುಕೇಶನ್ ಟ್ರಸ್ಟ್ (ರಿ), ಬೆಂಗಳೂರು ಇವರು ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಕಸಬ ಹೋಬಳಿ, ಕರ್ಪೂರು ಗ್ರಾಮದ ಸರ್ವೆ ನಂ.54/2 ರಲ್ಲಿ 0-27 ಎಕರೆ, 54/3 ರಲ್ಲಿ 0-34 ಎಕರೆ, 59 ರಲ್ಲಿ 1-05 ಎಕರೆ, 61 ರಲ್ಲಿ 0-24 ಎಕರೆ, 73/ಪಿ5 ರಲ್ಲಿ 0-15 ಎಕರೆ, 73/ಪಿ6 ರಲ್ಲಿ 0-20 ಎಕರೆ ಮತ್ತು 73/ಪಿ16 ರಲ್ಲಿ 1-20 ಎಕರೆ ಹೀಗೆ ಒಟ್ಟು 5 ಎಕರೆ 15 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109ರ ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:-

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯ್ತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯ್ತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ / ಅಭಿವೃದ್ಧಿ ಪ್ರಾಧಿಕಾರ / ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 194

**ಎಂ.ಕೆ. ಮದೀಹಳ್ಳಿ**

ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ).

## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ನಅಇ 36 ಎಂಎಲ್ಆರ್ 05, ಬೆಂಗಳೂರು, ದಿನಾಂಕ: 8ನೇ ಜೂನ್ 2005

ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 36 ಎಂಎಲ್ಆರ್ 2002 (ಎ-13), ದಿನಾಂಕ: 26.10.2002 ರಲ್ಲಿ ಚಿಕ್ಕಮಗಳೂರು ನಗರಸಭೆಗೆ ಸರ್ಕಾರದಿಂದ ನಾಮನಿರ್ದೇಶನ ಮಾಡಿರುವ ಕ್ರಮ ಸಂ: 4 ರಲ್ಲಿರುವ ಶ್ರೀ ಹೆಚ್.ಎಸ್. ಜಗದೀಶ್ ಬಿನ್ ಶ್ರೀ ಸಿದ್ದಯ್ಯ, ಮುತ್ತಿನಮ್ಮ ದೇವಸ್ಥಾನದ ಹತ್ತಿರ, ಹಿರೇಮಗಳೂರು, ಚಿಕ್ಕಮಗಳೂರು, ಇವರ ಸದಸ್ಯತ್ವವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 180

**ಜೆ. ರಾಘವೇಂದ್ರಾಚಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಮಮಇ 283 ಮಭಾಬ 04, ಬೆಂಗಳೂರು, ದಿನಾಂಕ: 24ನೇ ಮೇ 2005

ಬಾಲನ್ಯಾಯ ಕಾಯ್ದೆ 2000 (ಸೆಂಟ್ರಲ್ ಆಕ್ಟ್ 56/2000) ಪ್ರಕರಣ 4(1) ರಡಿ ಹಾಗೂ ಕರ್ನಾಟಕ ರಾಜ್ಯ ಬಾಲನ್ಯಾಯ (ಮಕ್ಕಳ ರಕ್ಷಣೆ ಮತ್ತು ಪೋಷಣೆ) ನಿಯಮಾವಳಿ 2002ರ ನಿಯಮ 4(1) ರಡಿ ಅಧಿಸೂಚನೆ ಸಂಖ್ಯೆ: ಮಮಇ 94 ಮಭಾಬ 2003, ದಿನಾಂಕ: 25.7.2003 ರಲ್ಲಿ ಗುಲ್ಬರ್ಗ ಜಿಲ್ಲೆಯ ಬಾಲ ನ್ಯಾಯ ಮಂಡಳಿಯ ಸದಸ್ಯರನ್ನಾಗಿ ನೇಮಕ ಮಾಡಲಾಗಿದ್ದ ಶ್ರೀಮತಿ ಸುಮಿತ್ರಬಾಯಿರವರು ದಿನಾಂಕ: 7.10.2004 ರ ಪತ್ರದಲ್ಲಿ ಸದರಿ ಮಂಡಳಿಯ ಸದಸ್ಯತ್ವಕ್ಕೆ ರಾಜೀನಾಮೆ ಸಲ್ಲಿಸಿದ್ದರಿಂದ ತಕ್ಷಣದಿಂದ ಜಾರಿಗೆ ಬರುವಂತೆ ಅವರ ರಾಜೀನಾಮೆಯನ್ನು ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 181

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ-1,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## LAW SECRETARIAT

## NOTIFICATION

### No. LAW 96 LCE 2003, Bangalore, Dated 4th June 2005

In exercise of the powers conferred by sub-section (2) of Section 3 of the Family Courts Act, 1984 (Central Act 66 of 1984) and in partial modification of the notification No. LAW 135 LCE 96 (III), dated 18.5.1998, the Government of Karnataka, in consultation with the High Court of Karnataka, hereby specifies that the area comprising the local limits of "taluk of Raichur" shall be the area to which the jurisdiction of the Family Court, Raichur, Shall extend.

By Order and in the Name of the Governor of Karnataka,

PR-186

**A.P. Ramakrishna**

Under Secretary to Government (I/C), Law Department. (Admn-1)

## ಕಾನೂನು ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಲಾ 78 ಎಲ್‌ಎಜಿ 2004, ಬೆಂಗಳೂರು, ದಿನಾಂಕ: 25ನೇ ಮೇ 2005**

ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು, 1977ರ ನಿಯಮ 23ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ: 25.5.2005 ರಿಂದ ಜಾರಿಗೆ ಬರುವಂತೆ ಕರ್ತವ್ಯದಿಂದ ವಿಮುಕ್ತಿಗೊಳಿಸಿ ಹೊರಡಿಸಲಾದ ದಿನಾಂಕ: 24.5.2005ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಲಾ 78 ಎಲ್‌ಎಜಿ 2004ರ "2. ಉಚ್ಚ ನ್ಯಾಯಾಲಯದ ಸರ್ಕಾರಿ ಪ್ಲೀಡರುಗಳು" ಅಡಿಯಲ್ಲಿನ ಕ್ರಮ ಸಂಖ್ಯೆ: 16 ರಲ್ಲಿನ ಶ್ರೀ ಬಿ.ಎನ್. ಪ್ರಸಾದ್ ಇವರ ಹೆಸರನ್ನು ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 187 **ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-1), ಕಾನೂನು ಇಲಾಖೆ.

### ತಿದ್ದುಪಡಿ

**ಸಂಖ್ಯೆ: ಲಾ 78 ಎಲ್‌ಎಜಿ 2004, ಬೆಂಗಳೂರು, ದಿನಾಂಕ: 28ನೇ ಮೇ 2005**

ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳ (1977) ನಿಯಮ 23ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಿ ವಕೀಲರು, ಅಪರ ಸರ್ಕಾರಿ ವಕೀಲರು ಮತ್ತು ಉಚ್ಚ ನ್ಯಾಯಾಲಯದ ಸರ್ಕಾರಿ ಪ್ಲೀಡರ್‌ಗಳನ್ನು ನೇಮಿಸಿರುವುದಕ್ಕೆ ಸಂಬಂಧಿಸಿದ ಅಧಿಸೂಚನೆ ಸಂಖ್ಯೆ: ಲಾ 78 ಎಲ್‌ಎಜಿ 2004, ದಿನಾಂಕ: 24.05.2005 ರಲ್ಲಿ ಉಚ್ಚ ನ್ಯಾಯಾಲಯದ ಸರ್ಕಾರಿ ಪ್ಲೀಡರ್‌ಗಳ ಪಟ್ಟಿಯ ಕ್ರಮ ಸಂಖ್ಯೆ 19 ರಲ್ಲಿ "ಶ್ರೀಮತಿ ಶಾರದ" ಎಂಬುದನ್ನು "ಶ್ರೀಮತಿ ಎ.ಆರ್. ಶಾರದಾಂಬ" ಎಂಬುದಾಗಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 188 **ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-1), ಕಾನೂನು ಇಲಾಖೆ.

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 204 ಸಿಎಲ್‌ಎಂ 2003, ಬೆಂಗಳೂರು, ದಿನಾಂಕ: 29ನೇ ಏಪ್ರಿಲ್ 2005**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 2-ಎ ಉಪ ಪ್ರಕರಣ (5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಕೆ.ಸಿ.ಸಿ. ಬ್ಯಾಂಕ್ ನಿಯಮಿತ, ಧಾರವಾಡ ಇದಕ್ಕೆ ಸಂಬಂಧಪಟ್ಟಂತೆ ಧಾರವಾಡ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರಿಗೆ ಅಧಿಕಾರ ಪ್ರತ್ಯಾಯೋಜಿಸಿದ್ದ ದಿನಾಂಕ: 15.02.2003 ಮತ್ತು 20.05.2003ರ ಸಂಖ್ಯೆ: ಸಿಎಂಡಬ್ಲ್ಯೂ 19 ಸಿಎಲ್‌ಎಂ 2002ರ ಹಾಗೂ ದಿನಾಂಕ: 11.12.2003ರ ಸಂಖ್ಯೆ: ಸಿಎಂಡಬ್ಲ್ಯೂ 204 ಸಿಎಲ್‌ಎಂ 2003ರ ಅಧಿಸೂಚನೆಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ಹಿಂಪಡೆದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 189 **ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕೃತೋಇ 20 ಕೃಇಮಂ 2005, ಬೆಂಗಳೂರು, ದಿನಾಂಕ: 29ನೇ ಜೂನ್ 2005**

ಕರ್ನಾಟಕ ಸ್ಟೇಟ್ ಆಗ್ರೋ ಕಾರನ್ ಪ್ರಾಡಕ್ಟ್ಸ್ ಲಿಮಿಟೆಡ್‌ನ ಅಂತರ ನಿಯಮಾವಳಿ (ಆರ್ಟಿಕಲ್ಸ್ ಆಫ್ ಅಸೋಸಿಯೇಷನ್) ಅನುಚ್ಛೇದ 5(ಬಿ) (ii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಹೆಚ್. ಗಣೇಶ್‌ಮೂರ್ತಿ, ಉಪ ಕಾರ್ಯದರ್ಶಿ-1, ಆರ್ಥಿಕ ಇಲಾಖೆ ಇವರನ್ನು ಶ್ರೀ ಎಂ.ಎಸ್. ಸ್ವಾಮಿ, ಉಪಕಾರ್ಯದರ್ಶಿ-1, ಆರ್ಥಿಕ ಇಲಾಖೆ (ವೆಚ್ಚ) ಇವರ ಬದಲಿಗೆ ಈ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ಸ್ಟೇಟ್ ಆಗ್ರೋ ಕಾರನ್ ಪ್ರಾಡಕ್ಟ್ಸ್ ಲಿಮಿಟೆಡ್‌ನ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 205 **ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 440 ಮೈಅಪ್ರಾ 2004, ಬೆಂಗಳೂರು, ದಿನಾಂಕ: 20ನೇ ಜೂನ್ 2005**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ 1987 (1987ರ ಕರ್ನಾಟಕ ಅಧಿನಿಯಮ 34)ರ 3ನೇ ಪ್ರಕರಣ, ಉಪ ಪ್ರಕರಣ 3(ಡಿ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಟಿ. ಶ್ರೀಕಂಠೇಗೌಡ, ವಿಧಾನ ಪರಿಷತ್ ಸದಸ್ಯರು, ಇವರನ್ನು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಸದಸ್ಯರನ್ನಾಗಿ ಮೇಲ್ಕಂಡ ಕಾಯ್ದೆಯ 5ನೇ ಪ್ರಕರಣದಂತೆ ಸರ್ಕಾರದ ಇಚ್ಛಾನುಸಾರ ಅಥವಾ ಸದಸ್ಯರಾಗಿ ಪದಧಾರಣೆ ಮಾಡಿದ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ : ಅಥವಾ ವಿಧಾನ ಪರಿಷತ್ ಸದಸ್ಯತ್ವದ ಅವಧಿ ಮುಕ್ತಾಯವಾಗುವವರೆವಿಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಈ ಕೂಡಲೇ ಜಾರಿಗೆ ಬರುವಂತೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 206 **ಶಾಂತಾರಾಂ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ನಗರಾಭಿವೃದ್ಧಿ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ನಅಇ 45 ಗುಅಪ್ರಾ 2005, ಬೆಂಗಳೂರು, ದಿನಾಂಕ: 22ನೇ ಜೂನ್ 2005**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 5 ರಡಿಯಲ್ಲಿ ಗುಲ್ಬರ್ಗಾ ಜಿಲ್ಲೆ ಸುರಪುರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಹಾಲಿ ಭೂ ಉಪಯೋಗಗಳ ನಿರ್ಧರಣಾ ದಿನಾಂಕವನ್ನು ದಿನಾಂಕ: 1.4.2005 ರಂದು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 207

**ಶಾಂತಾರಾಂ ವಿ. ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 642 ಸಿಎನ್‌ಎಸ್ 2005, ಬೆಂಗಳೂರು, ದಿನಾಂಕ: 7ನೇ ಏಪ್ರಿಲ್ 2005**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಮಂಗಳೂರು ಜಿಲ್ಲೆಯ ಮತ್ತು ತಾಲ್ಲೂಕಿನ ನಾಗುರಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ನಾಗುರಿ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀಮತಿ ಸ್ಟೆಲ್ಲಾ ಪಿರೇರಾ, ಅಡ್ಯಾರು ಪದವು, ಮಂಗಳೂರು.
2. ಶ್ರೀ ಶಶಿರಾಜ್ ಎ. ಜಾನ್ ಅಂಬಟ್‌ರ ಮಗ, ಗುಡ್ಡೆತೋಟ, ನಾಗುರಿ, ಮಂಗಳೂರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 208

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 804 ಸಿಎನ್‌ಎಸ್ 2005, ಬೆಂಗಳೂರು, ದಿನಾಂಕ: 30ನೇ ಮೇ 2005**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆ, ಅರಳಾಳು ಸಂದ್ರ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಅರಳಾಳುಸಂದ್ರ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶ್ರೀ ಬಿ.ವಿ. ರಾಜಣ್ಣ ಬಿನ್ ವೀರೇಗೌಡ, ಬಿ.ವಿ. ಹಳ್ಳಿ, ವಿರುಪಾಕ್ಷಿಪುರ, ಚನ್ನಪಟ್ಟಣ ತಾಲ್ಲೂಕು.
2) ಶ್ರೀ ಲಿಂಗರಾಜು ಬಿನ್ ಲಿಂಗಯ್ಯ, ಬೈರ ಶೆಟ್ಟಿಹಳ್ಳಿ, ಸಿಂಗರಾಜಪುರ ಅಂಚೆ, ವಿರುಪಾಕ್ಷಿಪುರ ಹೋಬಳಿ, ಚನ್ನಪಟ್ಟಣ ತಾಲ್ಲೂಕು.
3) ಶ್ರೀಮತಿ ನಾಗಮ್ಮ ಕೋಂ ಪುಟ್ಟನರಸಯ್ಯ, ವಿಠಲೇನಹಳ್ಳಿ ವಿರುಪಾಕ್ಷಿಪುರ ಹೋಬಳಿ, ಚನ್ನಪಟ್ಟಣ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 209

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 36 ಕಾಬಾಸೇ 2005, ಬೆಂಗಳೂರು, ದಿನಾಂಕ: 27ನೇ ಜೂನ್ 2005**

ಇಂಡಿಯನ್ ಬಾಯ್ಲರ್ ಕಾಯ್ದೆ, 1923 ಕೇಂದ್ರ ಕಾಯ್ದೆ, 1923ರ ಸಂಖ್ಯೆ (5)ರ ಕಲಂ 29 ಮತ್ತು ಬಾಯ್ಲರುಗಳ ಅಟೆಂಡೆಂಟ್ಸ್ ನಿಯಮಗಳು, 1962ರ ನಿಯಮಗಳು 9(1), (2) ಮತ್ತು 10 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಕರ್ನಾಟಕ ಸರ್ಕಾರವು ಈ ಕೆಳಕಂಡವರನ್ನೊಳಗೊಂಡ ಬಾಯ್ಲರ್ ಅಟೆಂಡೆಂಟ್‌ಗಳ ಪರೀಕ್ಷಾ ಮಂಡಳಿಯನ್ನು ಮೂರು ವರ್ಷಗಳ ಅವಧಿಯವರೆಗೆ ರಚಿಸಿ ಆದೇಶಿಸಿದೆ.

| | | |
|---|---|---|
| 1 | ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು,<br>ಕಾರ್ಮಿಕ ಭವನ, 3ನೇ ಮಹಡಿ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560 029. | ಪದನಿಮಿತ್ತ ಅಧ್ಯಕ್ಷರು |
| 2 | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು,<br>ಬಾಯ್ಲರ್ ಟೆಸ್ಟಿಂಗ್ ಅಂಡ್ ಎಕ್ಸಾಮಿನೇಷನ್ ಸೆಲ್, ಬೆಂಗಳೂರು-560 009. | ಸದಸ್ಯ ಕಾರ್ಯದರ್ಶಿ |
| 3 | ಶ್ರೀ ಎನ್.ಸಿ. ಅಗಸೇ ಬಾಗಿಲ್,<br>ಅಸಿಸ್ಟೆಂಟ್ ಜನರಲ್ ಮ್ಯಾನೇಜರ್, ಎಜಿಎಂಪಿಬಿ ಇನ್‌ಚಾರ್ಜ್, ಮೈಸೂರು ಪೇಪರ್ ಮಿಲ್ಸ್ ಲಿಮಿಟೆಡ್, ಪೇಪರ್ ಟೌನ್ ಪೋಸ್ಟ್, ಭದ್ರಾವತಿ-577 302. | ಸದಸ್ಯರು |
| 4 | ಶ್ರೀ ಚಂದ್ರಶೇಖರ ಶಿವಬಾರ ದುಮಾಲೆ ಬಿ.ಇ. (ಮೆಕ್ಯಾನಿಕ್),<br>ಬಿ.ಇ. (ಎಲೆಕ್ಟ್ರಿಕಲ್), 2ನೇ ಮುಖ್ಯ ರಸ್ತೆ, 1ನೇ ಅಡ್ಡರಸ್ತೆ, ಸದಾಶಿವನಗರ, ಬೆಳಗಾಂ-590 001. | ಸದಸ್ಯರು |
| 5 | ಶ್ರೀ ಗೋವಿಂದರಾಜು,<br>ಸೀನಿಯರ್ ಮ್ಯಾನೇಜರ್ ಆಪರೇಷನ್ (ಸ್ಕೀಂ ಪ್ಲಾಂಟ್) ಮೆ: ಇಂಡಿಯನ್ ಅಲ್ಯುಮಿನಿಯಂ ಕಂಪನಿ, ಬೆಳಗಾಂ. | ಸದಸ್ಯರು |

| | | |
|---|---|---|
| 6 | ಶ್ರೀ ಕೆ. ಪದ್ಮನಾಭ ರೆಡ್ಡಿ,<br>ಜನರಲ್ ಮ್ಯಾನೇಜರ್, ಕರ್ನಾಟಕ ಸೋಪ್ಸ್ ಅಂಡ್ ಡಿಟರ್ಜೆಂಟ್ ಲಿಮಿಟೆಡ್, ಪಿ.ಬಿ.ರಸ್ತೆ, ಬೆಂಗಳೂರು. | ಸದಸ್ಯರು |
| 7 | ಶ್ರೀ ಮುದಕಪ್ಪ ಶಿವಲಿಂಗಪ್ಪ ಬಶೆಟ್ಟಿ,<br>ಜನರಲ್ ಮ್ಯಾನೇಜರ್, ಶ್ರೀ ರೇಣುಕಾ ಶುಗರ್ಸ್ ಲಿಮಿಟೆಡ್, ಬಿಸಿ. 106, ಹ್ಯಾವ್‌ಲಾಕ್ ರಸ್ತೆ, ಕಂಟೋನ್‌ಮೆಂಟ್, ಬೆಳಗಾಂ-590001. | ಸದಸ್ಯರು |
| 8 | ಶ್ರೀ ಬಿ.ಎನ್. ಶಂಕರಲಿಂಗೇಗೌಡ,<br>ಚೀಫ್ ಇಂಜಿನಿಯರ್, ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆ ನಿಯಮಿತ, ಪಾಂಡವಪುರ, ಆರ್.ಎಸ್. 571 435, ಮಂಡ್ಯ ಜಿಲ್ಲೆ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿಮಲಾಕುಮಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು).

ಪಿ.ಆರ್. 210

**ಅಧಿಸೂಚನೆ**

**ಸಂಖ್ಯೆ: ಕಾಇ 580 ಐಐಎಂ 2005, ಬೆಂಗಳೂರು, ದಿನಾಂಕ: 25ನೇ ಜೂನ್ 2005**

ದಿ ಇಂಡಿಯನ್ ಬಾಯ್ಲರ್ ಅಧಿನಿಯಮ, 1923ರ ಕಲಂ 34(2) ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೆ: ಕರ್ನಾಟಕ ಪವರ್ ಕಾರ್ಪೊರೇಷನ್ ಲಿಮಿಟೆಡ್, ಆರ್‌ಟಿಪಿಎಸ್, ಶಕ್ತಿನಗರ, ರಾಯಚೂರು ಜಿಲ್ಲೆ ರವರ ಬಾಯ್ಲರ್ ಸಂಖ್ಯೆ: ಕೆಟಿಕೆ-2244ನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ದಿನಾಂಕ: 21.06.2005 ರಿಂದ ದಿನಾಂಕ: 20.8.2005ರ ವರೆಗೆ ಸದರಿ ಕಾಯ್ದೆಯ ಅಧಿನಿಯಮ 8ರ ವ್ಯಾಪ್ತಿಯಿಂದ ವಿನಾಯಿತಿಯನ್ನು ನೀಡಿದೆ.

1) ಬಾಯ್ಲರನ್ನು ಹಿಂದಿನ ಪ್ರಮಾಣ ಪತ್ರದಲ್ಲಿ ನಮೂದಿಸಿರುವ ಕಾರ್ಯ ಒತ್ತಡವನ್ನು ಮೀರಿ ಉಪಯೋಗಿಸಬಾರದು.
2) ಈ ಬಾಯ್ಲರನ್ನು ಪ್ರಮಾಣ ಪತ್ರ ಹೊಂದಿದ ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ರವರಿಂದಲೇ ನಡೆಸಬೇಕು.
3) ಬಾಯ್ಲರಿನ ಗರಿಷ್ಟ ಸ್ಟೀಂ ಉತ್ಪಾದನೆಯು ಗೊತ್ತುಪಡಿಸಿದ ಸಾಮರ್ಥ್ಯಕ್ಕಿಂತ ಮೀರತಕ್ಕದ್ದಲ್ಲ.
4) ಫೀಡ್ ವಾಟರಿನ ಪಿಹೆಚ್, ಬಾಯ್ಲರ್ ವಾಟರಿನ ಪಿಹೆಚ್ ಹಾಗೂ ಬಾಯ್ಲರಿನ ಟಿಡಿಎಸ್ ಅನ್ನು ನಿಗದಿತ ಪ್ರಮಾಣದಲ್ಲಿ ನಿರ್ವಹಿಸತಕ್ಕದ್ದು.
5) ಬಾಯ್ಲರಿನಲ್ಲಿ ಯಾವುದೇ ಅಪಘಾತ ಸಂಭವಿಸಿದ್ದಲ್ಲಿ ತಕ್ಷಣ ಬಾಯ್ಲರನ್ನು ನಿಲ್ಲಿಸಿ, ನಿರ್ದೇಶಕರು, ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ ರವರಿಗೆ ವರದಿ ಮಾಡತಕ್ಕದ್ದು.
6) ನಿಗದಿತ ಸಮಯದಲ್ಲಿ ಬಾಯ್ಲರ್‌ಗೆ ಬ್ಲೋ ಡೌನ್ ನೀಡಿದ ಬಗ್ಗೆ ದಾಖಲೆ ನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿಮಲಾಕುಮಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು).

ಪಿ.ಆರ್. 211

**ಅಧಿಸೂಚನೆ**

**ಸಂಖ್ಯೆ: ಕಾಇ 82 ಕಾಬಾನಿ 2004, ಬೆಂಗಳೂರು, ದಿನಾಂಕ: 23ನೇ ಆಗಸ್ಟ್ 2004**

ಪರಿಸರ (ಸಂರಕ್ಷಣೆ) ಅಧಿನಿಯಮ 1986ರ ಅಡಿ ರೂಪಿಸಿರುವ ಕೆಮಿಕಲ್ ಆಕ್ಸಿಡೆಂಟ್ಸ್ (ಎಮರ್ಜೆನ್ಸಿ ಪ್ಲಾನಿಂಗ್ ಪ್ರಿಪೇರ್ಡನೆಸ್ ಅಂಡ್ ರೆಸ್ಪಾನ್ಸ್) ನಿಯಮಾವಳಿ, 1996ರ ನಿಯಮ 8 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಹಾಸನ ಜಿಲ್ಲೆಗೆ "ಜಿಲ್ಲಾ ಬಿಕ್ಕಟ್ಟು ಪರಿಹಾರ" ಸಮಿತಿಯನ್ನು ಈ ಕೆಳಗಿನಂತೆ ರಚಿಸಿದೆ:-

| | | |
|---|---|---|
| 1 | ಜಿಲ್ಲಾಧಿಕಾರಿ, | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿಗಳ ಕೇಂದ್ರ ಸಹಾಯಕರು | ಸದಸ್ಯರು |
| 3 | ಆರಕ್ಷಕ ಅಧೀಕ್ಷಕರು (ಹಾಸನ ಜಿಲ್ಲೆ) | ಸದಸ್ಯರು |
| 4 | ಹೆಚ್ಚುವರಿ ಆರಕ್ಷಕ ಅಧೀಕ್ಷಕರು (ಹಾಸನ ಜಿಲ್ಲೆ) | ಸದಸ್ಯರು |
| 5 | ಆರಕ್ಷಕ ಉಪಯುಕ್ತರು (ಹಾಸನ ಜಿಲ್ಲೆ) | ಸದಸ್ಯರು |
| 6 | ಕಮಾಂಡೆಂಟ್, ಜಿಲ್ಲಾ ಗೃಹ ರಕ್ಷಕ ದಳ (ಹಾಸನ ಜಿಲ್ಲೆ) | ಸದಸ್ಯರು |
| 7 | ಉಪಸ್ಫೋಟಕ ನಿಯಂತ್ರಕರು, ಮಂಗಳೂರು | ಸದಸ್ಯರು |
| 8 | ವಿಭಾಗೀಯ ಅಗ್ನಿಶಾಮಕ ಅಧಿಕಾರಿ (ಹಾಸನ ಜಿಲ್ಲೆ) | ಸದಸ್ಯರು |
| 9 | ಪರಿಸರ ಅಧಿಕಾರಿ, (ಹಾಸನ ಜಿಲ್ಲೆ) | ಸದಸ್ಯರು |
| 10 | ಜಿಲ್ಲಾ ಆರೋಗ್ಯಾಧಿಕಾರಿ, (ಹಾಸನ ಜಿಲ್ಲೆ) | ಸದಸ್ಯರು |
| 11 | ಆಯುಕ್ತರು, ನಗರಸಭೆ (ಹಾಸನ ಜಿಲ್ಲೆ) | ಸದಸ್ಯರು |
| 12 | ಕಾರ್ಯಪಾಲಕ ಅಭಿಯಂತರರು, ಜನಾರೋಗ್ಯ ಇಲಾಖೆ, ಜಿಲ್ಲಾ ಪಂಚಾಯತ್, ಹಾಸನ. | ಸದಸ್ಯರು |
| 13 | ಜಿಲ್ಲಾ ವಾರ್ತಾ ಮತ್ತು ಪ್ರಚಾರ ಅಧಿಕಾರಿ, ಹಾಸನ. | ಸದಸ್ಯರು |
| 14 | ಪ್ರಧಾನ ಕೃಷಿ ಅಧಿಕಾರಿ, ಹಾಸನ. | ಸದಸ್ಯರು |
| 15 | ಪ್ರಾದೇಶಿಕ ಸಾರಿಗೆ ಅಧಿಕಾರಿ, ಹಾಸನ. | ಸದಸ್ಯರು |
| 16 | ಪ್ರಧಾನ ಕಾರ್ಯದರ್ಶಿ, ಎಐಟಿಯುಸಿ. | ಸದಸ್ಯರು |

| | | |
|---|---|---|
| 17 | ಔದ್ಯೋಗಿಕ ಸುರಕ್ಷತೆ ಮತ್ತು ಆರೋಗ್ಯ<br>ಅ) ಶ್ರೀ ಜಯಂತ್, ಅಸಿಸ್ಟೆಂಟ್ ಪ್ರೊಫೆಸರ್, ಎನ್ವಿರಾನ್ಮೆಂಟಲ್ ಇಂಜಿನಿಯರಿಂಗ್, ಮಲ್ನಾಡ್ ಇಂಜಿನಿಯರಿಂಗ್ ಕಾಲೇಜು, ಹಾಸನ.<br>ಆ) ಡಾ: ಅನಿಲ್, ಕಾರ್ಯದರ್ಶಿ, ಹಾಸನ ಜಿಲ್ಲಾ ಕೈಗಾರಿಕೆಗಳ ಸಂಘ, ಹಾಸನ. | <br>ಸದಸ್ಯರು<br><br>ಸದಸ್ಯರು |
| 18 | ಕಾರ್ಖಾನೆಗಳ ಉಪ ನಿರ್ದೇಶಕರು, ಮೈಸೂರು ವಲಯ, ಮೈಸೂರು. | ಸದಸ್ಯ ಕಾರ್ಯದರ್ಶಿ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿಮಲಾಕುಮಾರಿ**

ಪಿ.ಆರ್. 212

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು).

## ಸಹಕಾರ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಸಿಎಂಡಬ್ಲ್ಯೂ 890 ಸಿಎಸ್ಎಸ್ 2005 (ಭಾಗ), ಬೆಂಗಳೂರು, ದಿನಾಂಕ: 2ನೇ ಜುಲೈ 2005

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ಸಿದ್ದೇಶ್ವರ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ., ಸಿದ್ದೇಶ್ವರ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಬಸವರಾಜ ಬಿನ್ ಮಹಾರುದ್ರಪ್ಪಾ ಪರ್ಮ
2. ಶ್ರೀಮತಿ ಕವಿತಾ ಕೋಂ ಶಾಲಿವಾನ ಚಳಕಾಪೂರೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 213

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಅಧಿಸೂಚನೆ

### ಸಂಖ್ಯೆ: ಸಿಎಂಡಬ್ಲ್ಯೂ 890 ಸಿಎಸ್ಎಸ್ 2005 (ಭಾಗ), ಬೆಂಗಳೂರು, ದಿನಾಂಕ: 2ನೇ ಜುಲೈ 2005

ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ಕಟಕ್ ಚಿಂಚೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ., ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ವೀರಶೆಟ್ಟಿ ಬಿನ್ ಬಾಬುರಾವ್ ಚಿಲ್ಲಶೆಟ್ಟಿ ರವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಮಲ್ಲಿಕಾರ್ಜುನ ಬಿನ್ ನುರಂದಪ್ಪ ಕಡಗಂಜಿ ಇವರನ್ನು ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ಕಟಕ್ ಚಿಂಚೋಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ., ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 214

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## TRANSPORT SECRETARIAT

## NOTIFICATION

### No. TRD 15 NASAE 2005, Bangalore, Dated: 28th June 2005

In exercise of the powers conferred by Clause (iii) of Sub-section (3) of Section 19 of the Road Transport Corporation Act, 1950 (Central Act 64 of 1950) the Government of Karnataka hereby accords previous approval to the Bangalore Metropolitan Transport Corporation to sell or supply to any person lubricants, spare parts or equipments for or accessories to vehicles as a retail outlet.

By Order and in the name of the Governor of Karnataka,

PR-215

**B. VASUDEVA**

Under Secretary to Government, Transport Department.

## ಕಾನೂನು ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಲಾ 18 ಎಲ್ಎಜಿ 2004, ಬೆಂಗಳೂರು, ದಿನಾಂಕ: 25ನೇ ಜೂನ್ 2005

ಶ್ರೀ ಎ.ಜಿ. ಮಾಲದಾರ, ವಕೀಲರು ಇವರನ್ನು ಕರ್ನಾಟಕ ಲಾ ಆಫೀಸರ್ಸ್ (ಅಪಾಯಿಂಟ್‌ಮೆಂಟ್ ಅಂಡ್ ಸರ್ವೀಸ್ ಕಂಡಿಷನ್ಸ್ ನಿಯಮಗಳ (1977) ರಲ್ಲಿನ ಷರತ್ತುಗಳಿಗೊಳಪಟ್ಟು ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಗದಗ್ ಜಿಲ್ಲೆ ಅಪರ ಸರ್ಕಾರಿ ವಕೀಲರನ್ನಾಗಿ ಸರ್ಕಾರ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**

ಪಿ.ಆರ್. 216

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ)

ಕಾನೂನು ಇಲಾಖೆ (ಆಡಳಿತ-1)

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಸಂವ್ಯಶಾಇ 1 ರಾಶಾಪ್ರ 2005, ಬೆಂಗಳೂರು, ದಿನಾಂಕ: 16ನೇ ಜುಲೈ 2005

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲ್ಯಾಂಗೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ರಾಜ್ಯಪತ್ರದಲ್ಲಿ ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959

## ಪ್ರಕರಣಗಳ ಅನುಕ್ರಮಣಿಕೆ

## ಅಧ್ಯಾಯ- IV
## ಸಹಕಾರ ಸಂಘಗಳ ವ್ಯವಸ್ಥಾಪನೆ

26. ಸಹಕಾರ ಸಂಘದಲ್ಲಿ ಅಂತಿಮ ಅಧಿಕಾರ
26ಎ. ಸಹಕಾರ ಸಂಘಗಳ ಪಾಲುಗಾರಿಕೆ
26ಬಿ. ಸಹಕಾರ ಸಂಘಗಳಿಂದ ಸಹೋದ್ಯಮ
27. ವಾರ್ಷಿಕ ಮಹಾ ಸಭೆ
28. ವಿಶೇಷ ಮಹಾ ಸಭೆ
28ಎ. ಸಹಕಾರ ಸಂಘಗಳ ವ್ಯವಸ್ಥಾಪನೆಯು ಸಮಿತಿಯಲ್ಲಿ ನಿಹಿತವಾಗಿರುವುದು
28ಬಿ. ಸಮಿತಿಯು ಚುನಾವಣೆಗೆ ವ್ಯವಸ್ಥೆ ಮಾಡಬೇಕು.
29. ನೆರವು ಪಡೆದ ಸಹಕಾರ ಸಂಘದ ಸಮಿತಿಯಲ್ಲಿ ಸರ್ಕಾರದ ನಾಮನಿರ್ದೇಶಿತರು
29ಎ. ಪದಾವಧಿಯ ಪ್ರಾರಂಭ
29ಬಿ. ಸದಸ್ಯನ ರಾಜೀನಾಮೆ
29ಸಿ. ಸಮಿತಿಯ ಸದಸ್ಯತ್ವಕ್ಕೆ ಅನರ್ಹತೆಗಳು
29ಡಿ. [ಬಿಟ್ಟುಬಿಡಲಾಗಿದೆ]
29ಇ. ಸಮಿತಿಯ ಸದಸ್ಯರ ಪದದಲ್ಲಿ ಉಂಟಾಗುವ ಆಕಸ್ಮಿಕ ಖಾಲಿ ಸ್ಥಾನವನ್ನು ಭರ್ತಿ ಮಾಡುವುದು.
29ಎಫ್. ಅಧ್ಯಕ್ಷ, ಸಭಾಧ್ಯಕ್ಷ, ಉಪಾಧ್ಯಕ್ಷ ಅಥವಾ ಉಪ ಸಭಾಧ್ಯಕ್ಷ ಮುಂತಾದವರ ಚುನಾವಣೆ
29ಜಿ. ಮುಖ್ಯ ಕಾರ್ಯನಿರ್ವಾಹಕನ ನೇಮಕ
30. ಸಮಿತಿಯ ರದ್ದಿಯಾತಿ
30ಎ. [ಬಿಟ್ಟುಬಿಡಲಾಗಿದೆ]
30ಬಿ. ಸಾರ್ವಜನಿಕ ಹಿತದೃಷ್ಟಿಯಿಂದ ನಿರ್ದೇಶನ ನೀಡಲು ಅಧಿಕಾರ
31. ವಿಶೇಷಾಧಿಕಾರಿಯ ನೇಮಕಾತಿ
31ಎ. ಸಹಕಾರ ಸಂಘಗಳ ದಾಖಲೆಗಳು ಮತ್ತು ಸ್ವತ್ತುಗಳ ಸ್ವಾಧೀನತೆಯನ್ನು ಒಪ್ಪಿಸುವುದು

## ಅಧ್ಯಾಯ -V
## ಸಹಕಾರ ಸಂಘಗಳ ವಿಶೇಷಾಧಿಕಾರಗಳು

32. ಕೆಲವು ಸ್ವತ್ತುಗಳ ಮೇಲೆ ಸಹಕಾರ ಸಂಘದ ಪ್ರಥಮ ಭಾರ
33. ಕೆಲವು ಸಹಕಾರ ಸಂಘಗಳಿಂದ ಸಾಲ ಪಡೆದ ಸದಸ್ಯರ ಒಡೆತನದಲ್ಲಿರುವ ಅಥವಾ ಸದಸ್ಯರು ಗೇಣಿದಾರರಾಗಿ ಧಾರಣ ಮಾಡಿರುವ ಭೂಮಿಗಳ ಮೇಲಣ ಭಾರ
34. ಕೆಲವು ಸಂದರ್ಭಗಳಲ್ಲಿ ಸಂಘದ ಕ್ಲೇಮನ್ನು ವೇತನದಿಂದ ಕಳೆದುಕೊಳ್ಳುವುದು
35. ಸಹಕಾರ ಸಂಘದ ಷೇರುಗಳ ಅಥವಾ ಬಂಡವಾಳದಲ್ಲಿ ಸದಸ್ಯರ ಹಿತಾಸಕ್ತಿಯ ಸಂಬಂಧದಲ್ಲಿ ಭಾರ ಮತ್ತು ವಜಾವಟ್ಟು
36. ಷೇರುಗಳು ಅಥವಾ ಹಿತಾಸಕ್ತಿಗಳು ಜಪ್ತಿಗೆ ಒಳಪಡತಕ್ಕುದಲ್ಲ
37. ಕೆಲವು ತೆರಿಗೆಗಳು, ಸುಂಕಗಳು ಮತ್ತು ಫೀಜುಗಳಿಂದ ವಿನಾಯಿತಿ
38. ಕಡ್ಡಾಯ ನೋಂದಣಿಯಿಂದ ಲಿಖಿತಗಳ ವಿನಾಯಿತಿ
39. ಸಹಕಾರ ಸಂಘಗಳ ಪರವಾಗಿ ಬರೆದುಕೊಡಲಾದ ದಸ್ತಾವೇಜುಗಳ ನೋಂದಣಿ

## ಅಧ್ಯಾಯ -Vಎ
## ಸಹಕಾರ ಸಂಘಗಳ ಸಮಿತಿಗಳ ಸದಸ್ಯರ ಚುನಾವಣೆ

39ಎ. ಚುನಾವಣೆಗಳನ್ನು ನಡೆಸುವುದು
39ಬಿ. ಚುನಾವಣೆಗಳನ್ನು ನಿರ್ವಹಿಸುವುದಕ್ಕಾಗಿ ವೆಚ್ಚ
39ಸಿ. ಭ್ರಷ್ಟ ಆಚಾರಗಳು
39ಡಿ. ಮತದಾನದ ರಹಸ್ಯವನ್ನು ಕಾಪಾಡುವುದು
39ಇ. ಅಧಿಕಾರಿಗಳು ಮುಂತಾದವರು ಚುನಾವಣೆಯಲ್ಲಿ ಅಭ್ಯರ್ಥಿಗಳ ಪರವಾಗಿ ಕೆಲಸ ಮಾಡತಕ್ಕುದಲ್ಲ ಅಥವಾ ಅವರ ಪರವಾಗಿ ಮತದಾನದ ಬಗ್ಗೆ ಪ್ರಭಾವ ಬೀರತಕ್ಕುದಲ್ಲ.
39ಎಫ್. ಮತದಾನ ಕೇಂದ್ರದ ಒಳಗೆ ಅಥವಾ ಅದರ ಸಮೀಪ ಮತ ಕೋರುವುದನ್ನು ನಿಷೇಧಿಸುವುದು
39ಜಿ. ಮತದಾನ ಕೇಂದ್ರದ ಒಳಗೆ ಅಥವಾ ಅದರ ಸಮೀಪ ಉಪದ್ರವಕಾರಿ ವರ್ತನೆಗಾಗಿ ದಂಡ
39ಎಚ್. ಮತದಾನ ಕೇಂದ್ರದಲ್ಲಿ ದುರ್ನಡತೆಗಾಗಿ ದಂಡ
39ಐ. ಚುನಾವಣೆ ಸಂಬಂಧದಲ್ಲಿ ಅಧಿಕೃತ ಕರ್ತವ್ಯಗಳ ಉಲ್ಲಂಘನೆಗಳು
39ಜೆ. ಮತದಾನ ಕೇಂದ್ರದಿಂದ ಮತ ಪತ್ರಗಳನ್ನು ತೆಗೆದುಕೊಂಡು ಹೋಗುವುದು ಒಂದು ಅಪರಾಧ
39ಕೆ. ಇತರ ಅಪರಾಧಗಳು ಮತ್ತು ದಂಡಗಳು

## ಅಧ್ಯಾಯ-VI
## ಸಹಕಾರ ಸಂಘಗಳಿಗೆ ರಾಜ್ಯದ ನೆರವು

40. ಸಹಕಾರ ಚಳುವಳಿಯ ಪ್ರವರ್ಧನೆ
41. ಸಹಕಾರ ಸಂಘಗಳಲ್ಲಿ ರಾಜ್ಯ ಸರ್ಕಾರದ ಪ್ರತ್ಯಕ್ಷ ಪಾಲುಗಾರಿಕೆ
42. ಸಹಕಾರ ಸಂಘಗಳಲ್ಲಿ ರಾಜ್ಯಸರ್ಕಾರದ ಪರೋಕ್ಷ ಪಾಲುಗಾರಿಕೆ

43. ಮುಖ್ಯ ರಾಜ್ಯ ಪಾಲುಗಾರಿಕೆ ನಿಧಿ
44. ರಾಜ್ಯ ಪಾಲುಗಾರಿಕೆ ಉಪನಿಧಿ
45. ಷೇರುಗಳನ್ನು ಖರೀದಿಸಲು ರಾಜ್ಯ ಸರ್ಕಾರದ ಅನುಮೋದನೆ
46. ಕೆಲವು ಷೇರುಗಳ ಸಂಬಂಧದಲ್ಲಿ ಹೊಣೆಗಾರಿಕೆಯನ್ನು ಪರಿಮಿತ ಗೊಳಿಸುವುದು
47. ಲಾಭಾಂಶದ ಮೊಬಲಗಿನ ಮೇಲೆ ನಿರ್ಬಂಧ
48. ಅಪೆಕ್ಸ್ ಮತ್ತು ಕೇಂದ್ರ ಸಂಘಗಳಿಗೆ ನಷ್ಟಭರ್ತಿ
49. ಷೇರು ಬಂಡವಾಳ ಮತ್ತು ಲಾಭಾಂಶ ಮೊದಲಾದವುಗಳ ವಿಲೆ
50. ಅಪೆಕ್ಸ್ ಅಥವಾ ಕೇಂದ್ರ ಸಂಘದ ಸಮಾಪನದ ತರುವಾಯ 'ಮುಖ್ಯ ರಾಜ್ಯ ಪಾಲುಗಾರಿಕೆ ನಿಧಿ'ಯ ಮತ್ತು 'ರಾಜ್ಯ ಪಾಲುಗಾರಿಕೆ ಉಪನಿಧಿ'ಯ ವಿಲೆ
51. ಮುಖ್ಯ ರಾಜ್ಯಪಾಲುಗಾರಿಕೆ ನಿಧಿಯು ಮತ್ತು ರಾಜ್ಯ ಪಾಲುಗಾರಿಕೆ ಉಪನಿಧಿಯು ಆಸ್ತಿಗಳ ಭಾಗವಾಗದಿರುವುದು
52. ರಾಜ್ಯ ಸರ್ಕಾರ ಮತ್ತು ಅಪೆಕ್ಸ್ ಸಂಘಗಳು ಮಾಡಿಕೊಳ್ಳುವ ಒಪ್ಪಂದ
53. ಸಹಕಾರ ಸಂಘಗಳಿಗೆ ನೀಡಲಾಗುವ ರಾಜ್ಯ ನೆರವಿನ ಇತರ ಪ್ರಕಾರಗಳು
53ಎ. ಕೆಲವೊಂದು ಸಂದರ್ಭಗಳಲ್ಲಿ ರಾಜ್ಯಸರ್ಕಾರವು ಸಮಿತಿಯ ಸದಸ್ಯರನ್ನು ನಾಮನಿರ್ದೇಶನ ಮಾಡುವುದು
54. ನೆರವು ನೀಡಲಾದ ಸಂಘದ ನಿಯಂತ್ರಣ
55. ಈ ಅಧ್ಯಾಯದ ಉಪಬಂಧಗಳು ಇತರ ಕಾನೂನುಗಳ ಮೇಲೆ ಅಧ್ಯಾರೋಹಿಯಾಗಿರುವುದು.

## ಅಧ್ಯಾಯ-VII
## ಸಹಕಾರ ಸಂಘಗಳ ಸ್ವತ್ತುಗಳು ಮತ್ತು ನಿಧಿಗಳು

56. ನಿಧಿಗಳನ್ನು ವಿಭಾಗಿಸದಿರುವುದು
57. ನಿವ್ವಳ ಲಾಭಗಳು ಮತ್ತು ಅವುಗಳ ವಿಲೆ
58. ನಿಧಿಗಳ ಹೂಡಿಕೆ
59. ಸಾಲಗಳ ಮೇಲೆ ನಿರ್ಬಂಧಗಳು
60. ಸಾಲಗಳ ಮೇಲೆ ನಿರ್ಬಂಧಗಳು
61. ಸದಸ್ಯರಲ್ಲದ ಇತರರೊಡನೆ ನಡೆಸುವ ಇತರ ವ್ಯವಹಾರಗಳ ಮೇಲೆ ನಿರ್ಬಂಧ
62. ಭವಿಷ್ಯ ನಿಧಿ

## ಅಧ್ಯಾಯ-VIII
## ಲೆಕ್ಕಪರಿಶೋಧನೆ, ವಿಚಾರಣೆ, ಪರಿಶೀಲನೆ ಮತ್ತು ಅಧಿಭಾರ

63. ಲೆಕ್ಕ ಪರಿಶೋಧನೆ
64. ರಿಜಿಸ್ಟ್ರಾರನಿಂದ ವಿಚಾರಣೆ
65. ಸಹಕಾರ ಸಂಘದ ಪುಸ್ತಕಗಳ ಪರಿಶೀಲನೆ
65ಎ. ವಿಚಾರಣೆ ಹಾಗೂ ಪರಿಶೀಲನೆ ವರದಿಯನ್ನು ಮತ್ತು ಅಂತಿಮ ವರದಿಯನ್ನು ಪತ್ತಿನ ಏಜೆನ್ಸಿಗೆ ಒದಗಿಸತಕ್ಕುದು
65ಬಿ. ಪತ್ತಿನ ಏಜೆನ್ಸಿಯಿಂದ ಸಹಕಾರ ಸಂಘದ ಪುಸ್ತಕಗಳ ಪರಿಶೀಲನೆ
66. ಪುಸ್ತಕಗಳನ್ನು ಮತ್ತು ಸ್ವತ್ತನ್ನು ವಶಪಡಿಸಿಕೊಳ್ಳುವ ಅಧಿಕಾರ
67. ವಿಚಾರಣೆಯ ವೆಚ್ಚಗಳು
68. ರಿಜಿಸ್ಟ್ರಾರನ ಆದೇಶ
69. ಅಧಿಭಾರ

## ಅಧ್ಯಾಯ-IX
## ವಿವಾದಗಳ ಇತ್ಯರ್ಥ

70. ತೀರ್ಮಾನಕ್ಕಾಗಿ ರಿಜಿಸ್ಟ್ರಾರನಿಗೆ ಉಲ್ಲೇಖಿಸಬಹುದಾದ ವಿವಾದಗಳು
70ಎ. ಕಾಲಪರಿಮಿತಿಯ ಅವಧಿ
71. ವಿವಾದಗಳ ವಿಲೆ
71ಎ. ಹಣಕಾಸು ನೀಡಿಕೆ ಬ್ಯಾಂಕಿಗೆ ಯಾವೊಂದು ಸಹಕಾರ ಸಂಘದಿಂದ ಬರಬೇಕಾದ ಹಣಗಳ ವಸೂಲಿಗಾಗಿ ಅಂಥ ಸಂಘದ ಸದಸ್ಯರ ವಿರುದ್ಧ ವ್ಯವಹರಣೆ ನಡೆಸಲು ಆ ಹಣಕಾಸು ನೀಡಿಕೆ ಬ್ಯಾಂಕಿನ ಅಧಿಕಾರ
71ಬಿ. ಪತ್ತಿನ ಏಜೆನ್ಸಿಗೆ ಸಹಕಾರ ಸಂಘದಿಂದ ಬಾಕಿ ಇರುವ ಹಣದ ವಸೂಲಿಗಾಗಿ ಏಜೆನ್ಸಿಯು ಅಂಥ ಸಂಘದ ಸದಸ್ಯರ ವಿರುದ್ಧ ಕ್ರಮ ಕೈಗೊಳ್ಳಲು ಆ ಪತ್ತಿನ ಏಜೆನ್ಸಿಯ ಅಧಿಕಾರಗಳು

## ಅಧ್ಯಾಯ-X
## ಸಹಕಾರ ಸಂಘಗಳ ಸಮಾಪನ ಮತ್ತು ವಿಸರ್ಜನೆ

72. ಸಹಕಾರ ಸಂಘಗಳ ಸಮಾಪನ
72ಎ. ರಿಸರ್ವ್ ಬ್ಯಾಂಕು ಯಾವೊಂದು ಸಹಕಾರಿ ಬ್ಯಾಂಕನ್ನು ಸಮಾಪನ ಗೊಳಿಸಬೇಕೆಂದು ಅಗತ್ಯಪಡಿಸುವಲ್ಲಿ ಹಾಗೆ ಮಾಡುವುದು
72ಬಿ. ಸಮಾಪಕರು ಠೇವಣಿ ವಿಮಾ ನಿಗಮಕ್ಕೆ ಹಣ ತುಂಬಿಕೊಡುವುದು
73. ಸಮಾಪಕ
74. ಸಮಾಪಕನ ಅಧಿಕಾರಗಳು
75. ಸಹಕಾರ ಸಂಘದ ನೋಂದಣಿಯ ರದ್ದಿಯಾತಿ

## ಅಧ್ಯಾಯ-XI
## ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು

76. ಪರಿಭಾಷೆಗಳು
76ಎ. ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳಿಗೆ ಈ ಅಧ್ಯಾಯದ ಅನ್ವಯ
76ಬಿ. ರಾಜ್ಯದ ಮತ್ತು ಇತರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು
77. ನ್ಯಾಸಧಾರಿಯ ನೇಮಕಾತಿ ಮತ್ತು ಅವನ ಅಧಿಕಾರಗಳು ಮತ್ತು ಪ್ರಕಾರ್ಯಗಳು
78. ನ್ಯಾಸಧಾರಿಯು ಏಕೈಕ ನಿಗಮವಾಗಿರುವುದು
79. ಡಿಬೆಂಚರುಗಳ ನೀಡಿಕೆ
80. ಕೆಲವೊಂದು ಸ್ವತ್ತುಗಳ ಮೇಲೆ ಡಿಬೆಂಚರು ಧಾರಕರ ಭಾರ
81. ಡಿಬೆಂಚರುಗಳ ಅಸಲು ಮತ್ತು ಅದರ ಮೇಲಣ ಬಡ್ಡಿಗೆ ರಾಜ್ಯಸರ್ಕಾರದ ಖಾತರಿ
82. ರಾಜ್ಯಸರ್ಕಾರದಿಂದ ಇತರ ಖಾತರಿಗಳು
82ಎ. ಸಾಲಗಳನ್ನು ನೀಡಲು ಮತ್ತು ಭೂಮಿಗಳನ್ನು ಧಾರಣ ಮಾಡಲು ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳ ಅಧಿಕಾರಗಳು
82ಬಿ. ಸಾಲಗಳ ಅರ್ಜಿಗಳನ್ನು ವ್ಯವಹರಿಸುವ ವಿಧಾನ
82ಸಿ. ಸಾಲ ಮಂಜೂರು ಮಾಡಿದ ಆದೇಶವು ಕೆಲವು ವಿಷಯಗಳಲ್ಲಿ ನಿರ್ಣಾಯಕವಾಗಿರುವುದು
83. ಕೆಲವು ಕ್ಲೇಮುಗಳ ಮೇಲೆ ಅಡಮಾನದ ಆದ್ಯತೆ
84. ಅಡಮಾನ ಮಾಡಲಾದ ಸ್ವತ್ತನ್ನು ಖರೀದಿಸಲು ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಅಥವಾ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಹಕ್ಕು
85. ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಹೆಸರಿಗೆ ಬರೆದುಕೊಟ್ಟ ಅಡಮಾನಗಳು ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನಲ್ಲಿ ನಿಹಿತವಾಗಿರುವುದು
85ಎ. ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಹೆಸರಿಗೆ ಅಡಮಾನ ಅಥವಾ ಗುತ್ತಿಗೆಯ ನೋಂದಣಿ
86. ಹಣಗಳನ್ನು ಸ್ವೀಕರಿಸಲು ಮತ್ತು ವಿಮೋಚನೆ ನೀಡಲು ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಅಧಿಕಾರ
86ಎ. ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳಿಂದ ಸಾಲಗಳ ವಸೂಲಿ
87. ಅಡಮಾನಕಾರನ ಮುಂಚಿನ ಋಣಗಳನ್ನು ಸಂದಾಯಮಾಡಲು ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಅಧಿಕಾರ
87ಎ. ಏಕತ್ರ ಹಿಂದೂ ಕುಟುಂಬದ ವ್ಯವಸ್ಥಾಪಕರು ಬರೆದುಕೊಟ್ಟ ಅಡಮಾನಗಳು
87ಬಿ. ಗುತ್ತಿಗೆಯ ಮೇಲಣ ನಿರ್ಬಂಧಗಳು
88. ಜಫ್ತಿ - ಯಾವಾಗ ಮಾಡುವುದು
89. ಮಾರಾಟದ ಅಧಿಕಾರವನ್ನು ಯಾವಾಗ ಚಲಾಯಿಸುವುದು
89ಎ. ಮಾರಾಟದ ಸ್ಥಿರೀಕರಣ
89ಬಿ. ಮಾರಾಟದ ಉತ್ಪತ್ತಿಯ ವಿಲೆ
89ಸಿ. ಖರೀದಿಸುವುದು, ಸ್ವತ್ತನ್ನು ಒಪ್ಪಿಸುವುದು ಮತ್ತು ಖರೀದಿದಾರನ ಹಕ್ಕಿಗೆ ಸಂಬಂಧಿಸಿದ ಪ್ರಮಾಣಪತ್ರ
89ಡಿ. ರಿಜಿಸ್ಟ್ರಾರನು ಕೊಟ್ಟ ಪ್ರಮಾಣಪತ್ರದ ಮೇಲೆ ಸಾಲಗಳ ವಸೂಲಿ
89ಇ. ಕೆಲವೊಂದು ಅವಧಿಯಲ್ಲಿ ಡೆಪ್ಯುಟಿ ಕಮಿಷನರನು ವಸೂಲಿ ಮಾಡುವುದು
89ಎಫ್. ಬ್ಯಾಂಕಿನ ಅಧಿಕಾರಿಗಳು ಮಾರಾಟಗಳಲ್ಲಿ ಸವಾಲು ಮಾಡಲಾಗದು
89ಜಿ. ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳ ಪರ ಆದ ಪರಭಾರೆಗೆ 1947ರ ಮುಂಬಯಿ 28ನೆಯ ಅಧಿನಿಯಮದ 40ನೆಯ ಪ್ರಕರಣವು ಅನ್ವಯಿಸತಕ್ಕುದಲ್ಲ.
89ಎಚ್. ಕೆಲವೊಂದು ನಷ್ಟಗಳನ್ನು ತುಂಬಲು ಆಶ್ವಾಸನಾ ನಿಧಿಗಳ ಏರ್ಪಾಡು
90. ಅಡಮಾನದ ಸ್ವತ್ತು ನಾಶವಾದಾಗ ಅಥವಾ ಭದ್ರತೆಯು ಸಾಕಾಗದಷ್ಟು ಆದಾಗ ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಅಧಿಕಾರಗಳು
91. ಸ್ವತ್ತಿನ ಜಫ್ತಿ ಮತ್ತು ಮಾರಾಟ ಮೊದಲಾದುವುಗಳನ್ನು ಮಾಡಲು ಮಂಡಲಿಯ ಅಥವಾ ನ್ಯಾಸಧಾರಿಯ ಅಧಿಕಾರ
92. ಅಕ್ರಮ, ಮೊದಲಾದವುಗಳ ಕಾರಣದ ಮೇಲೆ ಖರೀದಿದಾರನ ಹಕ್ಕನ್ನು ಪ್ರಶ್ನಿಸತಕ್ಕುದಲ್ಲ.
93. ಅಡಮಾನದಾರನ ದಿವಾಳಿಯಿಂದಾಗಿ ಅಡಮಾನವು ಪ್ರಶ್ನಿಸತಕ್ಕುದಲ್ಲ.
94. ರಿಸೀವರನ ನಿಯುಕ್ತಿ ಮತ್ತು ಅಧಿಕಾರಗಳು
95. ಗುತ್ತಿಗೆಗೆ ಕೊಡಲು ಅಡಮಾನದಾರನ ಅಧಿಕಾರಗಳು
96. ಮಂಡಲಿಯು ಕೆಲವೊಂದು ಅಧಿಕಾರಗಳನ್ನು ಪ್ರತ್ಯಾಯೋಜಿಸುವುದು
97. ಸ್ವತ್ತು ವರ್ಗಾವಣೆ ಅಧಿನಿಯಮ, 1882ರ 102,103 ಮತ್ತು 104ನೇ ಪ್ರಕರಣಗಳು ಈ ಅಧ್ಯಾಯದ ಮೇರೆಗಿನ ನೋಟೀಸುಗಳಿಗೆ ಅನ್ವಯವಾಗುವುದು
98. ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳ ಮೇಲ್ವಿಚಾರಣೆ ಮಾಡಲು ಮತ್ತು ವಿನಿಯಮಗಳನ್ನು ರಚಿಸಲು ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಮಂಡಲಿಗೆ ಅಧಿಕಾರ

## ಅಧ್ಯಾಯ-XII
## ಐತೀರ್ಪುಗಳು, ಡಿಕ್ರಿಗಳು, ಆದೇಶಗಳು ಮತ್ತು ತೀರ್ಮಾನಗಳ ಅಮಲ್ಜಾರಿ

99. ಭಾರದ ಅಮಲ್ಜಾರಿ
100. ಸಂಘಗಳಿಗೆ ಬಾಕಿ ಇರುವ ಹಣಗಳ ವಸೂಲಿ
101. ಆದೇಶ, ಮುಂತಾದವುಗಳ ಜಾರಿ
101ಎ. ಪ್ರಮಾಣಪತ್ರ ಕೊಟ್ಟ ತರುವಾಯ ಮಾಡಲಾದ ಸ್ವತ್ತಿನ ವರ್ಗಾವಣೆಯು ಸಹಕಾರ ಸಂಘದ ವಿರುದ್ಧ ಶೂನ್ಯವಾಗಿರುವುದು

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

## I

**1959ರ ಅಧಿನಿಯಮ 11:-** ಭಾರತದ ರಿಜರ್ವ್ ಬ್ಯಾಂಕಿನಿಂದ ನೇಮಕವಾಗಿದ್ದ ಅಖಿಲ ಭಾರತ ಗ್ರಾಮೀಣ ಪತ್ತು ಸಮೀಕ್ಷಾ ನಿರ್ದೇಶಕರ ಸಮಿತಿಯ ವರದಿಯನ್ನು ಡಿಸೆಂಬರ್, 1954 ರಲ್ಲಿ ಪ್ರಕಟಿಸಲಾಯಿತು. 1955ರ ಏಪ್ರಿಲ್‌ನಲ್ಲಿ ನವದೆಹಲಿಯಲ್ಲಿ ನಡೆದ ರಾಜ್ಯಗಳ ಸಹಕಾರ ಸಚಿವರ ಪ್ರಥಮ ಸಮಾವೇಶದಲ್ಲಿ, ಗ್ರಾಮೀಣ ಪತ್ತು ಸಮೀಕ್ಷಾ ವರದಿಯಲ್ಲಿ ಒಳಗೊಂಡ ಶಿಫಾರಸುಗಳನ್ನು ಜಾರಿಗೆ ತರುವುದಕ್ಕಾಗಿ ಎರಡನೇ ಪಂಚವಾರ್ಷಿಕ ಯೋಜನೆಯ ಅಡಿಯಲ್ಲಿ ಸಹಕಾರ ಸಂಘಗಳ ಅಭಿವೃದ್ಧಿ ಪರಿಯೋಜನೆಗಳನ್ನು ರೂಪಿಸಬೇಕೆಂದು ತೀರ್ಮಾನಿಸಲಾಯಿತು. ವರದಿಯು, ಇತರ ವಿಷಯಗಳ ಜೊತೆಯಲ್ಲಿ ಸಹಕಾರ ಸಂಘಗಳಲ್ಲಿ ಹೆಚ್ಚುವರಿಯಾಗಿ ರಾಜ್ಯದ ಪಾಲುದಾರಿಕೆ ಇರಬೇಕೆಂದು ಮತ್ತು ಅವುಗಳ ನಿರ್ವಹಣೆಯಲ್ಲಿ ರಾಜ್ಯದ ಸಹಭಾಗಿತ್ವ ಇರಬೇಕೆಂದು ಶಿಫಾರಸು ಮಾಡಿದೆ. ಗ್ರಾಮೀಣ ಪತ್ತು ಸಮೀಕ್ಷಾ ವರದಿಯ ಶಿಫಾರಸುಗಳನ್ನು ಜಾರಿಗೆ ತರಲು ಮತ್ತು ಎರಡನೇ ಪಂಚವಾರ್ಷಿಕ ಯೋಜನೆಯ ಅಡಿಯಲ್ಲಿ ಸಹಕಾರಿ ಅಭಿವೃದ್ಧಿ ಪರಿಯೋಜನೆಗಳ ಅನುಷ್ಠಾನಕ್ಕೆ ಅವಕಾಶ ಕಲ್ಪಿಸಲು ಮತ್ತು ಸಹಕಾರ ಸಂಘಗಳಿಗೆ ಸಂಬಂಧಿಸಿದಂತೆ ಈಗಿನ ಕಾನೂನುಗಳನ್ನು ಸರಳಗೊಳಿಸಲು, ಸುವ್ಯವಸ್ಥೆಗೊಳಿಸಲು ಮತ್ತು ಆಧುನಿಕಗೊಳಿಸಲು, ಭಾರತ ಸರ್ಕಾರವು ಸಹಕಾರಿ ಕಾನೂನು ಕುರಿತಂತೆ ಒಂದು ಸಮಿತಿಯನ್ನು ನೇಮಕಮಾಡಿತು. ಸಮಿತಿಯು, ಗ್ರಾಮೀಣ ಪತ್ತಿನ ಸಮೀಕ್ಷಾ ವರದಿಯ ಶಿಫಾರಸುಗಳನ್ನು ಅನುಷ್ಠಾನಗೊಳಿಸಲು ಮತ್ತು ಎರಡನೇ ಪಂಚವಾರ್ಷಿಕ ಯೋಜನೆಯ ಅಡಿಯಲ್ಲಿ ಸಹಕಾರಿ ಅಭಿವೃದ್ಧಿ ಪರಿಯೋಜನೆಗಳನ್ನು ಅನುಷ್ಠಾನಗೊಳಿಸಲು ಎಲ್ಲಾ ರಾಜ್ಯಗಳಲ್ಲಿನ ಸಹಕಾರ ಸಂಘಗಳ ಅಧಿನಿಯಮ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳನ್ನು ಪುನರವಲೋಕಿಸುವುದು ಅಗತ್ಯವಿದೆ ಎಂದು ಅಭಿಪ್ರಾಯಪಟ್ಟಿತು. ಅಲ್ಲದೆ, ರಾಜ್ಯಗಳ ಪುನರ್‌ವಿಂಗಡಣೆಯು, ಬೇರೆ ಬೇರೆ ಅಧಿನಿಯಮಗಳು ಮತ್ತು ನಿಯಮಗಳು ಜಾರಿಯಲ್ಲಿರುವ ಕ್ಷೇತ್ರಗಳನ್ನು ಒಟ್ಟುಗೂಡಿಸಿವೆ. ಇಂಥ ಸಂದರ್ಭಗಳಲ್ಲಿ, ಇಡೀ ದೇಶದಲ್ಲಿ ಸಹಕಾರ ಸಂಘಗಳಿಗೆ ಸಂಬಂಧಿಸಿದ ಶಾಸನದಲ್ಲಿ ಸಾಧ್ಯವಾದಷ್ಟು ಪ್ರಮಾಣದಲ್ಲಿ ಏಕರೂಪತೆ ತರುವ ದೃಷ್ಟಿಯಿಂದ, ಬೇರೆ ಬೇರೆ ರಾಜ್ಯಗಳಲ್ಲಿ ಜಾರಿಯಲ್ಲಿರುವ ಸಹಕಾರ ಸಂಘಗಳ ಅಧಿನಿಯಮವನ್ನು ಪರಿಷ್ಕರಿಸುವುದಕ್ಕೆ ಇದು ಸಕಾಲವಾಗಿದೆ ಎಂದು ಸಮಿತಿಯು ಅಭಿಪ್ರಾಯಪಟ್ಟಿದೆ. ಈ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಸಮಿತಿಯು, ಮಾದರಿ ಸಹಕಾರ ಸಂಘಗಳ ವಿಧೇಯಕ ಮತ್ತು ಮಾದರಿ ನಿಯಮಗಳನ್ನು ಸಿದ್ಧಪಡಿಸಿ, ಅವುಗಳನ್ನು ಅಧಿನಿಯಮಿತಿಗೊಳಿಸಲು ಮತ್ತು ಅಳವಡಿಸಿಕೊಳ್ಳಲು ರಾಜ್ಯ ಸರ್ಕಾರಗಳಿಗೆ ಶಿಫಾರಸು ಮಾಡಿದೆ. ಪ್ರಸ್ತುತ, ಐದು ವಿವಿಧ ಸಹಕಾರ ಸಂಘಗಳ ಅಧಿನಿಯಮಗಳು ಕರ್ನಾಟಕ ರಾಜ್ಯದ ವಿವಿಧ ಭಾಗಗಳಲ್ಲಿ ಜಾರಿಯಲ್ಲಿದ್ದು, ಇದು ಆಡಳಿತಾತ್ಮಕ ಅನಾನುಕೂಲತೆಗೆ ಕಾರಣವಾಗಿದೆ. ಇಡೀ ರಾಜ್ಯಕ್ಕೆ ಅನ್ವಯವಾಗುವಂತೆ ಏಕರೂಪದ ಸಹಕಾರ ಸಂಘಗಳ ಕಾನೂನನ್ನು ರಚಿಸುವುದು ಅವಶ್ಯಕವಾಗಿದೆ.

ಆದ್ದರಿಂದ, ಸರ್ಕಾರವು ಪ್ರಸ್ತುತ ವಿಧೇಯಕವನ್ನು ಮಂಡಿಸಲು ನಿರ್ಧರಿಸಿದೆ. ಭಾರತ ಸರ್ಕಾರವು ನೇಮಕಮಾಡಿದ್ದ ಸಹಕಾರಿ ಕಾನೂನು ಕುರಿತ ಸಮಿತಿಯು ಶಿಫಾರಸು ಮಾಡಿದ ಮಾದರಿ ಸಹಕಾರ ಸಂಘಗಳ ವಿಧೇಯಕವನ್ನು ಗಣನೆಗೆ ತೆಗೆದುಕೊಂಡು ವಿಧೇಯಕವನ್ನು ಸಿದ್ಧಪಡಿಸಲಾಗಿದೆ.

ಸಹಕಾರ ಸಂಘಗಳಲ್ಲಿ ರಾಜ್ಯದ ಪಾಲುಗಾರಿಕೆ ಇರಬೇಕೆಂಬ ಮತ್ತು ಅವುಗಳ ನಿರ್ವಹಣೆಯಲ್ಲಿ ರಾಜ್ಯದ ಸಹಭಾಗಿತ್ವ ಇರಬೇಕೆಂಬ ತತ್ವವನ್ನು ಒಪ್ಪಿಕೊಳ್ಳಲಾಗಿದೆ ಮತ್ತು ಅದನ್ನು ಈ ವಿಧೇಯಕದ ಸಂಬಂಧಪಟ್ಟ ಉಪಬಂಧಗಳಲ್ಲಿ ಸೇರಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 10ನೇ ಏಪ್ರಿಲ್, 1958ರ ಪುಟ 1 ರಲ್ಲಿ ಸಂಖ್ಯೆ 21 ಎಂದು ಪ್ರಕಟಿಸಲಾಗಿದೆ.)

## II

**1964ರ ತಿದ್ದುಪಡಿ ಮಾಡುವ ಅಧಿನಿಯಮ 40:-** 1960ರ ಜುಲೈ ಒಂದರಿಂದ ಜಾರಿಗೆ ತರಲಾಗಿದ್ದ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959 ಇದರ ಕಾರ್ಯನಿರ್ವಹಣಾ ಅವಧಿಯಲ್ಲಿ, ಅಧಿನಿಯಮದ ತ್ವರಿತ ಅನುಷ್ಠಾನಕ್ಕಾಗಿ ಕೆಲವೊಂದು ತಿದ್ದುಪಡಿಗಳನ್ನು ತರುವುದು ಅಗತ್ಯವಿದೆಯೆಂದು ಕಂಡುಬಂದಿದೆ. ತಕಾವಿ ಸಾಲಗಳ ಅಡಿಯಲ್ಲಿ ಮಾಡಿದ ಹಣದ ಏರ್ಪಾಟಿನಿಂದ ಅಥವಾ ಭಾರತದ ಕೃಷಿ ಪುನರ್‌ಧನ ನಿಗಮದಿಂದ ಸಾಲ ಪಡೆದ ನಿಧಿಗಳಿಂದ ಅಥವಾ ಬ್ಯಾಂಕು ಸ್ವತಃ ಸಾಲಪಡೆದ ಡಿಬೆಂಚರುಗಳಿಂದ ನಿಧಿಗಳನ್ನು ದೊರಕಿಸಿಕೊಳ್ಳಬಹುದಾದ ಅಭಿವೃದ್ಧಿ ಚಟುವಟಿಕೆಗಳನ್ನು ಬ್ಯಾಂಕು ಶೀಘ್ರವಾಗಿ ಕೈಗೊಳ್ಳಲು ಸಾಧ್ಯವಾಗುವಂತೆ ಕರ್ನಾಟಕ ಕೇಂದ್ರ ಭೂ ಅಡಮಾನ ಬ್ಯಾಂಕ್ ನಿಗಮಿತಕ್ಕೆ ಸಂಬಂಧಪಟ್ಟ ಅಧ್ಯಾಯವನ್ನು ತಿದ್ದುಪಡಿ ಮಾಡುವುದು ಸಹ ಅವಶ್ಯವಾಗಿದೆ. ಆದ್ದರಿಂದ ಈ ತಿದ್ದುಪಡಿ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 18ನೇ ಜೂನ್, 1964ರ ಪುಟ 55 ರಲ್ಲಿ ಸಂಖ್ಯೆ:152 ಎಂದು ಪ್ರಕಟಿಸಲಾಗಿದೆ.)

## III

**1966ರ ತಿದ್ದುಪಡಿ ಮಾಡುವ ಅಧಿನಿಯಮ 27:- ಟಿಪ್ಪಣಿ:-** ಈ ಅಧಿನಿಯಮದ ಮೂಲಕ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ವಿನಿಯಮನ) ಅಧಿನಿಯಮ, 1966 (1966ರ ಕರ್ನಾಟಕ ಅಧಿನಿಯಮ, 27) ಅನ್ನು ಅಧಿನಿಯಮಿತಿಗೊಳಿಸಿದೆ. ಅದರಲ್ಲಿನ ಈ ಅಧಿನಿಯಮಕ್ಕೆ ಕೆಲವು ಪ್ರಾಸಂಗಿಕ ತಿದ್ದುಪಡಿಗಳನ್ನು ಮಾಡಲಾಗಿದೆ.

## IV

**1967ರ ತಿದ್ದುಪಡಿ ಮಾಡುವ ಅಧಿನಿಯಮ 16:-** ಸ್ಥಳೀಯ ಮಾರಾಟ ತೆರಿಗೆ ಕಾನೂನು ಅಡಿಯಲ್ಲಿ ಘೋಷಿತ ಸರಕಿಗೆ ಅನ್ವಯವಾಗುವ ತೆರಿಗೆ ದರಗಳ ಹೆಚ್ಚಳಕ್ಕೆ ಉಪಬಂಧ ಕಲ್ಪಿಸಲು ಸಂಸತ್ತು ಕೇಂದ್ರ ಮಾರಾಟ ತೆರಿಗೆ ಅಧಿನಿಯಮಕ್ಕೆ ತಿದ್ದುಪಡಿ ಮಾಡಿದ್ದರ ಪರಿಣಾಮವಾಗಿ, ಘೋಷಿತ ಸರಕುಗಳು ಮತ್ತು ಅವುಗಳಿಗೆ ಅನ್ವಯವಾಗುವ ತೆರಿಗೆ ದರಗಳನ್ನು ನಿರ್ದಿಷ್ಟಪಡಿಸುವ IXನೇ ಅನುಸೂಚಿಯನ್ನು ತಿದ್ದುಪಡಿ ಮಾಡುವುದು ಅವಶ್ಯಕವೆನಿಸಿದೆ. ಅದರಲ್ಲಿ ನಿರ್ದಿಷ್ಟಪಡಿಸಿದ ಘೋಷಿತ ಸರಕುಗಳಿಗೆ ಅನ್ವಯವಾಗುವ ತೆರಿಗೆ ದರಗಳನ್ನು ಅದಕ್ಕನುಸಾರವಾಗಿ ಈಗ ಹೆಚ್ಚಿಸಲಾಗುತ್ತದೆ.

ರಾಜ್ಯದಲ್ಲಿ ಕೈಗಾರಿಕೆಗಳ ಅಭಿವೃದ್ಧಿಯನ್ನು ಉತ್ತೇಜಿಸುವ ದೃಷ್ಟಿಯಿಂದ ಹೊಸ ಕೈಗಾರಿಕೆಗಳಿಗೆ ಕೆಲವು ರಿಯಾಯಿತಿಗಳನ್ನು ನೀಡುವ ಪ್ರಶ್ನೆಯು ಸರ್ಕಾರದ ಪರಿಶೀಲನೆಯಲ್ಲಿತ್ತು. ಹೊಸ ಕೈಗಾರಿಕೆಗಳಿಗೆ ಸಂಬಂಧಿಸಿದಂತೆ ಅವುಗಳಿಗೆ ಆರಂಭದ ಎರಡು ವರ್ಷಗಳ ಕಾಲ ಮಾರಾಟ ತೆರಿಗೆ ಸಂದಾಯದಿಂದ ವಿನಾಯಿತಿ ನೀಡಲು ಸರ್ಕಾರವು ಇತ್ತೀಚೆಗೆ ತೀರ್ಮಾನ ಕೈಗೊಂಡಿತು. ವಿನಾಯಿತಿಯನ್ನು ಯಾವ ರೀತಿಯಲ್ಲಿ ನೀಡಬೇಕೆಂಬುದನ್ನು ಪರಿಶೀಲಿಸಲಾಯಿತು ಮತ್ತು ಇದಕ್ಕೆ ಉತ್ತಮ ಮಾರ್ಗವೆಂದರೆ ಸಂದರ್ಭವು ಬಂದಾಗಲೆಲ್ಲಾ, ಕಾಲಕಾಲಕ್ಕೆ ಅಧಿಸೂಚನೆಗಳನ್ನು ಹೊರಡಿಸುವ ಮೂಲಕ ಇದನ್ನು ಉತ್ತಮ

ರೀತಿಯಲ್ಲಿ ಸಾಧಿಸಬಹುದೆಂದು ಯೋಚಿಸಲಾಯಿತು. ಅಂಥ ಅಧಿಸೂಚನೆಗಳನ್ನು ಹೊರಡಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುವ ಒಂದು ಉಪಬಂಧವು ಈ ಅಧಿನಿಯಮದಲ್ಲಿ ಇಲ್ಲದಿದ್ದುದರಿಂದ, ವಿನಾಯಿತಿಗಳನ್ನು ಮತ್ತು ತೆರಿಗೆ ದರಗಳ ಕಡಿತಗಳನ್ನು ಅಧಿಸೂಚಿಸಲು ಸರ್ಕಾರಕ್ಕೆ ಅಧಿಕಾರ ನೀಡುವ ಒಂದು ಉಪಬಂಧವನ್ನು ಸೇರಿಸಲು ಈಗ ಉದ್ದೇಶಿಸಲಾಗಿದೆ. ಅಂಥ ಒಂದು ಉಪಬಂಧವು ನೆರೆ ರಾಜ್ಯಗಳ ಮಾರಾಟ ತೆರಿಗೆ ಕಾನೂನುಗಳಲ್ಲಿಯೂ ಅಸ್ತಿತ್ವದಲ್ಲಿದೆ.

ಕಾರ್ಯವಿಧಾನ ವಿಷಯಗಳಿಗೆ ಸಂಬಂಧಿಸಿದಂತೆ ಮತ್ತು ಶಾವಿಗೆಗೆ ತೆರಿಗೆ ರಿಯಾಯಿತಿ ದರವನ್ನು ನೀಡುವುದಕ್ಕೆ ಮತ್ತು ಕಬ್ಬಿನ ಮೇಲಿನ ತೆರಿಗೆ ದರಗಳನ್ನು ಕಡಿತಗೊಳಿಸುವುದಕ್ಕೆ ಹಾಗೂ ಅಂಬರ್ ಚರಕಗಳು, ಹಾಸುಗಂಬಳಿಗಳು, ಡ್ಯೂರೀಜ್‌ಗಳು ಮತ್ತು ನೆಲಹಾಸುಗಳಿಗೆ ವಿನಾಯಿತಿ ನೀಡುವುದಕ್ಕೆ ಉಪಬಂಧ ಕಲ್ಪಿಸುವ ಸಲುವಾಗಿ ಕೆಲವು ಸಣ್ಣ ತಿದ್ದುಪಡಿಗಳನ್ನು ಮಾಡಲೂ ಸಹ ಈ ಸಂದರ್ಭವನ್ನು ಉಪಯೋಗಿಸಿಕೊಳ್ಳಲಾಗಿದೆ. Vನೇ ಅನುಸೂಚಿಯ 28ನೇ ಬಾಬಿನ ಅಡಿಯಲ್ಲಿ ವಾಸ್ತವಿಕ ಉತ್ಪಾದಕರಿಗೆ ನೀಡುವ ವಿನಾಯಿತಿಯ ಪ್ರಯೋಜನವನ್ನು ವಿಶೇಷವಾಗಿ ಗ್ರಾಮೀಣ ಕೈಗಾರಿಕೆಯ ಅಡಿಯಲ್ಲಿ ಸರಕುಗಳನ್ನು ಉತ್ಪಾದಿಸುವಂಥ ವ್ಯಕ್ತಿಗಳಿಗೆ ಮಾತ್ರವೇ ಸೀಮಿತಗೊಳಿಸಲು ಉದ್ದೇಶಿಸಲಾಗಿದೆ.

ಟಿಪ್ಪಣಿ:- ಈ ಅಧಿನಿಯಮದ ಮೂಲಕ 1959ರ ಅಧಿನಿಯಮ 11ಕ್ಕೆ ಕೆಲವೊಂದು ಪ್ರಾಸಂಗಿಕ ತಿದ್ದುಪಡಿಗಳನ್ನು ಮಾಡಲಾಗಿದೆ.

(1967ರ ವಿ.ಸ. ವಿಧೇಯಕ ಸಂಖ್ಯೆ: 35ರ ಪುಟ ಸಂಖ್ಯೆ 9 ಮತ್ತು 10 ರಿಂದ ಪಡೆಯಲಾಗಿದೆ.)

## V

**1972ರ ತಿದ್ದುಪಡಿ ಮಾಡುವ ಅಧಿನಿಯಮ 1:-** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ 101ನೇ ಪ್ರಕರಣದ (ಸಿ) ಖಂಡದ ಅನುಸಾರವಾಗಿ, ಈ ಅಧಿನಿಯಮದ ಅಡಿಯಲ್ಲಿ ಮಾಡಲಾದ ಒಂದು ಆದೇಶ, ನಿರ್ಣಯ ಮತ್ತು ಐತೀರ್ಪನ್ನು, ಯಾವ ವ್ಯಕ್ತಿಯ ವಿರುದ್ಧವಾಗಿ ಪಡೆಯಲಾಗಿದೆಯೋ ಅಥವಾ ಮಾಡಲಾಗಿದೆಯೋ ಆ ವ್ಯಕ್ತಿಯ ಅಥವಾ ಸಹಕಾರ ಸಂಘದ ಯಾವುದೇ ಸ್ವತ್ತನ್ನು ರಿಜಿಸ್ಟ್ರಾರ್ ಅಥವಾ ಅವನಿಗೆ ಅಧೀನನಾದ ಯಾರೇ ಇತರ ವ್ಯಕ್ತಿಯು ಜಪ್ತಿ ಮೂಲಕ ಅಥವಾ ಮಾರಾಟದ ಮೂಲಕ, ಆ ಆದೇಶ, ನಿರ್ಣಯ ಅಥವಾ ಐತೀರ್ಪನ್ನು ಜಾರಿಗೊಳಿಸಬಹುದು. ಈ ಉಪಬಂಧವನ್ನು ಜಾರಿಗೆ ತರುವ ಉದ್ದೇಶದಿಂದ ಅವಶ್ಯಕ ನಿಯಮಗಳನ್ನು ಮಾಡಲಾಗಿದೆ ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960ರ 41ನೇ ನಿಯಮವು ಅಮಲ್ಜಾರಿಯಲ್ಲಿ ಜಪ್ತಿ ಮಾಡಲಾದ ಸ್ವತ್ತಿನ ಕ್ಲೇಮುಗಳ ಬಗ್ಗೆ ತನಿಖೆ ಮಾಡಲು ಮಾರಾಟ ಅಧಿಕಾರಿಗೆ ಅಧಿಕಾರ ನೀಡುತ್ತದೆ. ಈ ಉಪಬಂಧಕ್ಕೆ ಅನುಸಾರವಾಗಿ ಅಂಥ ಕ್ಲೇಮುಗಳನ್ನು ಮಾರಾಟ ಅಧಿಕಾರಿಗಳು ತನಿಖೆ ಮಾಡುತ್ತಿದ್ದಾರೆ.

ಜ್ಯೋತಿಬಾ ಎಲ್ಲಪ್ಪಾ ವಿರುದ್ಧ ಹುಬ್ಬಳ್ಳಿ ಸಹಕಾರಿ ಹತ್ತಿ ಮಾರಾಟ ಸಂಘ, ನಿಯಮಿತದಲ್ಲಿ (1970 (2) ಮೈ.ಲಾ.ಜ. 344) ಮೈಸೂರು ಉಚ್ಚ ನ್ಯಾಯಾಲಯವು, ಸಹಕಾರ ಸಂಘಗಳ ನಿಯಮಗಳ 41ನೆಯ ನಿಯಮದ ಅಡಿಯಲ್ಲಿನ ಕಾರ್ಯವಿಧಾನವು ಅಧಿನಿಯಮದ 70ನೇ ಪ್ರಕರಣದ ಅಡಿಯಲ್ಲಿ ಮೂಲ ವ್ಯಾಜ್ಯದಲ್ಲಿ ಯುಕ್ತವಾಗಿ ಪಕ್ಷಕಾರರನ್ನಾಗಿ ಮಾಡಬಹುದಾದ ವ್ಯಕ್ತಿಗಳಿಗೆ ಅದರ ಕಾರ್ಯಾಚರಣೆಯಲ್ಲಿ ಸೀಮಿತವಾಗಿರುವುದೆಂದು ಮತ್ತು ಆ ಕಾರಣಕ್ಕಾಗಿ ಅದು ಐತೀರ್ಪಿನ ಅಮಲ್ಜಾರಿಯಲ್ಲಿ ಜಪ್ತಿ ಮತ್ತು ಮಾರಾಟಕ್ಕೆ ಪ್ರತಿಯಾಗಿ ಸದಸ್ಯರಲ್ಲದವರು ಮಾಡಿದ ಒಂದು ಕ್ಲೇಮಿನ ಬಗ್ಗೆ ನಿಯಮ 41ರ ಅಡಿಯಲ್ಲಿ ನ್ಯಾಯ ನಿರ್ಣಯ ಮಾಡಲಾಗದೆಂದು ನಿರ್ಣಯಿಸಿತು.

ಈ ನಿರ್ಣಯದ ದೃಷ್ಟಿಯಿಂದ, ಜಪ್ತಿ ಮಾಡಿದ ಸ್ವತ್ತಿನ ಬಗ್ಗೆ ಸದಸ್ಯರಲ್ಲದವರು ಕ್ಲೇಮುಗಳನ್ನು ಮಾಡಿದ್ದ ಆದೇಶಗಳು, ನಿರ್ಣಯಗಳು ಮತ್ತು ಐತೀರ್ಪುಗಳ ಅಮಲ್ಜಾರಿಯು ಅಸಿಂಧುವಾಗುತ್ತದೆ ಮತ್ತು ಪರಿಣಾಮರಹಿತವಾಗುತ್ತದೆ.

ಈ ನಿರ್ಣಯವು, ಆದೇಶಗಳ ಜಾರಿ, ನಿರ್ಣಯಗಳು ಮತ್ತು ಐತೀರ್ಪುಗಳ ದೃಷ್ಟಿಯಿಂದ ಜಪ್ತಿ ಮಾಡಿದ ಸ್ವತ್ತಿನ ಕ್ಲೇಮುಗಳನ್ನು ಸದಸ್ಯರಲ್ಲದವರು ಮಾಡಿದ್ದರೆ, ಅವು ಸಿಂಧುವಾಗುವುದಿಲ್ಲ ಮತ್ತು ಪರಿಣಾಮಕಾರಿಯಾಗುವುದಿಲ್ಲ. ಅಲ್ಲದೆ, ಜಪ್ತಿ ಮತ್ತು ಮಾರಾಟಕ್ಕೆ ಬದ್ಧವಾದ ಸ್ವತ್ತುಗಳಲ್ಲಿ ಸಂಘದ ಸದಸ್ಯರು ಹಿತಾಸಕ್ತಿ ಹೊಂದಿರುವ ಸಂದರ್ಭಗಳಲ್ಲಿ ಹೊರತು, ಆದೇಶಗಳು, ನಿರ್ಣಯಗಳು ಮತ್ತು ಐತೀರ್ಪುಗಳ ಅಮಲ್ಜಾರಿಯನ್ನು ಮುಂದುವರಿಸಲಾಗಲಿಲ್ಲ. ತತ್ಪರಿಣಾಮವಾಗಿ, ಸಹಕಾರ ಸಂಘಗಳು, ಸಹಕಾರ ಸಂಘಗಳ ನಿಯಮಗಳ ಅಡಿಯಲ್ಲಿ ವಸೂಲಾತಿಗಾಗಿ ಕ್ಷಿಪ್ರ ಕಾರ್ಯವಿಧಾನವನ್ನು ಅನುಸರಿಸಲಾಗಲಿಲ್ಲ.

ಆದ್ದರಿಂದ, ಆದೇಶಗಳು, ನಿರ್ಣಯಗಳು ಮತ್ತು ಐತೀರ್ಪುಗಳ ಅಮಲ್ಜಾರಿಯಲ್ಲಿ, ಜಪ್ತಿ ಮಾಡಿದ ಸ್ವತ್ತಿನ ಕ್ಲೇಮುಗಳ ಬಗ್ಗೆ ತನಿಖೆ ಮಾಡುವ ಅಧಿಕಾರಗಳನ್ನು ಚಲಾಯಿಸಲು ರಿಜಿಸ್ಟ್ರಾರ್ ಮತ್ತು ಅವನ ಅಧೀನನಿಗೆ ಅಧಿಕಾರ ನೀಡುವುದು ಅವಶ್ಯಕವಾಯಿತು.

ವಿಧಾನ ಮಂಡಲದ ಸದನಗಳು ಅಧಿವೇಶನದಲ್ಲಿ ಇಲ್ಲದಿದ್ದುದರಿಂದ ಮತ್ತು ವಿಷಯವು ತುರ್ತಿನದಾಗಿದ್ದುದರಿಂದ, ಅಧಿನಿಯಮದ 101ನೇ ಪ್ರಕರಣವನ್ನು ತಿದ್ದುಪಡಿ ಮಾಡಿ ಮತ್ತು ಈಗಾಗಲೇ ಕೈಗೊಂಡ ಕ್ರಮವನ್ನು ಸಿಂಧುಗೊಳಿಸಿ ಒಂದು ಅಧ್ಯಾದೇಶವನ್ನು ಪ್ರಖ್ಯಾಪಿಸಲಾಯಿತು. ರಾಜ್ಯ ವಿಧಾನ ಮಂಡಲದ ಅಧಿನಿಯಮದ ಮೂಲಕ ಅಧ್ಯಾದೇಶವನ್ನು ಪ್ರತಿಸ್ಥಾಪಿಸುವುದಕ್ಕೆ ಮೊದಲು, ಸಂವಿಧಾನದ 356ನೇ ಅನುಚ್ಛೇದದ ಅಡಿಯಲ್ಲಿ ದಿನಾಂಕ 1971ರ ಮಾರ್ಚ್ 27ರ ರಾಷ್ಟ್ರಪತಿಯ ಉದ್ಘೋಷಣೆಯ ಮೂಲಕ ರಾಜ್ಯ ವಿಧಾನ ಮಂಡಲವನ್ನು ಅಮಾನತ್ತಿನಲ್ಲಿಡಲಾಯಿತು. ಕರ್ನಾಟಕ ರಾಜ್ಯ ವಿಧಾನಮಂಡಲ (ಅಧಿಕಾರಗಳ ಪ್ರತ್ಯಾಯೋಜನೆ) ಅಧಿನಿಯಮ, 1971ರ ಅಡಿಯಲ್ಲಿ ಈ ವಿಧೇಯಕದ ಮೂಲಕ ಅಧ್ಯಾದೇಶವನ್ನು ಪ್ರತಿಸ್ಥಾಪಿಸಲು ಮತ್ತು ಅಧಿನಿಯಮಿತಗೊಳಿಸಲು ಉದ್ದೇಶಿಸಲಾಗಿದೆ.

ಕರ್ನಾಟಕಕ್ಕೆ ಸಂಬಂಧಿಸಿದ ರಾಜ್ಯ ವಿಧಾನ ಮಂಡಲದ ಸಮಾಲೋಚನಾ ಸಮಿತಿಯು 1971ರ ಡಿಸೆಂಬರ್ 7ರ ತನ್ನ ಎರಡನೇ ಸಭೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ವಿಧೇಯಕ, 1972ನ್ನು ಪರಿಗಣಿಸಿತು ಮತ್ತು ತನ್ನ ಅನುಮೋದನೆಯನ್ನು ನೀಡಿತು.

(1972ರ ರಾಷ್ಟ್ರಪತಿಯವರ ಅಧಿನಿಯಮ ಸಂಖ್ಯೆ 1 ರಿಂದ ಪಡೆಯಲಾಗಿದೆ.)

## VI

**1973ರ ತಿದ್ದುಪಡಿ ಮಾಡುವ ಅಧಿನಿಯಮ 14:-** ರಾಜ್ಯದಲ್ಲಿ ಸಕ್ಕರೆ ಕೈಗಾರಿಕೆಗೆ ಸಂಬಂಧಿಸಿದ ಎಲ್ಲ ವಿಷಯಗಳನ್ನು ವ್ಯಾಪಕವಾದ ಮತ್ತು ಸಮನ್ವಯಕಾರಿ ವಿಧಾನದ ಮೂಲಕ ವ್ಯವಹರಿಸುವ ಸಲುವಾಗಿ ಒಂದು ಪ್ರತ್ಯೇಕ ಏಜೆನ್ಸಿಯ ಅಗತ್ಯವನ್ನು ಪೂರೈಸಲು ಸಕ್ಕರೆ ನಿರ್ದೇಶಕರ ಹುದ್ದೆಯನ್ನು ಸೃಜಿಸಲಾಗಿದೆ. ಈಗಾಗಲೇ ಸಹಕಾರಿ ವಲಯದಲ್ಲಿ ಸಾಕಷ್ಟು ಸಂಖ್ಯೆಯ ಸಕ್ಕರೆ ಕಾರ್ಖಾನೆಗಳು ಅಸ್ತಿತ್ವದಲ್ಲಿರುವುದರಿಂದ ಮತ್ತು ಭವಿಷ್ಯದಲ್ಲಿ ಹೆಚ್ಚಿನ ಕಾರ್ಖಾನೆಗಳನ್ನು ಸ್ಥಾಪಿಸುವ ಸಂಭವವಿರುವುದರಿಂದ, ಸಹಕಾರಿ ವಲಯದಲ್ಲಿನ ಎಲ್ಲಾ ಸಕ್ಕರೆ ಕಾರ್ಖಾನೆಗಳಿಗೆ ಸಂಬಂಧಿಸಿದಂತೆ ಸಕ್ಕರೆ ನಿರ್ದೇಶಕರನ್ನು ಸಹಕಾರ ಸಂಘಗಳ ಅಧಿಕ ರಿಜಿಸ್ಟ್ರಾರ್ ಆಗಿ ಹೆಸರಿಸುವುದು ಅವಶ್ಯಕವಾಗಿತ್ತು. ಪ್ರಸ್ತುತ, ಸಹಕಾರಿ ಸಕ್ಕರೆ ಕಾರ್ಖಾನೆಗಳಿಗೆ

ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಸಹಕಾರ ಸಂಘಗಳ ರಿಜಿಸ್ಟ್ರಾರನು ವ್ಯವಹರಿಸುತ್ತಿದ್ದಾನೆ ಮತ್ತು ಸಹಕಾರಿ ಸಕ್ಕರೆ ಕಾರ್ಖಾನೆಗಳಿಗೆ ಸಂಬಂಧಿಸಿದಂತೆ ರಿಜಿಸ್ಟ್ರಾರನು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ, ಸಕ್ಕರೆ ನಿರ್ದೇಶಕನು ಅವನಿಗೆ ನೆರವು ನೀಡಬೇಕೆಂದು ಅಭಿಪ್ರಾಯಪಡಲಾಯಿತು. ಅಧಿಕ ಮುಖ್ಯ ಮಾರುಕಟ್ಟೆ ಅಧಿಕಾರಿಯನ್ನು ಸಹಕಾರ ಸಂಘಗಳ ಪದನಿಮಿತ್ತ ಅಧಿಕ ರಿಜಿಸ್ಟ್ರಾರನೆಂದು ಹೆಸರಿಸಲಾಗಿದೆ.

2. ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ 2-ಎ ಪ್ರಕರಣವು, ಸಹಕಾರ ಸಂಘಗಳ ಅಧಿಕ ರಿಜಿಸ್ಟ್ರಾರನನ್ನು ನೇಮಕಮಾಡುವ ಅವಕಾಶ ಕಲ್ಪಿಸುತ್ತದೆ. ಕ್ರಮವಾಗಿ, ಅಧಿಕ ಮುಖ್ಯ ಮಾರುಕಟ್ಟೆ ಅಧಿಕಾರಿಗೆ ಮತ್ತು ಸಹಕಾರ ಸಂಘಗಳ ಅಧಿಕ ರಿಜಿಸ್ಟ್ರಾರನೆಂದು ಗೊತ್ತುಮಾಡಲಾದ ಸಕ್ಕರೆ ನಿರ್ದೇಶಕನಿಗೆ ಅಧಿಕಾರ ಕೊಡುವುದು ಮತ್ತು ರಿಜಿಸ್ಟ್ರಾರನಿಗೆ ನೆರವು ನೀಡುವ ಉದ್ದೇಶಕ್ಕಾಗಿ ರಾಜ್ಯ ಸರ್ಕಾರವು ಯುಕ್ತವೆಂದು ಭಾವಿಸುವಷ್ಟು ಸಂಖ್ಯೆಯ ಅಧಿಕ ರಿಜಿಸ್ಟ್ರಾರ್‌ಗಳಿಗೆ ಅಧಿಕಾರ ಕೊಡುವ ಭಾವೀ ಆಕಸ್ಮಿಕ ಸಂದರ್ಭಗಳಲ್ಲಿ ಉಪಬಂಧವನ್ನು ತಿದ್ದುಪಡಿಮಾಡುವುದು ಅವಶ್ಯವೆಂದು ಪರಿಗಣಿಸಿದೆ.

(ಕರ್ನಾಟಕ ರಾಜ್ಯಪತ್ರ, (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: ಮೇ 2, 1973ರ ಪುಟ 3 ರಲ್ಲಿ ಸಂಖ್ಯೆ:433 ಎಂದು ಪ್ರಕಟಿಸಲಾಗಿದೆ.)

## VII

**1975ರ ತಿದ್ದುಪಡಿ ಮಾಡುವ ಅಧಿನಿಯಮ 2:– ಟಿಪ್ಪಣಿ:–** ಈ ಅಧಿನಿಯಮದ ಮೂಲಕ, ಕರ್ನಾಟಕ ಕೃಷಿ ಪತ್ತಿನ ಪ್ರವರ್ತನೆಗಳು ಮತ್ತು ಸಂಕೀರ್ಣ ಉಪಬಂಧ ಅಧಿನಿಯಮ, 1975ನ್ನು (1975ರ ಕರ್ನಾಟಕ ಅಧಿನಿಯಮ 2) ಅಧಿನಿಯಮಿತಗೊಳಿಸಲಾಗಿದೆ. ಇದರಲ್ಲಿ 1959ರ ಅಧಿನಿಯಮ 11ಕ್ಕೆ ಕೆಲವು ಪ್ರಾಸಂಗಿಕ ತಿದ್ದುಪಡಿಗಳನ್ನು ಮಾಡಲಾಗಿದೆ.

## VIII

**1975ರ ತಿದ್ದುಪಡಿ ಮಾಡುವ ಅಧಿನಿಯಮ 39:–** ಠೇವಣಿ ವಿಮಾ ನಿಗಮ ಅಧಿನಿಯಮ, 1961ರ (1961ರ ಕೇಂದ್ರ ಅಧಿನಿಯಮ 47) ಅಡಿಯಲ್ಲಿ ಠೇವಣಿ ವಿಮಾ ಯೋಜನೆಗಳನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಅಡಿಯಲ್ಲಿ ನೋಂದಾಯಿತವಾದ ಸಹಕಾರಿ ಬ್ಯಾಂಕುಗಳಿಗೆ ವಿಸ್ತರಿಸುವ ದೃಷ್ಟಿಯಿಂದ, ಭಾರತ ಸರ್ಕಾರ, ಆಹಾರ, ಕೃಷಿ, ಸಮುದಾಯ ಅಭಿವೃದ್ಧಿ ಮತ್ತು ಸಹಕಾರ ಮಂತ್ರಾಲಯಗಳು ಮತ್ತು ಭಾರತದ ರಿಸರ್ವ್ ಬ್ಯಾಂಕು, ಸಹಕಾರ ಬ್ಯಾಂಕುಗಳನ್ನು ರದ್ದುಮಾಡಲು, ಪುನರ್‌ರಚಿಸಲು ಮತ್ತು ಸಮಾಪನಗೊಳಿಸಲು ರಾಜ್ಯ ಸರ್ಕಾರವನ್ನು ಮತ್ತು ಭಾರತದ ರಿಸರ್ವ್ ಬ್ಯಾಂಕನ್ನು ಸಮರ್ಥಗೊಳಿಸುವ ಸಲುವಾಗಿ ರಾಜ್ಯ ಅಧಿನಿಯಮದಲ್ಲಿ ಅವಶ್ಯಕ ತಿದ್ದುಪಡಿಗಳನ್ನು ಮಾಡಲು ರಾಜ್ಯ ಸರ್ಕಾರಕ್ಕೆ ಸೂಚಿಸಿವೆ. ಸರ್ಕಾರದ ಕಾರ್ಯನೀತಿ ಮತ್ತು ಕಾರ್ಯಕ್ರಮಗಳನ್ನು ದೃಷ್ಟಿಯಲ್ಲಿರಿಸಿಕೊಂಡು ರಾಜ್ಯ ಅಧಿನಿಯಮದಲ್ಲಿ ಮಾಡಬೇಕಾದ ತಿದ್ದುಪಡಿಗಳನ್ನು ಪರ್ಯಾಲೋಚಿಸುವುದಕ್ಕಾಗಿ ಕೆಲವು ಪ್ರಮುಖ ಸಹಕಾರ ಸಂಸ್ಥೆಗಳ ಸರ್ಕಾರೇತರ ಅಧ್ಯಕ್ಷಾಧಿಕಾರಿಗಳು ಮತ್ತು ಸರ್ಕಾರದ ಅಧಿಕಾರಿಗಳಿಂದ ಕೂಡಿದ ಹಾಗೂ ಸಹಕಾರ ಇಲಾಖೆಯ ಆಗಿನ ಉಪಸಚಿವರು ಅಧ್ಯಕ್ಷರಾಗಿದ್ದಂಥ, ಸರ್ಕಾರದಿಂದ ರಚಿತವಾದ ಸಮಿತಿಯು, ಇತರ ವಿಷಯಗಳೊಂದಿಗೆ ಭಾರತ ಸರ್ಕಾರ ಮತ್ತು ರಿಜರ್ವ್ ಬ್ಯಾಂಕು ಸೂಚಿಸಿದಂತೆ ಸಹಕಾರ ಸಂಘಗಳ ಅಧಿನಿಯಮದಲ್ಲಿ ಎಲ್ಲ ಅಗತ್ಯ ಉಪಬಂಧಗಳನ್ನು ಕಲ್ಪಿಸುವಂತೆ ಶಿಫಾರಸು ಮಾಡಿತು. ಈ ಉದ್ದೇಶಕ್ಕಾಗಿ ಒಂದು ವಿಧೇಯಕವನ್ನು 1970ರ ಮಾರ್ಚ್ ತಿಂಗಳಲ್ಲಿ ವಿಧಾನ ಸಭೆಯಲ್ಲಿ ಮಂಡಿಸಲಾಯಿತು. ವಿಧಾನಸಭೆಯು ಈ ವಿಧೇಯಕವನ್ನು ಪರ್ಯಾಲೋಚನೆಗೆ ತೆಗೆದುಕೊಳ್ಳಲಿಲ್ಲ. ಈ ವಿಧೇಯಕದ ಕಾಲ ಗತಿಸಿತು. ಕೆಲವು ಜರೂರಿನ ಮತ್ತು ಪ್ರಮುಖವಾದ ಬಾಬುಗಳ ಬಗ್ಗೆ ಉಪಬಂಧಿಸಲು ಸರ್ಕಾರವು ಅಧಿನಿಯಮವನ್ನು ತಿದ್ದುಪಡಿ ಮಾಡುವುದು ಅಗತ್ಯವೆಂದು ಪರಿಗಣಿಸಿತು:

(1) ಠೇವಣಿ ವಿಮಾ ಯೋಜನೆಗಳನ್ನು ಸಹಕಾರಿ ಬ್ಯಾಂಕುಗಳಿಗೆ ವಿಸ್ತರಿಸುವುದು.

(2) ಸಹಕಾರಿ ಬ್ಯಾಂಕುಗಳನ್ನು ಸಮ್ಮಿಲನಗೊಳಿಸುವುದು.

(3) ಸಂಘದ ಸದಸ್ಯನು ತನ್ನ ಕೃಷಿ ಕಾರ್ಯಾಚರಣೆಗೆ ಹಣಕಾಸು ಪಡೆಯಲು ಸಾಧ್ಯವಾಗುವಂತೆ ಮಾಡಲು ಅವನ ಜಮೀನಿನ ಮೇಲೆ ಎರಡನೆಯ ಚಾರ್ಜನ್ನು ಸೃಜಿಸುವುದು.

(4) ಕೆಲವು ಸಂದರ್ಭಗಳಲ್ಲಿ ರಾಜ್ಯ ಸರ್ಕಾರವು ಸಮಿತಿಯ ಸದಸ್ಯರನ್ನು ನಾಮನಿರ್ದೇಶನ ಮಾಡುವುದು.

(5) ಸಹಕಾರಿ ಬ್ಯಾಂಕುಗಳನ್ನು ಪರಿಸಮಾಪ್ತಿಗೊಳಿಸುವುದು.

ತದನುಸಾರವಾಗಿ ಒಂದು ತಿದ್ದುಪಡಿ ವಿಧೇಯಕವನ್ನು ಸಿದ್ಧಪಡಿಸಲಾಯಿತು ಮತ್ತು ಅದನ್ನು ರಾಷ್ಟ್ರಪತಿಯವರ ಅಧಿನಿಯಮವೆಂದು ಅಧಿನಿಯಮಿತಿಗೊಳಿಸಲು ಭಾರತ ಸರ್ಕಾರಕ್ಕೆ ಕಳುಹಿಸಲಾಯಿತು. ಭಾರತ ಸರ್ಕಾರವು ಈ ವಿಧೇಯಕದಲ್ಲಿ ಕೆಲವೊಂದು ಬದಲಾವಣೆಗಳನ್ನು ಸೂಚಿಸಿತು. ರಾಜ್ಯ ಶಾಸನ ಸಭೆಗೆ ಚುನಾವಣೆಗಳು ನಡೆಯಬೇಕಾದ್ದರಿಂದ ವಿಧೇಯಕವು ರಾಷ್ಟ್ರಪತಿಯವರ ಅಧಿನಿಯಮವೆಂದು ಅಧಿನಿಯಮಿತವಾಗಲಿಲ್ಲ.

ಠೇವಣಿ ವಿಮಾ ಯೋಜನೆಯನ್ನು ಸಹಕಾರಿ ಬ್ಯಾಂಕುಗಳಿಗೆ ವಿಸ್ತರಿಸಲು ಅನುಕೂಲ ಮಾಡಿಕೊಡುವುದಕ್ಕಾಗಿ, ವಾಣಿಜ್ಯ ಬ್ಯಾಂಕುಗಳಿಗೆ ಸಹಕಾರ ಸಂಘಗಳ ನಾಮ ಮಾತ್ರ ಸದಸ್ಯರಾಗಿ ಪ್ರವೇಶ ಪಡೆಯಲು ಅನುಮತಿಸುವುದಕ್ಕಾಗಿ ಮಾಡಿದ ಸಾಲಗಳನ್ನು ಆಂಶಿಕವಾಗಿ ತೀರಿಸಿದಾಗ ಭೂಮಿಯ ಮೇಲಿನ ಚಾರ್ಜನ್ನು ಪ್ರಮಾಣಾನುಸಾರ ಬಿಡುಗಡೆ ಪಡೆಯಲು ಸಾಲಗಳನ್ನು ಪಡೆದವರಿಗೆ ಸಹಕಾರ ಸಂಘದಿಂದ ಪರಿಹಾರ ಒದಗಿಸುವುದಕ್ಕಾಗಿ ಮತ್ತು ನಿಬಿಡ ಪ್ರದೇಶದಲ್ಲಿ ಪ್ರದೇಶ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿರುವಲ್ಲಿ, ಯೋಜನೆಗೆ ಹಣಕಾಸು ಒದಗಿಸುವ ಸರ್ಕಾರದ ಅಥವಾ ಭೂ ಅಭಿವೃದ್ಧಿ ಬ್ಯಾಂಕಿನ ಹಿತಾಸಕ್ತಿಯನ್ನು ಕಾಪಾಡುವುದಕ್ಕಾಗಿ ಯಾವುದೇ ಸಹಕಾರ ಸಂಘದಲ್ಲಿ ಸರ್ಕಾರವು ಸಹಕಾರ ಸಂಘದ ಷೇರು ಬಂಡವಾಳದ ಶೇಕಡ 50 ಕ್ಕಿಂತ ಕಡಿಮೆ ಇಲ್ಲದಿರುವಷ್ಟು ಮೌಲ್ಯದ ಷೇರು ಬಂಡವಾಳವನ್ನು ಹೊಂದಿದ್ದರೆ ಆ ಯಾವುದೇ ಸಹಕಾರ ಸಂಘದ ನಿರ್ದೇಶಕ ಮಂಡಲಿಯಲ್ಲಿನ ನಿರ್ದೇಶಕರ ಒಟ್ಟು ಸಂಖ್ಯೆಯ ಮೂರನೆಯ ಎರಡರಷ್ಟನ್ನು ನಾಮನಿರ್ದೇಶನ ಮಾಡಲು ಈ ಅಧಿನಿಯಮದಲ್ಲಿ ಯುಕ್ತ ಉಪಬಂಧ ಕಲ್ಪಿಸುವುದಕ್ಕಾಗಿ, ಸಹಕಾರ ಸಂಘಗಳ ಸದಸ್ಯರಿಗೆ ಪ್ರಯಾಣ ಭತ್ಯೆಯ ನಿಯಮಗಳನ್ನು ರೂಪಿಸಲು ಉಪಬಂಧಗಳನ್ನು ಕಲ್ಪಿಸುವುದಕ್ಕಾಗಿ, ಕೇಂದ್ರೀಯ ಬ್ಯಾಂಕುಗಳು ಪ್ರಾಥಮಿಕ ಸಹಕಾರ ಸಂಘಗಳ ಕೆಲವು ಸದಸ್ಯರ ಮೇಲಿನ ಮಧ್ಯಸ್ಥಿಕೆಯ ವ್ಯವಹಾರಗಳನ್ನು ಪ್ರಾರಂಭಿಸುವುದಕ್ಕೆ ಉಪಬಂಧ ಕಲ್ಪಿಸುವುದಕ್ಕಾಗಿ, ಬಾಕಿದಾರರನ್ನು ವ್ಯವಸ್ಥಾಪನಾ ಸಮಿತಿಯ ಸದಸ್ಯತ್ವದಿಂದ ಅನರ್ಹಗೊಳಿಸುವುದಕ್ಕೆ ಉಪಬಂಧ ಕಲ್ಪಿಸುವುದಕ್ಕಾಗಿ, ಸದಸ್ಯರ ಪದಾವಧಿಯ ಪ್ರಾರಂಭದ ಸಂಬಂಧದಲ್ಲಿ, ಸಮಿತಿಯ ಸದಸ್ಯರ ರಾಜೀನಾಮೆಯ ಬಗ್ಗೆ ಮತ್ತು ಅನುಕ್ರಮವಾಗಿ ಆರಕ್ಕಿಂತ ಹೆಚ್ಚು ವರ್ಷಗಳಿಗೆ ಸಹಕಾರ ಸಂಘದ ಸದಸ್ಯನಾಗಿ ನೇಮಕವಾಗುವುದನ್ನು ಅಥವಾ ಅಧ್ಯಕ್ಷ, ಉಪಾಧ್ಯಕ್ಷ ಮುಂತಾದವರಾಗಿ ಮುಂದುವರಿಯುವುದನ್ನು ಅನರ್ಹಗೊಳಿಸುವ ಬಗ್ಗೆ ಉಪಬಂಧ ಕಲ್ಪಿಸುವುದಕ್ಕಾಗಿ, ಕರ್ನಾಟಕ ಸಹಕಾರಿ ಅಪೀಲು ನ್ಯಾಯಾಧಿಕರಣದ ಅಧ್ಯಕ್ಷರು ಇಬ್ಬರು ಸದಸ್ಯರನ್ನೊಳಗೊಂಡ ನ್ಯಾಯಪೀಠವನ್ನು ರಚಿಸುವುದಕ್ಕೆ ಉಪಬಂಧ ಕಲ್ಪಿಸುವುದಕ್ಕಾಗಿ

ಮತ್ತು ಸಹಕಾರ ಸಂಘಗಳ ನೌಕರರ ನೇಮಕಾತಿ, ತರಬೇತಿ, ಮುಂತಾದವುಗಳಿಗಾಗಿ ಪ್ರಾಧಿಕಾರ/ ಪ್ರಾಧಿಕಾರಗಳನ್ನು ರಚಿಸಲು ಸರ್ಕಾರಕ್ಕೆ ಸಾಧ್ಯವಾಗುವಂತೆ ಮಾಡಲು ಉಪಬಂಧ ಕಲ್ಪಿಸುವುದಕ್ಕಾಗಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಈಗ ಪರಿಗಣಿಸಲಾಗಿದೆ.

ರಾಷ್ಟ್ರಪತಿ ಆಳ್ವಿಕೆಯ ಅವಧಿಯಲ್ಲಿ, 1972ರ ರಾಷ್ಟ್ರಪತಿಯವರ ಅಧಿನಿಯಮ, 1ರ ಮೂಲಕ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ 101ನೇ ಪ್ರಕರಣವನ್ನು ತಿದ್ದುಪಡಿ ಮಾಡಲಾಯಿತು. ಸದಸ್ಯರಲ್ಲದವರ ವಿರುದ್ಧದ ಡಿಕ್ರಿಯ ಅಮಲ್ಜಾರಿಯ ಸಂಬಂಧದಲ್ಲಿ ಉಚ್ಚ ನ್ಯಾಯಾಲಯವು ನೀಡಿದ ನಿರ್ಣಯದಿಂದ ಉದ್ಭವಿಸಿದ ತೊಂದರೆಯನ್ನು ನಿವಾರಿಸುವ ಸಲುವಾಗಿ ಇದನ್ನು ಮಾಡಲಾಯಿತು. ರಾಷ್ಟ್ರಪತಿಯವರ ಅಧಿನಿಯಮದ ಕಾರ್ಯವ್ಯಾಪ್ತಿಯು 1973ರ ಮಾರ್ಚ್ ತಿಂಗಳವರೆಗೆ ಇರುವುದರಿಂದ ಹಾಗೂ ಅದರಲ್ಲಿ ಮಾಡಿದ ಉಪಬಂಧಗಳನ್ನು ಮುಂದುವರಿಸುವುದು ಅವಶ್ಯಕವಾಗಿರುವುದರಿಂದ ಈ ಉಪಬಂಧಗಳನ್ನು ಅಧಿನಿಯಮಿತಗೊಳಿಸಬೇಕಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 1973ರ ಫೆಬ್ರವರಿ 26ರ ಪುಟ 22-24 ರಲ್ಲಿ ಸಂಖ್ಯೆ:179 ಎಂದು ಪ್ರಕಟಿಸಲಾಗಿದೆ.)

## IX

**1976ರ ತಿದ್ದುಪಡಿ ಮಾಡುವ ಅಧಿನಿಯಮ 19:–** ಸಂಘಗಳನ್ನು ಹೆಚ್ಚು ಸಮರ್ಥವಾಗಿಸಿ ಆ ಮೂಲಕ ವಿಶೇಷವಾಗಿ ದುರ್ಬಲ ವರ್ಗಗಳ ಹಿತಾಸಕ್ತಿಯನ್ನು ರಕ್ಷಿಸುವ ಮತ್ತು ಸಂಘಗಳ ಮೇಲೆ ಪಟ್ಟಭದ್ರ ಹಿತಾಸಕ್ತಿಗಳ ಹಿಡಿತವನ್ನು ಸಡಿಲಗೊಳಿಸುವ ದೃಷ್ಟಿಯಿಂದ, ಸಹಕಾರ ಸಂಘಗಳ ಪುನರ್ ಸಂಘಟನೆಗೆ ಉಪಬಂಧಿಸುವ ಸಲುವಾಗಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮವನ್ನು 1976ರ ಮಾರ್ಚ್ 10 ರಂದು ತಿದ್ದುಪಡಿ ಮಾಡಲಾಯಿತು. ಆದರೆ, ಈ ಅಧಿನಿಯಮವನ್ನು ತಿದ್ದುಪಡಿ ಮಾಡಿದ ತರುವಾಯವೂ, ಈ ಅಧಿನಿಯಮದ ಉಪಬಂಧಗಳನ್ನು ಸಕಾಲಿಕವಾಗಿ ಮತ್ತು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವಲ್ಲಿ ಕೆಲವು ತೊಂದರೆಗಳು ಇದ್ದುದಾಗಿ ಕಂಡುಬಂದಿತು. ಸಹಕಾರ ಸಂಸ್ಥೆಗಳ ಯುಕ್ತ ವ್ಯವಸ್ಥಾಪನೆಯನ್ನು ಸುನಿಶ್ಚಿತಗೊಳಿಸುವುದಕ್ಕಾಗಿ ಹಾಗೂ ತಪ್ಪುಮಾಡುವ ಸಹಕಾರ ಸಂಘಗಳ ವಿರುದ್ಧ ಪರಿಣಾಮಕಾರಿ ಕ್ರಮಗಳನ್ನು ಕೈಗೊಳ್ಳುವುದಕ್ಕಾಗಿ ಕಾನೂನು ಕ್ರಮಗಳನ್ನು ಉಪಬಂಧಿಸುವುದು ಕೂಡ ಅವಶ್ಯಕವೆಂದು ಪರಿಗಣಿಸಲಾಗಿದೆ. ತದನುಸಾರವಾಗಿ ಈ ಮುಂಚಿನ ವಿಷಯಗಳಿಗೆ ಸಂಬಂಧಿಸಿದ ಉಪಬಂಧಗಳನ್ನು ಅನುಕ್ರಮವಾಗಿ 1976ರ ಅಧ್ಯಾದೇಶ ಸಂಖ್ಯೆಗಳು 15 ಮತ್ತು 19ನ್ನು ಪ್ರಖ್ಯಾಪಿಸುವ ಮೂಲಕ, 1976ರ ಜುಲೈ 19 ರಂದು ಮತ್ತು 1976ರ ಆಗಸ್ಟ್ 7 ರಂದು ಯುಕ್ತ ತಿದ್ದುಪಡಿ ಮಾಡಲಾಗಿದೆ:

(1) ಸಹಕಾರ ಸಂಘಗಳ ಪುನರ್ ಸಂಘಟನೆ.

(2) ಸಹಕಾರ ಸಂಘಗಳಿಗೆ ವಿಶೇಷಾಧಿಕಾರಿಗಳ ನೇಮಕಾತಿ.

(3) ಸಹಕಾರ ಸಂಘಗಳಿಗೆ ನಿರ್ದೇಶನ ನೀಡುವ ಅಧಿಕಾರ.

(4) ಅಧಿನಿಯಮದ ಅಡಿಯಲ್ಲಿ ಆನುಷಂಗಿಕ ಕ್ರಮವಾಗಿ ಅಪೀಲು ಉಪಬಂಧಗಳು.

(5) ವ್ಯವಸ್ಥಾಪನಾ ಸಮಿತಿಯ ಸದಸ್ಯರನ್ನು ತೆಗೆದುಹಾಕುವುದು ಮತ್ತು ಅನರ್ಹಗೊಳಿಸುವುದು.

(6) ಅಧಿನಿಯಮದ ಅಡಿಯಲ್ಲಿ ನೇಮಕ ಮಾಡಿದ ಹೊಸ ವ್ಯವಸ್ಥಾಪನಾ ಸಮಿತಿಗೆ ಮತ್ತು ಆಡಳಿತಗಾರರಿಗೆ ಹಾಗೂ ವಿಶೇಷ ಅಧಿಕಾರಿಗಳಿಗೆ ನಷ್ಟಭರ್ತಿ ಉಪಬಂಧವನ್ನು ವಿಸ್ತರಿಸುವುದು.

ಸಹಕಾರ ಸಂಘಗಳ ಪುನರ್ ಸಂಘಟನೆಯು ಜರೂರು ಸ್ವರೂಪದ್ದಾಗಿತ್ತು. ಭಾರತದ ರಿಸರ್ವ್ ಬ್ಯಾಂಕು ಮತ್ತು ಭಾರತ ಸರ್ಕಾರವು, 20 ಅಂಶಗಳ ಆರ್ಥಿಕ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು, ಸಹಕಾರ ಸಂಘಗಳ ಪುನರ್ ಸಂಘಟನೆಯನ್ನು ಕೂಡಲೇ ಪೂರ್ಣಗೊಳಿಸುವಂತೆ ಎಲ್ಲಾ ರಾಜ್ಯ ಸರ್ಕಾರಗಳನ್ನು ಒತ್ತಾಯಿಸುತ್ತಿದ್ದವು.

ಕೆಲವು ಸಂದರ್ಭಗಳಲ್ಲಿ, ಸಹಕಾರ ಸಂಘಗಳ ವ್ಯವಸ್ಥಾಪನೆಯನ್ನು ವಹಿಸಿಕೊಳ್ಳುವುದಕ್ಕಾಗಿ ತುರ್ತುಕ್ರಮವನ್ನು ತೆಗೆದುಕೊಳ್ಳುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಆದ್ದರಿಂದ, ಹೊಸ ಪ್ರಕರಣ 30(ಎ)ನ್ನು ಸೇರಿಸಲಾಗಿದೆ. ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯಲ್ಲಿ ಸಹಕಾರ ಸಂಘಗಳಿಗೆ ನಿರ್ದೇಶನಗಳನ್ನು ನೀಡುವ ಕಾನೂನು ಅಧಿಕಾರವನ್ನು ಹೊಂದಿರಬೇಕೆಂದು ಕೂಡ ಅಭಿಪ್ರಾಯಪಡಿಸಲಾಗಿದೆ. ಸಮಿತಿಗಳ ಸದಸ್ಯರನ್ನು ತೆಗೆದುಹಾಕುವ ಉಪಬಂಧ ಈಗಾಗಲೇ ನಿಯಮಗಳಲ್ಲಿ ಇತ್ತು. ಅಧಿನಿಯಮದ ಅಡಿಯಲ್ಲಿ ಈ ಉಪಬಂಧ ಕಲ್ಪಿಸುವುದು ಅವಶ್ಯಕವಾಗಿತ್ತು.

ಸದ್ಭಾವನೆಯಿಂದ ಕಾರ್ಯನಿರ್ವಹಿಸಿದ್ದ ಅಧಿಕಾರಿಗಳಿಗೆ ನಷ್ಟಭರ್ತಿ ಮಾಡುವುದಕ್ಕೆ ಸಂಬಂಧಿಸಿದ ಉಪಬಂಧವನ್ನು ಈ ಅಧಿನಿಯಮದ ಅಡಿಯಲ್ಲಿ ನೇಮಕವಾದ ಹೊಸ ವ್ಯವಸ್ಥಾಪನಾ ಸಮಿತಿಗಳಿಗೆ ಹಾಗೂ ಆಡಳಿತಗಾರರಿಗೆ ಮತ್ತು ವಿಶೇಷಾಧಿಕಾರಿಗಳಿಗೆ ವಿಸ್ತರಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಸಹಕಾರಿ ಚಳುವಳಿಯನ್ನು ಸರಿಯಾದ ಮಾರ್ಗದಲ್ಲಿ ಅಭಿವೃದ್ಧಿಪಡಿಸುವ ದೃಷ್ಟಿಯಿಂದ ಈ ಎಲ್ಲಾ ತಿದ್ದುಪಡಿಗಳನ್ನು ಜರೂರಾಗಿ ಮಾಡಬೇಕಾಗಿತ್ತು ಮತ್ತು ವಿಧಾನಸಭೆಯು ಅಧಿವೇಶನದಲ್ಲಿ ಇಲ್ಲದಿದ್ದುದರಿಂದ ಅಧ್ಯಾದೇಶವನ್ನು ಪ್ರಖ್ಯಾಪಿಸುವ ಮಾರ್ಗವನ್ನು ಅವಲಂಬಿಸಬೇಕಾಯಿತು.

ಈ ತಿದ್ದುಪಡಿಗಳಿಂದಾಗಿ ಸರ್ಕಾರಕ್ಕೆ ಅಧಿಕ ವೆಚ್ಚ ಉಂಟಾಗುವುದಿಲ್ಲ.

ಸದರಿ ಅಧ್ಯಾದೇಶಗಳ ಬದಲಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 1976ರ ನವೆಂಬರ್ 8 ರಂದು ಪುಟ 7 ಮತ್ತು 8 ರಲ್ಲಿ ಸಂಖ್ಯೆ 4430 ಎಂದು ಪ್ರಕಟಿಸಲಾಗಿದೆ.)

## X

**1976ರ ತಿದ್ದುಪಡಿ ಮಾಡುವ ಅಧಿನಿಯಮ 70:–** ಸಂಘಗಳನ್ನು ಹೆಚ್ಚು ಸಮರ್ಥವಾಗಿಸಿ ಆ ಮೂಲಕ ವಿಶೇಷವಾಗಿ ದುರ್ಬಲ ವರ್ಗಗಳ ಹಿತಾಸಕ್ತಿಯನ್ನು ರಕ್ಷಿಸುವ ಮತ್ತು ಸಂಘಗಳ ಮೇಲೆ ಪಟ್ಟಭದ್ರ ಹಿತಾಸಕ್ತಿಗಳ ಹಿಡಿತವನ್ನು ಸಡಿಲಗೊಳಿಸುವ ದೃಷ್ಟಿಯಿಂದ, ಸಹಕಾರ ಸಂಘಗಳ ಪುನರ್ ಸಂಘಟನೆಗೆ ಉಪಬಂಧಿಸುವ ಸಲುವಾಗಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮವನ್ನು 1976ರ ಮಾರ್ಚ್ 10 ರಂದು

ತಿದ್ದುಪಡಿ ಮಾಡಲಾಯಿತು. ಆದರೆ, ಈ ಅಧಿನಿಯಮವನ್ನು ತಿದ್ದುಪಡಿ ಮಾಡಿದ ತರುವಾಯವೂ, ಈ ಅಧಿನಿಯಮದ ಉಪಬಂಧಗಳನ್ನು ಸಕಾಲಿಕವಾಗಿ ಮತ್ತು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವಲ್ಲಿ ಕೆಲವು ತೊಂದರೆಗಳು ಇದ್ದುದಾಗಿ ಕಂಡುಬಂದಿತು. ಸಹಕಾರ ಸಂಸ್ಥೆಗಳ ಯುಕ್ತ ವ್ಯವಸ್ಥಾಪನೆಯನ್ನು ಸುನಿಶ್ಚಿತಗೊಳಿಸುವುದಕ್ಕಾಗಿ ಹಾಗೂ ತಪ್ಪುಮಾಡುವ ಸಹಕಾರ ಸಂಘಗಳ ವಿರುದ್ಧ ಪರಿಣಾಮಕಾರಿ ಕ್ರಮಗಳನ್ನು ಕೈಗೊಳ್ಳುವುದಕ್ಕಾಗಿ ಕಾನೂನು ಕ್ರಮಗಳನ್ನು ಉಪಬಂಧಿಸುವುದು ಕೂಡ ಅವಶ್ಯಕವೆಂದು ಪರಿಗಣಿಸಲಾಗಿದೆ. ತದನುಸಾರವಾಗಿ ಈ ಮುಂಚಿನ ವಿಷಯಗಳಿಗೆ ಸಂಬಂಧಿಸಿದ ಉಪಬಂಧಗಳನ್ನು ಅನುಕ್ರಮವಾಗಿ 1976ರ ಅಧ್ಯಾದೇಶ ಸಂಖ್ಯೆಗಳು 15 ಮತ್ತು 19ನ್ನು ಪ್ರಖ್ಯಾಪಿಸುವ ಮೂಲಕ, 1976ರ ಜುಲೈ 19 ರಂದು ಮತ್ತು 1976ರ ಆಗಸ್ಟ್ 7 ರಂದು ಯುಕ್ತ ತಿದ್ದುಪಡಿ ಮಾಡಲಾಗಿದೆ:

(1) ಸಹಕಾರ ಸಂಘಗಳ ಪುನರ್ ಸಂಘಟನೆ.

(2) ಸಹಕಾರ ಸಂಘಗಳಿಗೆ ವಿಶೇಷಾಧಿಕಾರಿಗಳ ನೇಮಕಾತಿ.

(3) ಸಹಕಾರ ಸಂಘಗಳಿಗೆ ನಿರ್ದೇಶನ ನೀಡುವ ಅಧಿಕಾರ.

(4) ಅಧಿನಿಯಮದ ಅಡಿಯಲ್ಲಿ ಆನುಷಂಗಿಕ ಕ್ರಮವಾಗಿ ಅಪೀಲು ಉಪಬಂಧಗಳು.

(5) ವ್ಯವಸ್ಥಾಪನಾ ಸಮಿತಿಯ ಸದಸ್ಯರನ್ನು ತೆಗೆದುಹಾಕುವುದು ಮತ್ತು ಅನರ್ಹಗೊಳಿಸುವುದು.

(6) ಅಧಿನಿಯಮದ ಅಡಿಯಲ್ಲಿ ನೇಮಕ ಮಾಡಿದ ಹೊಸ ವ್ಯವಸ್ಥಾಪನಾ ಸಮಿತಿಗೆ ಮತ್ತು ಆಡಳಿತಗಾರರಿಗೆ ಹಾಗೂ ವಿಶೇಷ ಅಧಿಕಾರಿಗಳಿಗೆ ನಷ್ಟಭರ್ತಿ ಉಪಬಂಧವನ್ನು ವಿಸ್ತರಿಸುವುದು.

ಸಹಕಾರ ಸಂಘಗಳ ಪುನರ್ ಸಂಘಟನೆಯು ಜರೂರು ಸ್ವರೂಪದ್ದಾಗಿತ್ತು. ಭಾರತದ ರಿಸರ್ವ್ ಬ್ಯಾಂಕು ಮತ್ತು ಭಾರತ ಸರ್ಕಾರವು, 20 ಅಂಶಗಳ ಆರ್ಥಿಕ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು, ಸಹಕಾರ ಸಂಘಗಳ ಪುನರ್ ಸಂಘಟನೆಯನ್ನು ಕೂಡಲೇ ಪೂರ್ಣಗೊಳಿಸುವಂತೆ ಎಲ್ಲಾ ರಾಜ್ಯ ಸರ್ಕಾರಗಳನ್ನು ಒತ್ತಾಯಿಸುತ್ತಿದ್ದವು.

ಕೆಲವು ಸಂದರ್ಭಗಳಲ್ಲಿ, ಸಹಕಾರ ಸಂಘಗಳ ವ್ಯವಸ್ಥಾಪನೆಯನ್ನು ವಹಿಸಿಕೊಳ್ಳುವುದಕ್ಕಾಗಿ ತುರ್ತು ಕ್ರಮವನ್ನು ತೆಗೆದುಕೊಳ್ಳುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಆದ್ದರಿಂದ, ಹೊಸ ಪ್ರಕರಣ 30(ಎ)ನ್ನು ಸೇರಿಸಲಾಗಿದೆ. ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯಲ್ಲಿ ಸಹಕಾರ ಸಂಘಗಳಿಗೆ ನಿರ್ದೇಶನಗಳನ್ನು ನೀಡುವ ಕಾನೂನು ಅಧಿಕಾರವನ್ನು ಹೊಂದಿರಬೇಕೆಂದು ಕೂಡ ಅಭಿಪ್ರಾಯಪಡಲಾಗಿದೆ. ಸಮಿತಿಗಳ ಸದಸ್ಯರನ್ನು ತೆಗೆದುಹಾಕುವ ಉಪಬಂಧ ಈಗಾಗಲೇ ನಿಯಮಗಳಲ್ಲಿ ಇತ್ತು. ಅಧಿನಿಯಮದ ಅಡಿಯಲ್ಲಿ ಈ ಉಪಬಂಧ ಕಲ್ಪಿಸುವುದು ಅವಶ್ಯಕವಾಗಿತ್ತು.

ಸದ್ಭಾವನೆಯಿಂದ ಕಾರ್ಯನಿರ್ವಹಿಸಿದ್ದ ಅಧಿಕಾರಿಗಳಿಗೆ ನಷ್ಟಭರ್ತಿ ಮಾಡುವುದಕ್ಕೆ ಸಂಬಂಧಿಸಿದ ಉಪಬಂಧವನ್ನು ಈ ಅಧಿನಿಯಮದ ಅಡಿಯಲ್ಲಿ ನೇಮಕವಾದ ಹೊಸ ವ್ಯವಸ್ಥಾಪನಾ ಸಮಿತಿಗಳಿಗೆ ಹಾಗೂ ಆಡಳಿತಗಾರರಿಗೆ ಮತ್ತು ವಿಶೇಷಾಧಿಕಾರಿಗಳಿಗೆ ವಿಸ್ತರಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಸಹಕಾರಿ ಚಳುವಳಿಯನ್ನು ಸರಿಯಾದ ಮಾರ್ಗದಲ್ಲಿ ಅಭಿವೃದ್ಧಿಪಡಿಸುವ ದೃಷ್ಟಿಯಿಂದ ಈ ಎಲ್ಲಾ ತಿದ್ದುಪಡಿಗಳನ್ನು ಜರೂರಾಗಿ ಮಾಡಬೇಕಾಗಿತ್ತು ಮತ್ತು ವಿಧಾನಸಭೆಯು ಅಧಿವೇಶನದಲ್ಲಿ ಇಲ್ಲದಿದ್ದುದರಿಂದ ಅಧ್ಯಾದೇಶವನ್ನು ಪ್ರಖ್ಯಾಪಿಸುವ ಮಾರ್ಗವನ್ನು ಅವಲಂಬಿಸಬೇಕಾಯಿತು.

ಈ ತಿದ್ದುಪಡಿಗಳಿಂದಾಗಿ ಸರ್ಕಾರಕ್ಕೆ ಅಧಿಕ ವೆಚ್ಚ ಉಂಟಾಗುವುದಿಲ್ಲ.

ಸದರಿ ಅಧ್ಯಾದೇಶಗಳ ಬದಲಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

(1976ರ ವಿ.ಸ. ವಿಧೇಯಕ ಸಂಖ್ಯೆ 45 ರಿಂದ ಪಡೆಯಲಾಗಿದೆ.)

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 08.12.1976ರ ಸಂಖ್ಯೆ 4430 ಎಂದು ಪ್ರಕಟಿಸಲಾಗಿದೆ.)

## XI

**1976ರ ತಿದ್ದುಪಡಿ ಮಾಡುವ ಅಧಿನಿಯಮ 71:–** ಸಹಕಾರಿಗಳ ಕೆಲಸಕಾರ್ಯಗಳನ್ನು ಏಕರೂಪಗೊಳಿಸುವ ದೃಷ್ಟಿಯಿಂದ ಮತ್ತು ಸರ್ಕಾರದ ಆರ್ಥಿಕ ಕಾರ್ಯನೀತಿಯನ್ನು ಮತ್ತು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಲ್ಲಿ ಒಂದು ಪರಿಣಾಮಕಾರಿ ಪಾತ್ರ ವಹಿಸುವಲ್ಲಿ ಅವುಗಳನ್ನು ಸಮರ್ಥಗೊಳಿಸುವ ದೃಷ್ಟಿಯಿಂದ, ಈ ಮುಂದಿನವುಗಳಿಗಾಗಿ ಸಹಕಾರ ಸಂಘಗಳ ಅಧಿನಿಯಮಕ್ಕೆ ಕೆಲವು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಯಿತು.

(i) ವಿಶೇಷವಾಗಿ ನಗರ ಬ್ಯಾಂಕುಗಳು ವ್ಯಾಪಾರ ಸಂಸ್ಥೆ, ಮುಂತಾದ ಸಂಸ್ಥೆಗಳ ಸದಸ್ಯರಾಗಿ ಸೇರಿಸಿಕೊಳ್ಳಲು ಸಾಧ್ಯವಾಗಿಸುವುದು;

(ii) ಸಹಕಾರ ಸಂಘವು ನಡೆಸುವಂಥದೇ ಬಗೆಯ ವ್ಯವಹಾರಗಳನ್ನು ನಡೆಸುವ ವ್ಯಕ್ತಿಗಳನ್ನು ಸದಸ್ಯರಾಗುವುದರಿಂದ ಪ್ರತಿಷೇಧಿಸುವುದು;

(iii) ಚುನಾವಣಾ ಸಮಯದಲ್ಲಿ ಮಾತ್ರ ಕ್ರಿಯಾಶೀಲವಾಗಿರುವ ನಾಮಮಾತ್ರ ಸಂಘಗಳಿಗೆ ಮತದಾನದ ಹಕ್ಕುಗಳನ್ನು ನಿರಾಕರಿಸುವುದು ಮತ್ತು ಜಾಮೀನುದಾರರು ಬಾಕಿದಾರನಷ್ಟೇ ಜವಾಬ್ದಾರಿಯನ್ನು ಹೊಂದಿರುವ ಕಾರಣದಿಂದಾಗಿ, ಬಾಕಿದಾರರಂತೆಯೇ ಜಾಮೀನುದಾರರಿಗೂ ಮತದಾನದ ಹಕ್ಕುಗಳನ್ನು ನಿರಾಕರಿಸುವುದು;

(iv) ಗುಪ್ತ ಉದ್ದೇಶಗಳಿಗಾಗಿ ತಮ್ಮ ಸಭೆಯನ್ನು ಅನುಕೂಲಕರವಾದ ಸ್ಥಳಗಳಲ್ಲಿ ನಡೆಸುವ ಸಹಕಾರ ಸಂಘಗಳ ಪ್ರವೃತ್ತಿಯನ್ನು ತಡೆಯುವುದು, ರಾಜ್ಯ ಭೂ ಅಭಿವೃದ್ಧಿ ಬ್ಯಾಂಕುಗಳು ಹೈನುಗಾರಿಕೆ ಅಭಿವೃದ್ಧಿಯನ್ನೂ ಒಳಗೊಂಡಂತೆ ಬೇರೆ ಉದ್ದೇಶಗಳಿಗೆ ಹಣಕಾಸನ್ನು ನೀಡುವ ದೃಷ್ಟಿಯಿಂದ, ಭದ್ರತೆಗಳನ್ನು ಅಡಮಾನ ಮಾಡದೆಯೇ ಡಿಬೆಂಚರುಗಳನ್ನು ಹೊರಡಿಸಲು ಅವುಗಳನ್ನು ಸಮರ್ಥಗೊಳಿಸುವುದು;

(v) ಈ ಅಧಿನಿಯಮದ ಅಡಿಯಲ್ಲಿ ಮಾಡಿದ ಅಪರಾಧಗಳಿಗೆ ದಂಡಗಳನ್ನು ಇನ್ನಷ್ಟು ಕಠಿಣಗೊಳಿಸುವುದು.

- ಈ ಎಲ್ಲಾ ತಿದ್ದುಪಡಿಗಳು ಸಹಕಾರ ಸಂಘಗಳ ಪದಾಧಿಕಾರಿಗಳು, ಸಾಲಗಾರರು, ಜಾಮೀನುದಾರರು ಮುಂತಾದವರಲ್ಲಿ ಜವಾಬ್ದಾರಿ ಭಾವನೆಯನ್ನು ಉಂಟುಮಾಡಿ, ಅವುಗಳ ಕೆಲಸಕಾರ್ಯಗಳಲ್ಲಿ ಏಕರೂಪತೆ ತರಲು ಸಹಾಯಕವಾಗುತ್ತವೆ.

ಆದ್ದರಿಂದ ಈ ವಿಧೇಯಕ.

(1976ರ ವಿ.ಸ. ವಿಧೇಯಕ ಸಂಖ್ಯೆ 65 ರಿಂದ ಪಡೆಯಲಾಗಿದೆ.)

## XII

**1978ರ ತಿದ್ದುಪಡಿ ಮಾಡುವ ಅಧಿನಿಯಮ 14:–** ಸಹಕಾರ ಸಂಘಗಳು ದುರ್ಬಲ ವರ್ಗಗಳಿಗೆ ನೆರವಾಗುವಲ್ಲಿ ಮತ್ತು ಕೃಷಿ ಉತ್ಪನ್ನ ಕ್ಷೇತ್ರಕ್ಕೆ ಅಧಿಕ ಮಟ್ಟದ ಹಣಕಾಸು ನಿರ್ವಹಣೆ ಮಾಡುವಲ್ಲಿ ಅವುಗಳನ್ನು ಪರಿಣಾಮಕಾರಿ ಸಾಧನಗಳಾಗಿ ಮಾಡುವ ದೃಷ್ಟಿಯಿಂದ ಸಹಕಾರ ಸಂಘಗಳನ್ನು ಸಶಕ್ತ ಘಟಕಗಳಾಗಿ ಪುನರ್ ಸಂಘಟಿಸುವುದು ಅವಶ್ಯಕವೆಂದು ಪರಿಗಣಿಸಲಾಯಿತು. ದುರ್ಬಲ ವರ್ಗಗಳ ಋಣಗಳನ್ನು ಪರಿಹರಿಸುವುದೇ ಅಲ್ಲದೆ ಲಭ್ಯವಿರುವ ಹಣಕಾಸುಗಳ ಸಾಂಪ್ರದಾಯಿಕ ಮೂಲಗಳು ಹೆಚ್ಚುಕಡಿಮೆ ಬತ್ತಿಹೋಗಲು ಕಾರಣವಾದ ಋಣಪರಿಹಾರ ಕ್ರಮದ ಪರಿಣಾಮವಾಗಿ ಸಾಲದ ಅಂತರವನ್ನು ತುಂಬುವ ಅಗತ್ಯತೆಯ ದೃಷ್ಟಿಯಿಂದ ತುರ್ತಾಗಿ ಈ ಸಂಘಗಳನ್ನು ಜೀವ ಸಾಮರ್ಥ್ಯವಿರುವ ಘಟಕಗಳನ್ನಾಗಿ ಪುನಃ ಸಂಘಟಿಸಬೇಕಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ 14ಎ ಪ್ರಕರಣದ ಉಪಬಂಧಗಳನ್ನು ಹಾಗೂ ಸಹಕಾರ ಸಂಘಗಳ ಡೆಪ್ಯುಟಿ ರಿಜಿಸ್ಟ್ರಾರರು ಹೊರಡಿಸಿದ ಆದೇಶಗಳ ಸಿಂಧುತ್ವವನ್ನು ಪ್ರಶ್ನಿಸಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು / ವ್ಯಕ್ತಿಗಳು ಕರ್ನಾಟಕ ಉಚ್ಚ ನ್ಯಾಯಾಲಯದ ಮುಂದೆ ರಿಟ್ ಅರ್ಜಿಯನ್ನು ಸಲ್ಲಿಸಿದವು.

ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿಗಳನ್ನು ವಿಲೆ ಮಾಡುವಾಗ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ 14ಎ ಪ್ರಕರಣದ ಸಂವಿಧಾನಿಕ ಸಿಂಧುತ್ವವನ್ನು ಎತ್ತಿಹಿಡಿದಿದೆ. ಆದರೆ, ಅಧಿನಿಯಮದ 14ಎ ಪ್ರಕರಣದ ಅಡಿಯಲ್ಲಿ ಪ್ರಾಧಿಕಾರಿಗಳು ಹೊರಡಿಸಿದ ಆದೇಶಗಳನ್ನು, ಪ್ರತಿಪಕ್ಷವನ್ನು ವಿಚಾರಿಸತಕ್ಕದ್ದು ಎಂಬ ತತ್ವದ ಅನ್ವಯವನ್ನು ಮಾಡದಿರುವ ಆಧಾರದ ಮೇಲೆ ತಳ್ಳಿಹಾಕಲಾಗಿದೆ.

ಸಂಘಗಳನ್ನು ಸಮ್ಮಿಲನಗೊಳಿಸುವ ಮತ್ತು ಪುನರ್ ಸಂಘಟಿಸುವ ಕಾರ್ಯ ಈಗಾಗಲೇ ನಡೆದಿದ್ದುದರಿಂದ ಮತ್ತು ಸದರಿ ಸಂಘಗಳು ಸಾಕಷ್ಟು ಕಾಲದಿಂದ ಕಾರ್ಯನಿರ್ವಹಿಸುತ್ತಿರುವುದರಿಂದ ಅವುಗಳನ್ನು ಪೂರ್ವಸ್ಥಿತಿಗೆ ತರಲು ಕಾರ್ಯಸಾಧ್ಯವಾಗಿರಲಿಲ್ಲ. ಆದ್ದರಿಂದ 14ಎ ಪ್ರಕರಣದ ಅಡಿಯಲ್ಲಿ ಕ್ರಮವನ್ನು ಕೈಗೊಳ್ಳುವ ಮುಂಚೆ ಪೂರ್ವಾನ್ವಯ ಪರಿಣಾಮದೊಂದಿಗೆ ಅಧಿನಿಯಮಕ್ಕೆ ಸೂಕ್ತ ತಿದ್ದುಪಡಿ ತರುವ ಮೂಲಕ ಸಹಜ ನ್ಯಾಯತತ್ವದ ಅನ್ವಯವನ್ನು ನಿರ್ದಿಷ್ಟವಾಗಿ ಹೊರತುಪಡಿಸಿ, ಈ ಮೊದಲು ತೆಗೆದುಕೊಂಡ ಕ್ರಮವನ್ನು ಮಾನ್ಯಗೊಳಿಸುವುದು ಅವಶ್ಯಕವೆಂದು ಪರಿಗಣಿಸಲಾಯಿತು.

ವಿಧಾನ ಪರಿಷತ್ತು ಅಧಿವೇಶನದಲ್ಲಿ ಇಲ್ಲದಿರುವುದರಿಂದ ಒಂದು ಅಧ್ಯಾದೇಶವನ್ನು ಪ್ರಖ್ಯಾಪಿಸಲಾಯಿತು. ಈ ವಿಧೇಯಕವನ್ನು ಸದರಿ ಅಧ್ಯಾದೇಶದ ಬದಲಾಗಿ ಮಂಡಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 1978ರ ಜೂನ್, 30ರ 4ನೇ ಪುಟದಲ್ಲಿ ಸಂಖ್ಯೆ 1005 ಎಂದು ಪ್ರಕಟಿಸಲಾಗಿದೆ.)

## XIII

**1979ರ ತಿದ್ದುಪಡಿ ಮಾಡುವ ಅಧಿನಿಯಮ 16:–** ಸರ್ಕಾರದ ಕಾರ್ಯನೀತಿಗಳು ಮತ್ತು ಕಾರ್ಯಕ್ರಮಗಳ ಹಿನ್ನೆಲೆಯಲ್ಲಿ ಹಾಗೂ ಅಸ್ತಿತ್ವದಲ್ಲಿರುವ ಅಧಿನಿಯಮದ ವಿವಿಧ ಉಪಬಂಧಗಳನ್ನು ಅನುಷ್ಠಾನಗೊಳಿಸುವಲ್ಲಿ, ಸಹಕಾರ ಇಲಾಖೆಯು ಪಡೆದ ಅನುಭವದ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮಕ್ಕೆ ತಂದ ವಿವಿಧ ತಿದ್ದುಪಡಿಗಳ ಬಗ್ಗೆ ಪರಿಗಣಿಸುವ ಉದ್ದೇಶಕ್ಕಾಗಿ ಸರ್ಕಾರವು, 1968ರ ಡಿಸೆಂಬರ್ ತಿಂಗಳಲ್ಲಿ ಸಹಕಾರ ಇಲಾಖೆಯ ಉಪಸಚಿವರು ಅಧ್ಯಕ್ಷರಾಗಿರುವ ಮತ್ತು ಕೆಲವು ಪ್ರಮುಖ ಸಹಕಾರಿ ಸಂಸ್ಥೆಗಳ ಸರ್ಕಾರೇತರ ಅಧ್ಯಕ್ಷಾಧಿಕಾರಿಗಳು ಮತ್ತು ಸರ್ಕಾರದ ಅಧಿಕಾರಿಗಳು ಸದಸ್ಯರಾಗಿರುವ ಒಂದು ಸಮಿತಿಯನ್ನು ರಚಿಸಿತು. ಸಮಿತಿಯು, ಸಹಕಾರ ಸಂಘಗಳ ವಿವಿಧ ವರ್ಗಗಳ ಕೆಲಸ ಕಾರ್ಯಗಳನ್ನು ಸವಿಸ್ತಾರವಾಗಿ ಪರ್ಯಾಲೋಚಿಸಿದ ತರುವಾಯ, ಅಧಿನಿಯಮಕ್ಕೆ ಕೆಲವು ತಿದ್ದುಪಡಿಗಳನ್ನು ಸೂಚಿಸಿ ತನ್ನ ಶಿಫಾರಸ್ಸುಗಳನ್ನೂ ಸಲ್ಲಿಸಿತು.

ಕೆಲವು ಮಾರ್ಪಾಟುಗಳಿಗೊಳಪಟ್ಟು ಸಮಿತಿಯು ಶಿಫಾರಸ್ಸು ಮಾಡಿದಂತೆ ಅಧಿನಿಯಮವನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 1970ರ ಮಾರ್ಚ್ 16ರ 58ನೇ ಪುಟದಲ್ಲಿ ಸಂಖ್ಯೆ 94 ಎಂದು ಪ್ರಕಟಿಸಲಾಗಿದೆ.)

## XIV

**1980ರ ತಿದ್ದುಪಡಿ ಮಾಡುವ ಅಧಿನಿಯಮ 3:–** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಅಸ್ತಿತ್ವದಲ್ಲಿರುವ ಉಪಬಂಧಗಳ ಅಡಿಯಲ್ಲಿ ಸಹಕಾರ ಸಂಘಗಳ ರಿಜಿಸ್ಟ್ರಾರನು, ತಾನು ಪ್ರಾಧಿಕೃತ ವ್ಯಕ್ತಿಯಿಂದ ಸಹಕಾರ ಸಂಘಗಳ ಲೆಕ್ಕಪತ್ರಗಳನ್ನು ಲೆಕ್ಕಪರಿಶೋಧನೆ ಮಾಡಿಸಲು ಅಧಿಕಾರ ಹೊಂದಿರುವನು.

ಸ್ವತಂತ್ರ ವ್ಯಕ್ತಿಗಳು ಸಹಕಾರ ಸಂಘಗಳ ಲೆಕ್ಕಪತ್ರಗಳನ್ನು ಲೆಕ್ಕಪರಿಶೋಧಿಸುವುದನ್ನು ಖಚಿತಪಡಿಸುವ ದೃಷ್ಟಿಯಿಂದ, ರಾಜ್ಯ ಸರ್ಕಾರವು ಪ್ರತ್ಯೇಕ ಲೆಕ್ಕ ಪರಿಶೋಧನಾ ವಿಭಾಗವೊಂದನ್ನು ಸೃಜಿಸಿದ್ದು, ಮುಖ್ಯ ಲೆಕ್ಕ ಪರಿಶೋಧಕನು ಅದರ ಮುಖ್ಯಸ್ಥನಾಗಿರುವನು. ಈ ವಿಭಾಗವು ಎರಡು ವರ್ಷಗಳಿಂದಲೂ ಹೆಚ್ಚುಕಾಲ ಕಾರ್ಯನಿರ್ವಹಿಸುತ್ತಿದೆ.

ಮುಖ್ಯ ಲೆಕ್ಕ ಪರಿಶೋಧಕನಿಗೆ ಮತ್ತು ಅವನ ಅಧೀನಾಧಿಕಾರಿಗಳಿಗೆ ಶಾಸನಬದ್ಧ ಮಾನ್ಯತೆ ನೀಡುವ ದೃಷ್ಟಿಯಿಂದ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959 ಇದಕ್ಕೆ ಸೂಕ್ತ ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಯಿತು. ವಿಷಯವು ಬಹಳ ತುರ್ತಿನದ್ದಾಗಿದ್ದರಿಂದ, ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧ್ಯಾದೇಶ, 1979ನ್ನು (1979ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 20) ಹೊರಡಿಸಲಾಯಿತು.

ಆದ್ದರಿಂದ ಸದರಿ ಅಧ್ಯಾದೇಶಕ್ಕೆ ಬದಲಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 1980ರ ಫೆಬ್ರವರಿ 27ರ, ಪುಟ 6 ರಲ್ಲಿ ಸಂಖ್ಯೆ 139 ಎಂದು ಪ್ರಕಟಿಸಲಾಗಿದೆ.)

## XV

**1980ರ ತಿದ್ದುಪಡಿ ಮಾಡುವ ಅಧಿನಿಯಮ 4:–** ಕರ್ನಾಟಕ ಸಹಕಾರ ಸಂಘಗಳ ತಿದ್ದುಪಡಿ ಅಧಿನಿಯಮ, 1975ರ ಮೂಲಕ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮವನ್ನು ತಿದ್ದುಪಡಿ ಮಾಡಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮದ 14ಎ ಪ್ರಕರಣವನ್ನು ಮೊದಲ ಬಾರಿಗೆ ಸೇರಿಸಲಾಯಿತು. 14ಎ ಪ್ರಕರಣದ (1)ನೇ ಉಪಪ್ರಕರಣವು, ಸಹಕಾರ ಸಂಘಗಳ ಸಮ್ಮಿಲನ, ವಿಭಜನೆ, ಪುನರ್ ಸಂಘಟನೆಯ ಸಂದರ್ಭದಲ್ಲಿ ಭಾರತದ ರಿಸರ್ವ್ ಬ್ಯಾಂಕು ಲಿಖಿತದಲ್ಲಿ ಪೂರ್ವ ಮಂಜೂರಾತಿ ನೀಡಿರಬೇಕೆಂದು ಉಪಬಂಧಿಸಿದ ಒಂದು ಪರಂತುಕವನ್ನು ಒಳಗೊಂಡಿತ್ತು. 1976ರ ಕರ್ನಾಟಕ ಅಧಿನಿಯಮ 19ರ ಮೂಲಕ ಮತ್ತಷ್ಟು ತಿದ್ದುಪಡಿ ಮಾಡಿದಾಗ ಈ ಪರಂತುಕವನ್ನು ಉಳಿಸಿಕೊಳ್ಳಲಾಯಿತು. ಸಹಕಾರ ಸಂಘಗಳ ಅಧಿನಿಯಮಕ್ಕೆ ಮತ್ತಷ್ಟು ತಿದ್ದುಪಡಿಗಳನ್ನು ಮಾಡುವ ಉದ್ದೇಶವನ್ನು ಹೊಂದಿದ್ದ 1976ರ ಕರ್ನಾಟಕ ಅಧಿನಿಯಮ 70ನ್ನು ಪ್ರಕಟಿಸಿದಾಗ, 1976ರ ಕರ್ನಾಟಕ ಅಧಿನಿಯಮ 70 ರಲ್ಲಿ 14ಎ ಪ್ರಕರಣದ 1ನೇ ಉಪಪ್ರಕರಣವು ಇಲ್ಲದಿದ್ದುದು ಕಂಡುಬಂದಿತು. ಈ ತಿದ್ದುಪಡಿಯಲ್ಲಿ 14ಎ ಪ್ರಕರಣದ 1ನೇ ಉಪಪ್ರಕರಣವನ್ನು ಹೊಸ ಉಪಬಂಧದ ಮೂಲಕ ಪ್ರತಿಯೋಜಿಸಲಾಯಿತು ಮತ್ತು ಪರಂತುಕವನ್ನು ಬಿಟ್ಟುಬಿಡಲಾಯಿತು.

ಆದ್ದರಿಂದ, 1976ರ ಕರ್ನಾಟಕ ಅಧಿನಿಯಮ 70 ರಲ್ಲಿ ಮತ್ತಷ್ಟು ತಿದ್ದುಪಡಿ ಮಾಡಿದಾಗ ಬಿಟ್ಟುಬಿಡಲಾದ ಪರಂತುಕವನ್ನು ಸೇರಿಸುವುದಕ್ಕಾಗಿ 14ಎ ಪ್ರಕರಣಕ್ಕೆ ಒಂದು ತಿದ್ದುಪಡಿ ಮಾಡುವುದು ಅಗತ್ಯವಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 1980ರ ಫೆಬ್ರವರಿ 29, 3ನೇ ಪುಟದಲ್ಲಿ ಸಂಖ್ಯೆ 151 ಎಂದು ಪ್ರಕಟಿಸಲಾಗಿದೆ.)

## XVI

**1984ರ ತಿದ್ದುಪಡಿ ಮಾಡುವ ಅಧಿನಿಯಮ 5:–** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ನಿರ್ವಹಣಾ ಅವಧಿಯಲ್ಲಿ, ಅದರ ಕ್ಷಿಪ್ರ ಅನುಷ್ಠಾನಕ್ಕಾಗಿ ಕೆ.ಹೆಚ್. ಪಾಟೀಲ್ ಸಮಿತಿಯು ಮಾಡಿದ ಕೆಲವು ಶಿಫಾರಸು ಅನುಸಾರ ಕೆಲವು ತಿದ್ದುಪಡಿ ಮಾಡುವುದು ಅಗತ್ಯವಿದೆಯೆಂದು ಕಂಡುಬಂದಿತು. ಸರ್ಕಾರವು, ರಾಜ್ಯದಲ್ಲಿನ ಸಹಕಾರಿ ಹಾಲು ಸಂಘಗಳ ಮತ್ತು ಸಹಕಾರಿ ಹಾಲು ಒಕ್ಕೂಟಗಳ ಲೆಕ್ಕಪತ್ರಗಳ ಲೆಕ್ಕ ಪರಿಶೋಧನೆಗೆ ಒಂದು ಲೆಕ್ಕ ಪರಿಶೋಧನಾ ಮಂಡಳಿಯನ್ನು ರಚಿಸುವುದಕ್ಕಾಗಿ ಲೆಕ್ಕಪರಿಶೋಧನೆಗೆ ಸಂಬಂಧಪಟ್ಟಂಥ ಉಪಬಂಧಗಳನ್ನು ತಿದ್ದುಪಡಿ ಮಾಡುವುದು ಅಗತ್ಯವಾಗಿದೆ. ಚರಸ್ವತ್ತನ್ನು ಅಡವು ಇಡುವ ಆಧಾರದ ಮೇಲೆ ಅಭಿವೃದ್ಧಿ ಕಾರ್ಯಗಳಿಗೆ ನಿಧಿಗಳು ಲಭ್ಯವಾಗುವಂತೆ ಮಾಡುವುದಕ್ಕಾಗಿ ಬ್ಯಾಂಕು, ಆ ಅಭಿವೃದ್ಧಿ ಕಾರ್ಯಗಳನ್ನು ತ್ವರಿತವಾಗಿ ಕೈಗೆತ್ತಿಕೊಳ್ಳಲು ಸಾಧ್ಯವಾಗುವಂತೆ "ಭೂ ಅಭಿವೃದ್ಧಿ ಬ್ಯಾಂಕಿಗೆ" ಗೆ ಸಂಬಂಧಿಸಿದ ಅಧ್ಯಾಯವನ್ನು ಕೂಡ ತಿದ್ದುಪಡಿ ಮಾಡುವುದು ಅಗತ್ಯವಾಗಿದೆ. ಅಧಿನಿಯಮದ ಅಡಿಯಲ್ಲಿ ಅಪರಾಧಗಳನ್ನು ಮಾಡುವ ವ್ಯಕ್ತಿಗಳ ಮೇಲೆ ಹಾಗೆ ಮಾಡಲು ಹಿಂಜರಿಯುವ ಪರಿಣಾಮವನ್ನು ಸೃಷ್ಟಿಸುವ ಸಲುವಾಗಿ ಜುಲ್ಮಾನೆ, ಕಾರಾವಾಸ ಶಿಕ್ಷೆಯ ಮೂಲಕ, ಈ ಅಧಿನಿಯಮದ ಅಡಿಯಲ್ಲಿನ ದಂಡಗಳನ್ನು ಹೆಚ್ಚಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 1984ರ ಫೆಬ್ರವರಿ 29ರ, ಪುಟ 16 ರಲ್ಲಿ ಸಂಖ್ಯೆ 139 ಎಂದು ಪ್ರಕಟಿಸಲಾಗಿದೆ.)

## XVII

**1985ರ ತಿದ್ದುಪಡಿ ಮಾಡುವ ಅಧಿನಿಯಮ 34:–** ಕರ್ನಾಟಕ ರಾಜ್ಯದಲ್ಲಿರುವ ವಿವಿಧ ಸಹಕಾರ ಸಂಸ್ಥೆಗಳ ಸದಸ್ಯರುಗಳಿಂದ ಬರಬೇಕಾಗಿರುವ ದೊಡ್ಡ ಪ್ರಮಾಣದ ಬಾಕಿ ಮೊತ್ತದ ಶೀಘ್ರ ವಸೂಲಿಗಾಗಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಉದ್ದೇಶಿತ ತಿದ್ದುಪಡಿಯು ಸಾರ್ವಜನಿಕ ಹರಾಜಿನಲ್ಲಿ ಸರ್ಕಾರಿ ಸವಾಲಿನ ಮೂಲಕ ಬಾಕಿದಾರರ ಸ್ವತ್ತುಗಳನ್ನು ಖರೀದಿಸುವ ಸಲುವಾಗಿ ಮತ್ತು ಅಂಥ ಸ್ವತ್ತುಗಳನ್ನು, ಸರ್ಕಾರವು ಯುಕ್ತವೆಂದು ಭಾವಿಸಬಹುದಾದಂಥ ವಿಧಾನದಲ್ಲಿ ವಿಲೆ ಮಾಡಲು ರಾಜ್ಯ ಸರ್ಕಾರವನ್ನು ಸಮರ್ಥಗೊಳಿಸುತ್ತದೆ.

2. ವಿಷಯವು ಬಹಳ ತುರ್ತಿನದಾಗಿದ್ದರಿಂದ ಮತ್ತು ವಿಧಾನ ಸಭೆಯು ಅಧಿವೇಶನದಲ್ಲಿ ಇಲ್ಲದಿದ್ದುದರಿಂದ, ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧ್ಯಾದೇಶ, 1985ನ್ನು (1985ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 15) ಹೊರಡಿಸಲಾಯಿತು.

ಸದರಿ ಅಧ್ಯಾದೇಶಕ್ಕೆ ಬದಲಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 1985ರ ಜುಲೈ 29ರ ಪುಟ 3 ರಲ್ಲಿ ಸಂಖ್ಯೆ 405 ಎಂದು ಪ್ರಕಟಿಸಲಾಗಿದೆ.)

## XVIII

**1991ರ ತಿದ್ದುಪಡಿ ಮಾಡುವ ಅಧಿನಿಯಮ 34:–** ಸಹಕಾರಿ ಬಾಕಿಗಳನ್ನು ವಸೂಲು ಮಾಡುವುದಕ್ಕೆ ಸಂಬಂಧಿಸಿದಂತೆ ಇರುವ ಇತರ ಉಪಬಂಧಗಳು ಪರ್ಯಾಪ್ತವೆಂದು ಕಂಡುಬಂದಿರುವುದರಿಂದ ಮತ್ತು ರಾಜ್ಯ ಸರ್ಕಾರವು ಹರಾಜಿನಲ್ಲಿ ಸ್ಥಿರ ಸ್ವತ್ತನ್ನು ಖರೀದಿಸುವುದು ರೈತರಿಗೆ ಅನಾವಶ್ಯಕ ಆತಂಕಕ್ಕೆ ಮತ್ತು ತೊಂದರೆಗೆ ಕಾರಣವಾಗಿರುವುದರಿಂದ, 101-ಸಿ ಪ್ರಕರಣವನ್ನು ಬಿಟ್ಟುಬಿಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 1991ರ ಸೆಪ್ಟೆಂಬರ್ 30ರ ಪುಟ 254 ರಲ್ಲಿ ಸಂಖ್ಯೆ 622 ಎಂದು ಪ್ರಕಟಿಸಲಾಗಿದೆ.)

## XIX

**1998ರ ತಿದ್ದುಪಡಿ ಮಾಡುವ ಅಧಿನಿಯಮ 25:–** ಶ್ರೀ ಕೆ.ಹೆಚ್. ಪಾಟೀಲರು ಅಧ್ಯಕ್ಷರಾಗಿದ್ದ ಸಮಿತಿ ಮತ್ತು ಇತರ ಎರಡು ಸಮಿತಿಗಳಿಂದ ಮಾಡಿದ ಶಿಫಾರಸ್ಸುಗಳನ್ನು ಮತ್ತು ಪ್ರಮುಖ ಸಹಕಾರಿಗಳ ಮತ್ತು ಸಹಕಾರಿ ಇಲಾಖೆಯ ಅಧಿಕಾರಿಗಳು ಮಾಡಿದ ಸಲಹೆಗಳನ್ನು

ದೃಷ್ಟಿಯಲ್ಲಿ ಇಟ್ಟುಕೊಂಡು, ಈ ಮುಂದಿನವುಗಳಿಗಾಗಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು ತಿದ್ದುಪಡಿ ಮಾಡುವುದು ಅಗತ್ಯವೆಂದು ಪರಿಗಣಿಸಲಾಯಿತು,-

(i) ಪ್ರಾಥಮಿಕ ಸಂಘಗಳು, ಮಾಧ್ಯಮಿಕ ಸಂಘಗಳು, ಒಕ್ಕೂಟ ಸಂಘಗಳು ಮತ್ತು ಅಪೆಕ್ಸ್ ಸಂಘಗಳನ್ನು ಪರಿಭಾಷಿಸುವುದು;

(ii) ಒಂದೇ ಕುಟುಂಬದ ಸದಸ್ಯರು ಸಹಕಾರ ಸಂಘದ ನೋಂದಣಿಗಾಗಿ ಅರ್ಜಿ ಸಲ್ಲಿಸುವುದನ್ನು ನಿಷೇಧಿಸುವುದು;

(iii) ಭಾವಿತ ಸಹಕಾರಿ ಸಂಘದ ನೋಂದಣಿ ಮಾಡಲು ಮತ್ತು ಪ್ರಸ್ತಾವವನ್ನು ಸ್ವೀಕರಿಸಿದ ದಿನಾಂಕದಿಂದ ಮೂರು ತಿಂಗಳ ಅವಧಿಯೊಳಗಾಗಿ ಉಪವಿಧಿಗಳನ್ನು ತಿದ್ದುಪಡಿ ಮಾಡಲು ಉಪಬಂಧಿಸುವುದು;

(iv) ಈ ಅಧಿನಿಯಮ, ನಿಯಮ ಮತ್ತು ಉಪವಿಧಿಗಳ ಅಡಿಯಲ್ಲಿ ಸತತ ಮೂರು ವರ್ಷದ ಅವಧಿಗಾಗಿ ಸದಸ್ಯನಾಗಿ ತನ್ನ ಹೊಣೆಗಾರಿಕೆಗಳನ್ನು ಈಡೇರಿಸಲು ವಿಫಲನಾದ ವ್ಯಕ್ತಿಯ ಸದಸ್ಯತ್ವವನ್ನು ಸಮಾಪ್ತಿಗೊಳಿಸಲು ಉಪಬಂಧಿಸುವುದು;

(v) ಸಹಕಾರ ಸಂಘಗಳನ್ನು ಸಮ್ಮಿಲನಗೊಳಿಸಲು, ವಿಭಜಿಸಲು ಮತ್ತು ಪುನರ್ ಸಂಘಟನೆ ಮಾಡಲು ನಿರ್ದೇಶಿಸುವ ರಿಜಿಸ್ಟ್ರಾರನ ಅಧಿಕಾರಗಳನ್ನು ತೆಗೆದುಹಾಕುವುದು;

(vi) ಒಬ್ಬ ತಪ್ಪಿತಸ್ಥ ಸದಸ್ಯನನ್ನು ಸಹಕಾರ ಸಂಘದ ಸಭೆಯಲ್ಲಿ ತನ್ನ ಮತದಾನದ ಹಕ್ಕನ್ನು ಚಲಾಯಿಸುವುದರಿಂದ ನಿಷೇಧಿಸುವುದು;

(vii) ಸಹಕಾರ ಸಂಘಗಳ ಸದಸ್ಯರು ಷೇರುಗಳನ್ನು ಹೊಂದಿರುವುದರ ಮೇಲಿನ ನಿರ್ಬಂಧಗಳನ್ನು ತೆಗೆದುಹಾಕುವುದು;

(viii) ವಾರ್ಷಿಕ ಸಾಮಾನ್ಯ ಸಭೆಯನ್ನು ನಡೆಸುವುದಕ್ಕೆ ಸಂಬಂಧಿಸಿದಂತೆ, ಹೆಚ್ಚು ವ್ಯಾಪಕ ಅವಕಾಶ ಹೊಂದಿರುವಂತೆ 27ನೇ ಪ್ರಕರಣವನ್ನು ಪ್ರತಿಯೋಜಿಸುವುದು;

(ix) ಮುಂದಿನ ಸಮಿತಿಯ ಸದಸ್ಯತ್ವದ ಚುನಾವಣೆಗಾಗಿ ಏರ್ಪಾಟು ಮಾಡುವಂತೆ ಒಂದು ಸಮಿತಿಯನ್ನು ಅಗತ್ಯಪಡಿಸಲು ಮತ್ತು ಅಂಥ ಏರ್ಪಾಟುಗಳನ್ನು ಮಾಡಲು ತಪ್ಪಿದ್ದಕ್ಕೆ ಪರಿಣಾಮಗಳನ್ನು ಉಪಬಂಧಿಸುವುದು;

(x) ಸಹಾಯಕ ಸಂಘಗಳ ಸಮಿತಿಯಲ್ಲಿ ಕೇವಲ ಮೂರು ವ್ಯಕ್ತಿಗಳನ್ನು ನಾಮನಿರ್ದೇಶನಕ್ಕಾಗಿ ಉಪಬಂಧಿಸುವುದು;

(xi) 30ಎ ಮತ್ತು 30ಬಿ ಪ್ರಕರಣಗಳ ಅಡಿಯಲ್ಲಿ ವಿಶೇಷ ಅಧಿಕಾರಿಯನ್ನು ನೇಮಕ ಮಾಡುವ ಸರ್ಕಾರದ ಅಧಿಕಾರಗಳನ್ನು ತೆಗೆದುಹಾಕುವುದು;

(xii) 53ಎ ಪ್ರಕರಣದ ಅಡಿಯಲ್ಲಿ ಸರ್ಕಾರವು ಸಮಿತಿಯ ಒಟ್ಟು ಸಂಖ್ಯೆಯ ಮೂರನೆಯ ಒಂದರಷ್ಟು ನಾಮನಿರ್ದೇಶನ ಮಾಡುವುದನ್ನು ಬಿಟ್ಟುಬಿಡುವುದು;

(xiii) ಸಮಿತಿಯ ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಇತರ ಪದಾಧಿಕಾರಿಗಳ ಚುನಾವಣೆಯಲ್ಲಿ ಅಂಥ ನಾಮನಿರ್ದೇಶಿತ ಸದಸ್ಯರು ಸ್ಪರ್ಧಿಸುವುದನ್ನು ನಿಷೇಧಿಸುವುದು;

(xiv) ಎರಡು ಅವಧಿಗಳ ತರುವಾಯವೂ ಪದಾಧಿಕಾರಗಳು ಮುಂದುವರಿಯಲು ಉಪಬಂಧಿಸುವುದು;

(xv) ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಇತರ ಪದಾಧಿಕಾರಿಗಳ ಚುನಾವಣೆಗೆ ಸಂಬಂಧಿಸಿದಂತೆ ಮತ್ತು ಹಾಗೆ ಸಮಿತಿಯ ಸದಸ್ಯರ ಪದದಲ್ಲಿನ ಆಕಸ್ಮಿಕ ಖಾಲಿಸ್ಥಾನಗಳನ್ನು ತುಂಬುವುದಕ್ಕೆ ಸವಿಸ್ತರವಾದ ಉಪಬಂಧಗಳನ್ನು ಮಾಡುವುದು;

(xvi) ಸಹಕಾರ ಸಂಘದ ಕಾರ್ಯನಿರ್ವಾಹಕನನ್ನು ನೇಮಕ ಮಾಡುವುದಕ್ಕಾಗಿ ಉಪಬಂಧಿಸುವುದು ಮತ್ತು ಅವನ ಅಧಿಕಾರಗಳನ್ನು ಮತ್ತು ಪ್ರಕಾರ್ಯಗಳನ್ನು ಕೂಡ ನಿರ್ದಿಷ್ಟಪಡಿಸುವುದು;

(xvii) ಸಮಿತಿಯ ಸದಸ್ಯರ ಸಂಖ್ಯೆಯು ಕೋರಂಗೆ ಅಗತ್ಯವಾದ ಸಂಖ್ಯೆಗಿಂತ ಕಡಿಮೆ ಇರುವ ಕಾರಣದಿಂದ ಸಂಘವು ಕಾರ್ಯನಿರ್ವಹಿಸದಿರುವ ಸಂದರ್ಭದಲ್ಲಿ ವಿಶೇಷ ಅಧಿಕಾರಿಯನ್ನು ನೇಮಕ ಮಾಡುವುದಕ್ಕಾಗಿ ಉಪಬಂಧಿಸುವುದು;

(xviii) ಹೊಸ ಅಧ್ಯಾಯ Vಎ ಯನ್ನು ಮತ್ತು 39ಎ ಯಿಂದ 39ಕೆ ವರೆಗಿನ ಪ್ರಕರಣಗಳನ್ನು ಸಮಿತಿಯ ಸದಸ್ಯರ ಚುನಾವಣೆಗೆ ಸಂಬಂಧಿಸಿದಂತೆ ವ್ಯಾಪಕ ಉಪಬಂಧಗಳನ್ನು ಹೊಂದಿರುವಂತೆ ಸೇರಿಸುವುದು;

(xix) 121ನೇ ಪ್ರಕರಣದ ಉಪಬಂಧವನ್ನು ಬಿಟ್ಟುಬಿಡುವ ಮೂಲಕ ಅದರ ಅಡಿಯಲ್ಲಿ ಸರ್ಕಾರದ ಅಧಿಕಾರಗಳನ್ನು ತೆಗೆದುಹಾಕುವುದು;

(xx) ಮಾದರಿ ಉಪವಿಧಿಗಳನ್ನು ಸೂಚಿಸಲು ಅಧಿಕಾರ ಕೊಡುವುದು.

ಹಾಗೆ ಕೆಲವು ಪ್ರಾಸಂಗಿಕ ತಿದ್ದುಪಡಿಗಳನ್ನು ಕೂಡ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

(ಸಂವ್ಯಶಾಇ 16 ಶಾಸನ 97ರ ಕಡತದಿಂದ ಪಡೆಯಲಾಗಿದೆ.)

## XX

**2000ದ ತಿದ್ದುಪಡಿ ಮಾಡುವ ಅಧಿನಿಯಮ 2:-** ವಿವಿಧ ಸಮಿತಿಗಳು ಮಾಡಿದ ಶಿಫಾರಸ್ಸುಗಳು ಮತ್ತು ಪ್ರಮುಖ ಸಹಕಾರಿಗಳು ನೀಡಿದ ಸಲಹೆಗಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಈ ಮುಂದಿನವುಗಳಿಗಾಗಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು ತಿದ್ದುಪಡಿ ಮಾಡುವುದು ಅಗತ್ಯವೆಂದು ಪರಿಗಣಿಸಲಾಗಿದೆ,-

(i) ಸಂಘದ ಮತ್ತು ಅದರ ಸದಸ್ಯರ ಹಿತದೃಷ್ಟಿಯಿಂದ ಸಹಕಾರಿ ಸಂಸ್ಥೆಗಳನ್ನು ಆರ್ಥಿಕವಾಗಿ ಸಬಲಗೊಳಿಸುವುದು;

(ii) ಸಹಕಾರ ಸಂಘಗಳ ಅಧಿನಿಯಮದ ಅಡಿಯಲ್ಲಿ ಉದ್ಭವಿಸಿದ ಕೈಗಾರಿಕಾ ವ್ಯಾಜ್ಯದ ಸ್ವರೂಪದ ವ್ಯಾಜ್ಯಗಳನ್ನು ಕೈಗಾರಿಕಾ ನ್ಯಾಯಾಧಿಕರಣಗಳು ಪುರಸ್ಕರಿಸುವುದನ್ನು, ನ್ಯಾಯಾಧಿಕರಣಗಳ ಬಾಹುಳ್ಯವನ್ನು ತಡೆಯುವ ದೃಷ್ಟಿಯಿಂದ ಮತ್ತು ಕೆಲವು ಇತರ ಉದ್ದೇಶಗಳಿಗಾಗಿ ಪ್ರತಿಷೇಧಿಸುವುದು.

ಆದ್ದರಿಂದ ಈ ವಿಧೇಯಕ.

(ವಿ.ಸ. ವಿಧೇಯಕ ಸಂಖ್ಯೆ, 1997ರ 20 ರಿಂದ ಪಡೆಯಲಾಗಿದೆ.)

## XXI

**2000ದ ತಿದ್ದುಪಡಿ ಮಾಡುವ ಅಧಿನಿಯಮ 13:-** ತಿದ್ದುಪಡಿಗಳನ್ನು ಒಳಗೊಂಡ, ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 1997ರ ಮೂಲಕ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ಕ್ಕೆ ಈ ಮುಂದಿನವುಗಳೂ ಸೇರಿದಂತೆ ಹಲವಾರು ತಿದ್ದುಪಡಿಗಳನ್ನು ಮಾಡಲಾಗಿದೆ,-

(i) ಸಹಕಾರ ಸಂಘದ ಪದಾಧಿಕಾರಿಗಳ ಮತ್ತು ಅಧ್ಯಕ್ಷ, ಅಧ್ಯಕ್ಷಾಧಿಕಾರಿ, ಉಪಾಧ್ಯಕ್ಷ ಮತ್ತು ಉಪ ಅಧ್ಯಕ್ಷಾಧಿಕಾರಿಗಳ ಚುನಾವಣೆಯಲ್ಲಿ ನಾಮನಿರ್ದೇಶಿತ ಸದಸ್ಯರ ಮತದಾನದ ಹಕ್ಕನ್ನು ಕಸಿದುಕೊಳ್ಳುವುದು;

(ii) ಸಾರ್ವಜನಿಕ ಹಿತಾಸಕ್ತಿಯಲ್ಲಿ ನಿರ್ದೇಶನ ನೀಡುವ ಅಧಿಕಾರವನ್ನು ಉಪಬಂಧಿಸುವ 30ಬಿ ಪ್ರಕರಣವನ್ನು ಬಿಟ್ಟುಬಿಡುವುದು;

(iii) ಕೆಲವು ಪ್ರಕರಣಗಳಲ್ಲಿ ರಾಜ್ಯ ಸರ್ಕಾರವು ಸಮಿತಿಗೆ ಸದಸ್ಯರನ್ನು ನಾಮನಿರ್ದೇಶಿಸುವುದನ್ನು ಉಪಬಂಧಿಸುವ 53ಎ ಪ್ರಕರಣವನ್ನು ಬಿಟ್ಟುಬಿಡುವುದು.

ತಿದ್ದುಪಡಿ ಮಾಡಿದ ಉಪಬಂಧಗಳನ್ನು ಅನುಷ್ಠಾನಗೊಳಿಸುವಲ್ಲಿ ಸರ್ಕಾರಕ್ಕೆ ಹಲವಾರು ಅಡಚಣೆಗಳು ಕಂಡುಬಂದಿವೆ. ಸರ್ಕಾರವು ವಿವಿಧ ಸಹಕಾರ ಸಂಘಗಳಲ್ಲಿ ಷೇರು ಬಂಡವಾಳದ ರೂಪದಲ್ಲಿ, ಸಾಲದ ರೂಪದಲ್ಲಿ ಮತ್ತು ಸಹಾಯಧನದ ರೂಪದಲ್ಲಿ ಭಾರೀ ಮೊತ್ತದ ಹಣವನ್ನು ಹೂಡಿದೆ. ಅಲ್ಲದೆ, ಸರ್ಕಾರವು ವಿವಿಧ ಸಹಕಾರ ಸಂಸ್ಥೆಗಳಿಂದ ಬರಬೇಕಾಗಿರುವ ಸಾಲ ಮತ್ತು ಬಡ್ಡಿಯ ಮರುಸಂದಾಯಕ್ಕಾಗಿ ಅವುಗಳಿಗೆ ಖಾತರಿ ನೀಡಿದೆ. ಆದ್ದರಿಂದ ಅದು, ಸಾರ್ವಜನಿಕ ಹಿತಾಸಕ್ತಿಯನ್ನು ರಕ್ಷಿಸಲು ಮತ್ತು ಸಹಕಾರ ಸಂಘಗಳ ಷೇರು ಹೂಡಿಕೆದಾರರ ಹಿತಾಸಕ್ತಿಯನ್ನು ರಕ್ಷಿಸಲು ಸರ್ಕಾರವು ಮಧ್ಯಪ್ರವೇಶಿಸುವುದನ್ನು ಸಾಧ್ಯವಾಗಿಸುವ ಒಂದು ಉಪಬಂಧವಿರತಕ್ಕದ್ದೆಂದು ಅಭಿಪ್ರಾಯಪಟ್ಟಿದೆ.

ಆದ್ದರಿಂದ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು ಈ ಮುಂದಿನವುಗಳಿಗಾಗಿ ತಿದ್ದುಪಡಿ ಮಾಡುವುದು ಅಗತ್ಯವೆಂದು ಪರಿಗಣಿಸಲಾಗಿದೆ,-

(i) ನಾಮನಿರ್ದೇಶಿತ ಸದಸ್ಯರು ಸಹಕಾರ ಸಂಘದ ವ್ಯವಸ್ಥಾಪನೆಯಲ್ಲಿ ಪರಿಣಾಮಕಾರಿಯಾಗಿ ಭಾಗವಹಿಸುವ ಉದ್ದೇಶಕ್ಕಾಗಿ ಸಮಿತಿಯ ಪದಾಧಿಕಾರಿಗಳು, ಅಧ್ಯಕ್ಷಾಧಿಕಾರಿಗಳು, ಉಪ ಅಧ್ಯಕ್ಷಾಧಿಕಾರಿಗಳು, ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆಯಲ್ಲಿ ಮತದಾನ ಮಾಡುವ ಹಕ್ಕನ್ನು ಪ್ರದಾನ ಮಾಡುವುದು;

(ii) ಸಾರ್ವಜನಿಕ ಹಿತಾಸಕ್ತಿಯಲ್ಲಿ ನಿರ್ದೇಶನ ನೀಡಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುವ 30ಎ ಉಪಬಂಧವನ್ನು ಪುನಃ ಸೇರಿಸುವುದು;

(iii) ರಾಜ್ಯ ಸರ್ಕಾರವು ಗಮನಾರ್ಹ ಹಣಕಾಸು ನೆರವನ್ನು ನೀಡಿರುವ ಸಂದರ್ಭಗಳಲ್ಲಿ ರಾಜ್ಯಸರ್ಕಾರವು ಸಹಕಾರ ಸಂಘದ ಸಮಿತಿಯ ಸದಸ್ಯರ ನಾಮನಿರ್ದೇಶನ ಮಾಡುವುದನ್ನು ಉಪಬಂಧಿಸುವ 52ಎ ಪ್ರಕರಣವನ್ನು ಪುನಃ ಸೇರಿಸುವುದು.

ವಿಷಯವು ತುರ್ತಿನದಾದ್ದರಿಂದ ಮತ್ತು ಕರ್ನಾಟಕ ವಿಧಾನ ಮಂಡಲದ ಎರಡೂ ಸದನಗಳು ಅಧಿವೇಶನದಲ್ಲಿ ಇಲ್ಲದಿದ್ದುದರಿಂದ, ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧ್ಯಾದೇಶ, 2000ನ್ನು ಪ್ರಖ್ಯಾಪಿಸಲಾಯಿತು.

ಸದರಿ ಅಧ್ಯಾದೇಶದ ಬದಲಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ವಿ.ಸ. ವಿಧೇಯಕ ಸಂಖ್ಯೆ: 2000ರ 13 ರಿಂದ ಪಡೆಯಲಾಗಿದೆ.)

## XXII

**2001ರ ತಿದ್ದುಪಡಿ ಮಾಡುವ ಅಧಿನಿಯಮ 6:-** ಬಜೆಟ್ ಭಾಷಣದಲ್ಲಿ ಮಾಡಿದ ಪ್ರಸ್ತಾವಗಳನ್ನು ಜಾರಿಗೆ ತರುವುದಕ್ಕಾಗಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1957ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(2001ರ ವಿ.ಸ. ವಿಧೇಯಕ ಸಂಖ್ಯೆ 6 ಕಡತ ಸಂಖ್ಯೆ ಸಂವ್ಯಶಾಇ 10 ಶಾಸನ 2001ನ್ನು ನೋಡಿ.)

## XXIII

**2001ರ ತಿದ್ದುಪಡಿ ಮಾಡುವ ಅಧಿನಿಯಮ 24:-** ಸಹಕಾರ ಕ್ಷೇತ್ರದಲ್ಲಿ ಇನ್ನೂ ಉತ್ತಮ ಫಲಿತಾಂಶಗಳನ್ನು ಸಾಧಿಸುವುದಕ್ಕಾಗಿ ಮತ್ತು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ, ಈಗ ಇರುವ ಉಪಬಂಧಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವಲ್ಲಿ ಕಂಡುಬಂದ ಕೆಲವು ತೊಂದರೆಗಳನ್ನು ನಿವಾರಿಸುವುದಕ್ಕಾಗಿ, ಈ ಮುಂದಿನವುಗಳಿಗಾಗಿ ಉಪಬಂಧ ಕಲ್ಪಿಸಲು ಅಧಿನಿಯಮಕ್ಕೆ ತಿದ್ದುಪಡಿ ತರುವುದು ಅವಶ್ಯಕವೆಂದು ಪರಿಗಣಿಸಲಾಗಿದೆ, ಎಂದರೆ.-

(1) "ನೆರವು ಪಡೆದ ಸಂಘ"ದ ಪರಿಭಾಷೆಯನ್ನು, ಸಾಲದ ಅಥವಾ ಅನುದಾನದ ಅಥವಾ ಸಾಲ ಅಥವಾ ಬಡ್ಡಿಯ ಮರುಪಾವತಿಗಾಗಿ ಖಾತರಿಯ ರೂಪದಲ್ಲಿ ನೆರವನ್ನು ಪಡೆಯುವ ಸಂಘಗಳೂ ಒಳಗೊಳ್ಳುವಂತೆ ವಿಸ್ತರಿಸುವುದು.

(2) ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನಾಗಿ ಒಬ್ಬ ವ್ಯಕ್ತಿಯ ನೇಮಕಕ್ಕೆ ಅವಕಾಶ ಕಲ್ಪಿಸುವುದಕ್ಕಾಗಿ, ಮೊದಲು ಇದ್ದ ಉಪಬಂಧವನ್ನು ಪುನಃ ಕಲ್ಪಿಸುವುದು.

(3) ಕರ್ನಾಟಕ ಅಪೀಲು ನ್ಯಾಯ ಮಂಡಲಿ ಅಧಿನಿಯಮ, 1976 ರಲ್ಲಿ ಒಳಗೊಂಡಿರುವ ಉಪಬಂಧಗಳನ್ನು ದೃಷ್ಟಿಯಲ್ಲಿರಿಸಿಕೊಂಡು, 2ಬಿ ಪ್ರಕರಣವು ಅನಗತ್ಯವಾಗಿರುವುದರಿಂದ ಅದನ್ನು ಬಿಟ್ಟುಬಿಡುವುದು.

(4) ಸಹಕಾರ ಸಂಘಗಳ ಉಪವಿಧಿಗಳ ತಿದ್ದುಪಡಿಯ ಸಂಬಂಧದಲ್ಲಿ ಶುಲ್ಕ ವಿಧಿಸಲು ಉಪಬಂಧ ಕಲ್ಪಿಸುವುದು.

(5) ಸ್ವಸಹಾಯ ಗುಂಪುಗಳಿಗೆ ಸಂಘದ ನಾಮಮಾತ್ರ ಸದಸ್ಯರಾಗಿ ಪ್ರವೇಶ ನೀಡುವುದಕ್ಕೆ ಉಪಬಂಧ ಕಲ್ಪಿಸುವುದು.

(6) ಒಬ್ಬ ವ್ಯಕ್ತಿಯು ಒಂದು ಸಹಕಾರ ಸಂಘದ ಸದಸ್ಯನಾಗಿರುವುದು ಯಾವಾಗ ನಿಂತುಹೋಗತಕ್ಕದ್ದೆಂದು ಸೂಚಿಸುವ ಒಂದು ನಿರ್ದಿಷ್ಟ ಉಪಬಂಧವನ್ನು ಹೊಂದುವುದು.

(7) ಸಂಘದ ಸರ್ವಸದಸ್ಯರ ವಾರ್ಷಿಕ ಸಭೆ ನಡೆಸುವುದನ್ನು ರಿಜಿಸ್ಟ್ರಾರರು ಆರು ತಿಂಗಳಿಗೆ ಮೀರದ ಅವಧಿಯವರೆಗೆ ವಿಸ್ತರಿಸುವುದಕ್ಕಾಗಿ ಅವಕಾಶ ಕಲ್ಪಿಸುವ ಮೊದಲಿದ್ದ ಉಪಬಂಧವನ್ನು ಪುನಃ ಕಲ್ಪಿಸುವುದು.

(8) ಅಪೆಕ್ಸ್ ಸಂಘದ ಒಟ್ಟು ಸದಸ್ಯರ ಸಂಖ್ಯೆಯನ್ನು ಈಗಿರುವ 25 ರಿಂದ 32ಕ್ಕೆ ಹೆಚ್ಚಿಸುವುದಕ್ಕಾಗಿ ಮತ್ತು ಒಂದು ಜಿಲ್ಲೆಯ ವ್ಯಾಪ್ತಿಯನ್ನೂ ಮೀರಿ ಕಾರ್ಯಾಚರಣೆ ಪ್ರದೇಶವನ್ನು ಹೊಂದಿರುವ ನಗರ ಸಹಕಾರ ಬ್ಯಾಂಕಿನ ಸಂದರ್ಭದಲ್ಲಿ ಸದಸ್ಯರ ಸಂಖ್ಯೆಯನ್ನು 15ಕ್ಕೆ ಹೆಚ್ಚಿಸುವುದು.

(9) ಸಮಿತಿಯ ಸದಸ್ಯರ ಪದಾವಧಿಯನ್ನು ಈಗ ಇರುವ ಐದು ಸಹಕಾರ ವರ್ಷಗಳಿಂದ ಮೂರು ಸಹಕಾರ ವರ್ಷಗಳಿಗೆ ಇಳಿಸುವುದು.

(10) ನಾಮನಿರ್ದೇಶಿತ ಸದಸ್ಯರು, ಒಂದು ಪ್ರಾಥಮಿಕ ಸಹಕಾರ ಸಂಘದ ಮತ್ತು ಸರ್ಕಾರವು ನಿರ್ದಿಷ್ಟಪಡಿಸಬಹುದಾದಂತೆ ಯಾವುದೇ ಇತರ ವರ್ಗದ ಅಥವಾ ವರ್ಗಗಳ ಪದಾಧಿಕಾರಿಗಳಾಗುವುದಕ್ಕೆ ಅಧಿಕಾರ ಹೊಂದಿರತಕ್ಕದ್ದಲ್ಲವೆಂಬ ಬಗ್ಗೆ ಮತ್ತು ಹಾಗೆ ನಾಮನಿರ್ದೇಶಿತರಾದ ಸದಸ್ಯರು ಸರ್ಕಾರದ ಇಷ್ಟಪರ್ಯಂತ ಪದಧಾರಣ ಮಾಡತಕ್ಕದ್ದೆಂಬ ಬಗ್ಗೆ ಉಪಬಂಧ ಕಲ್ಪಿಸುವುದು.

(11) ಜಿಲ್ಲಾ ಕೇಂದ್ರೀಯ ಸಂಘದ ಅಥವಾ ಒಂದು ಸಂಯುಕ್ತ ಸಂಘದ ಅಥವಾ ಒಂದು ಅಪೆಕ್ಸ್ ಸಂಘದ ಸಮಿತಿಯಲ್ಲಿ ಒಂದು ಸಹಕಾರ ಸಂಘವನ್ನು ಪ್ರತಿನಿಧಿಸುವ ಒಬ್ಬ ವ್ಯಕ್ತಿಯು ಯಾವ ಕೆಲವು ಸಂದರ್ಭಗಳಲ್ಲಿ ಅನರ್ಹತೆಗೊಳಗಾಗುವನೆಂಬ ಬಗ್ಗೆ ಉಪಬಂಧ ಕಲ್ಪಿಸುವುದು.

(12) ಪದಾಧಿಕಾರಿಗಳ ಪದಾವಧಿಯನ್ನು ಈಗ ಇರುವ ಎರಡೂವರೆ ವರ್ಷಗಳಿಂದ ಒಂದು ವರ್ಷಕ್ಕೆ ಇಳಿಸುವುದು.

(13) ಸರ್ಕಾರವು ಅಥವಾ ರಿಜಿಸ್ಟ್ರಾರ್‌ನು ನೆರವುಪಡೆದ ಸಂಘದ ಮುಖ್ಯ ಕಾರ್ಯನಿರ್ವಾಹಕನನ್ನು ನೇಮಕ ಮಾಡುವುದಕ್ಕಾಗಿ ಮತ್ತು ತೆಗೆದುಹಾಕುವುದಕ್ಕಾಗಿ ಉಪಬಂಧ ಕಲ್ಪಿಸುವುದು.

(14) 30ಬಿ ಪ್ರಕರಣದ ಅಡಿಯಲ್ಲಿ ನೀಡಲಾದ ಯಾವುದೇ ನಿರ್ದೇಶನದ ಉಲ್ಲಂಘನೆಯ ಸಂದರ್ಭದಲ್ಲಿ ಸಹ ಒಂದು ಸಮಿತಿಯ ರದ್ದಿಯಾತಿಗಾಗಿ ಉಪಬಂಧ ಕಲ್ಪಿಸುವುದು ಮತ್ತು ಆಡಳಿತಗಾರನ ನೇಮಕಾತಿಯ ಅವಧಿಯನ್ನು ಒಟ್ಟಾರೆ ಒಂದು ವರ್ಷದವರೆಗೆ ಮತ್ತಷ್ಟು ವಿಸ್ತರಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು.

(15) ರಿಜಿಸ್ಟ್ರಾರನು ಸಲ್ಲಿಸಿದ ಒಂದು ವರದಿಯ ಮೇಲೆ ರಾಜ್ಯ ಸರ್ಕಾರವು ಒಂದು ಸಂಘಕ್ಕೆ ಒಬ್ಬ ವಿಶೇಷಾಧಿಕಾರಿಯನ್ನು ನೇಮಕ ಮಾಡುವುದಕ್ಕಾಗಿ ಹಿಂದೆ ಇದ್ದ ಉಪಬಂಧವನ್ನು ಪುನಃ ಕಲ್ಪಿಸುವುದು.

(16) 31ನೇ ಪ್ರಕರಣದ ಅಡಿಯಲ್ಲಿ ಒಬ್ಬ ವಿಶೇಷಾಧಿಕಾರಿಯ ನೇಮಕದ ಅವಧಿಯನ್ನು ಒಟ್ಟಾರೆ ಒಂದು ವರ್ಷದ ಅವಧಿಯವರೆಗೆ ಮತ್ತಷ್ಟು ವಿಸ್ತರಿಸಲು ರಿಜಿಸ್ಟ್ರಾರನಿಗೆ ಅಧಿಕಾರ ನೀಡುವುದು.

(17) ನೈಸರ್ಗಿಕ ವಿಕೋಪಗಳು, ಮುಂತಾದವುಗಳ ಸಂದರ್ಭದಲ್ಲಿ ಸಹಕಾರ ಸಂಘಗಳ ಚುನಾವಣೆಯನ್ನು ಮುಂದೂಡುವುದಕ್ಕೆ ಉಪಬಂಧ ಕಲ್ಪಿಸುವುದು.

(18) ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕರು ಎಲ್ಲಾ ಸಹಕಾರ ಸಂಘಗಳ ಲೆಕ್ಕ ಪರಿಶೋಧನೆಯ ವ್ಯವಸ್ಥೆ ಮಾಡಬೇಕೆಂಬುದಾಗಿ ಹಿಂದೆ ಇದ್ದ ಉಪಬಂಧವನ್ನು ಪುನಃ ಕಲ್ಪಿಸುವುದು.

(19) ಸರ್ಕಾರದ ನಾಮನಿರ್ದೇಶಿತರ ಮತ್ತು ಪದನಿಮಿತ್ತ ಸದಸ್ಯರ ಸಂಬಂಧದಲ್ಲಿ ಅಧಿಭಾರ ವ್ಯವಹರಣೆಗಳನ್ನು ಪ್ರಾರಂಭಿಸುವುದಕ್ಕಾಗಿ ಸ್ಪಷ್ಟ ಉಪಬಂಧ ಕಲ್ಪಿಸುವುದು.

(20) ಅಧಿನಿಯಮದ ಉಪಬಂಧಗಳು 30ಎ ಪ್ರಕರಣಕ್ಕೆ ಅನ್ವಯವಾಗತಕ್ಕದ್ದಲ್ಲವೆಂಬ ಮಾರ್ಪಾಟಿಗೆ ಒಳಪಟ್ಟು ಅವುಗಳ ಅನ್ವಯಿಕೆಯಿಂದ ಸಂಘಗಳಿಗೆ ವಿನಾಯಿತಿ ನೀಡುವ ಬಗ್ಗೆ ಈ ಹಿಂದೆ ಇದ್ದ ಉಪಬಂಧವನ್ನು ಪುನಃ ಕಲ್ಪಿಸುವುದು.

(21) ಮುಖ್ಯ ಕಾರ್ಯನಿರ್ವಾಹಕನು ನಿರ್ಣಯ ಅಥವಾ ಆದೇಶದ ಪ್ರತಿಗಳನ್ನು ರಿಜಿಸ್ಟ್ರಾರನಿಗೆ ಸಲ್ಲಿಸುವುದಕ್ಕಾಗಿ ಮತ್ತು ಕೆಲವು ಸಂದರ್ಭಗಳಲ್ಲಿ ನಿರ್ಣಯ ಅಥವಾ ಆದೇಶವನ್ನು ಹಿಂತೆಗೆದುಕೊಳ್ಳುವುದಕ್ಕಾಗಿ ಅಥವಾ ರದ್ದು ಮಾಡುವುದಕ್ಕಾಗಿ ಉಪಬಂಧ ಕಲ್ಪಿಸುವುದು.

ಕೆಲವು ಆನುಷಂಗಿಕ ಉಪಬಂಧಗಳನ್ನು ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

(2000ದ ವಿ.ಸ. ವಿಧೇಯಕ ಸಂಖ್ಯೆ 32, ಕಡತ ಸಂಖ್ಯೆ: ಸಂವ್ಯಶಾಇ 37 ಶಾಸನ 2000 ವನ್ನು ನೋಡಿ.)

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: ಎಂದು ಪ್ರಕಟಿಸಲಾಗಿದೆ.)

## XXIV

**2004ರ ತಿದ್ದುಪಡಿ ಮಾಡುವ ಅಧಿನಿಯಮ 13:-** ಈ ಮುಂದಿನವುಗಳಿಗಾಗಿ ಉಪಬಂಧ ಕಲ್ಪಿಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ:-

i) ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ, 1997ರ ಅಡಿಯಲ್ಲಿ ಸಹಕಾರಿಯನ್ನು ಸಹಕಾರ ಸಂಘವಾಗಿ ಪರಿವರ್ತಿಸುವುದು;

ii) ವ್ಯಕ್ತಿಗಳಿಗೆ ಇರುವಂತೆಯೇ ಸಹಕಾರಿ ಸಂಘಗಳಿಗೂ ಅವು ಪ್ರವೇಶ ಪಡೆದ 12 ತಿಂಗಳುಗಳ ನಂತರ ಮತ ಚಲಾಯಿಸುವ ಅಧಿಕಾರ ನೀಡುವುದು;

iii) 26ಎ ಮತ್ತು 26ಬಿ ಪ್ರಕರಣದ ಅಡಿಯಲ್ಲಿ, ಸಹಕಾರ ಬ್ಯಾಂಕಿನ ಸಂಬಂಧದಲ್ಲಿ - ಭಾರತದ ರಿಸರ್ವ್ ಬ್ಯಾಂಕಿನ ಪೂರ್ವ ಮಂಜೂರಾತಿಯನ್ನು ಪಡೆಯುವುದು;

iv) ಸಮಿತಿಯು ವಾರ್ಷಿಕ ಸರ್ವ ಸದಸ್ಯರ ಸಭೆಯನ್ನು ನಡೆಸಲು ವಿಫಲವಾದಲ್ಲಿ ರಿಜಿಸ್ಟ್ರಾರನು ಮಹಾಸಭೆಯನ್ನು ನಡೆಸುವುದು;

v) ಒಂದುಗೂಡಿದ ಅಥವಾ ಮಾನ್ಯತೆ ಪಡೆದ ಅಥವಾ ವಿಭಾಗದ ನಂತರ ರಚನೆಯಾದ ಸಹಕಾರ ಸಂಘದ ಅಥವಾ ಸಹಕಾರಿಗಳ ನೋಂದಣಿಯ ದಿನಾಂಕದಿಂದ ಮೂರು ತಿಂಗಳುಗಳ ಒಳಗಾಗಿ ಚುನಾವಣೆಯನ್ನು ನಡೆಸತಕ್ಕದೆಂದು ಮತ್ತು ಸದರಿ ಮೂರು ತಿಂಗಳುಗಳ ಅವಧಿಗಾಗಿ ಆಡಳಿತಾಧಿಕಾರಿಯನ್ನು ನೇಮಿಸತಕ್ಕದ್ದೆಂದು ಉಪಬಂಧಿಸುವುದು;

vi) 30, 31, 59 ಮತ್ತು 64ನೇ ಪ್ರಕರಣದ ಅಡಿಯಲ್ಲಿ ಅಧಿಕಾರಗಳನ್ನು ರಿಜಿಸ್ಟ್ರಾರನಲ್ಲಿ ನಿಹಿತಗೊಳಿಸುವುದು;

vii) 12, 17, 31ನೇ ಪ್ರಕರಣಗಳ ಅಡಿಯಲ್ಲಿಯ ರಿಜಿಸ್ಟ್ರಾರನ ಆದೇಶಗಳ ವಿರುದ್ಧ ಅಪೀಲುಗಳಿಗೆ ಉಪಬಂಧ ಕಲ್ಪಿಸುವುದು;

viii) ಲೆಕ್ಕ ಪರಿಶೋಧನೆಗೆ ಸಂಬಂಧಿಸಿದ ಅಪರಾಧಗಳ ಬಗ್ಗೆ ರಾಜಿ ಮಾಡಿಕೊಳ್ಳಲು ಅಧಿಕಾರವನ್ನು ಸಹಕಾರಿ ಲೆಕ್ಕ ಪರಿಶೋಧನಾ ನಿರ್ದೇಶಕರಲ್ಲಿ ನಿಹಿತಗೊಳಿಸುವುದು.

ಮತ್ತು ಸನ್ಮಾನ್ಯ ಉಚ್ಚ ನ್ಯಾಯಾಲಯವು ರಿ.ಅ. ಸಂಖ್ಯೆ: 1899-1912/2001 ರಲ್ಲಿ ಮತ್ತು ರಿಟ್ ಅರ್ಜಿ ಸಂಖ್ಯೆ: 21461/1999 ರಲ್ಲಿ ನೀಡಿದ ತೀರ್ಪನ್ನು ದೃಷ್ಟಿಯಲ್ಲಿಟ್ಟುಕೊಂಡು ಕೆಲವು ಆನುಷಂಗಿಕ ತಿದ್ದುಪಡಿಗಳನ್ನು ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

(2004ರ ವಿಧಾನಸಭೆಯ ವಿಧೇಯಕ 1 ರಿಂದ ಪಡೆಯಲಾಗಿದೆ).

## 1959ರ [1][ಕರ್ನಾಟಕ ಅಧಿನಿಯಮ][1] ಸಂಖ್ಯೆ 11

(1959ರ ಆಗಸ್ಟ್ ಇಪ್ಪತ್ತನೆಯ ದಿನದಂದು ಕರ್ನಾಟಕ ರಾಜ್ಯಪತ್ರದಲ್ಲಿ ಮೊದಲು ಪ್ರಕಟವಾಗಿದೆ)

# ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959

(1959ರ ಆಗಸ್ಟ್ ಹನ್ನೊಂದನೆಯ ದಿನದಂದು ರಾಷ್ಟ್ರಪತಿಯ ಅನುಮತಿ ಪಡೆದಿದೆ)

(1964ರ 40, 1966ರ 27, 1967ರ 16, 1972ರ 1, 1973ರ 14, 1975ರ 2, 1975ರ 39, 1976ರ 19, 70 ಮತ್ತು 71, 1978ರ 14, 1979ರ 16, 1980ರ 3 ಮತ್ತು 4, 1984ರ 5, 1985ರ 34, 1991ರ 34, 1998ರ 25, 2000ರ 2, 2000ರ 13, 2001ರ 6, 2001ರ 24 ಮತ್ತು 2004ರ 13 ಈ ಅಧಿನಿಯಮಗಳ ಮೂಲಕ ತಿದ್ದುಪಡಿಯಾದಂತೆ)

[1][ಕರ್ನಾಟಕ ರಾಜ್ಯ][1] ದಲ್ಲಿ ಸಹಕಾರ ಸಂಘಗಳಿಗೆ ಸಂಬಂಧಿಸಿದ ಕಾನೂನುಗಳನ್ನು ಕ್ರೋಡೀಕರಿಸುವ ಮತ್ತು ತಿದ್ದುಪಡಿ ಮಾಡುವ ಅಧಿನಿಯಮ.

[1][ಕರ್ನಾಟಕ ರಾಜ್ಯ][1] ದಲ್ಲಿ ಸಹಕಾರ ಸಂಘಗಳಿಗೆ ಸಂಬಂಧಿಸಿದ ಕಾನೂನುಗಳನ್ನು ಕ್ರೋಡೀಕರಿಸುವುದು ಮತ್ತು ತಿದ್ದುಪಡಿ ಮಾಡುವುದು ವಿಹಿತವಾಗಿರುವುದರಿಂದ;

ಭಾರತ ಗಣರಾಜ್ಯದ ಹತ್ತನೆಯ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕುದು:-

## ಅಧ್ಯಾಯ - I

### ಪ್ರಾರಂಭಿಕ

1. **ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ:-** (1) ಈ ಅಧಿನಿಯಮವನ್ನು [1][ಕರ್ನಾಟಕ][1] ಸಹಕಾರ ಸಂಘಗಳ ಅಧಿನಿಯಮ, 1959 ಎಂದು ಕರೆಯತಕ್ಕುದು.

(2) ಇದು ಇಡೀ [1][ಕರ್ನಾಟಕ ರಾಜ್ಯ][1] ಕ್ಕೆ ವ್ಯಾಪ್ತವಾಗತಕ್ಕುದು.

(3) ಇದು ರಾಜ್ಯ ಸರ್ಕಾರವು, ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ [2][ದಿನಾಂಕ][2]ದಂದು ಜಾರಿಗೆ ಬರತಕ್ಕುದು.

2. **ಪರಿಭಾಷೆಗಳು:-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

[3][(ಎ)'ಅಪೆಕ್ಸ್ ಸಂಘ ' ಎಂದರೆ ಇಡೀ ರಾಜ್ಯದಾದ್ಯಂತ ತನ್ನ ಕಾರ್ಯಾಚರಣೆಯನ್ನು ವಿಸ್ತರಿಸಿರುವ ಪೆಡರಲ್ ಸಂಘ;

(ಎ1) 'ಸಹಾಯ ಪಡೆದ ಸಂಘ ' ಎಂದರೆ [4][ಸಾಲದ ಅಥವಾ ಬಡ್ಡಿಯ ಮರುಪಾವತಿಗಾಗಿ ಸರ್ಕಾರದಿಂದ ಷೇರು ಬಂಡವಾಳದ ಅಥವಾ ಸಾಲದ ಅಥವಾ ಅನುದಾನದ ಅಥವಾ ಖಾತರಿಯ][4] ರೂಪದಲ್ಲಿ ಸರ್ಕಾರದ ನೆರವನ್ನು ಪಡೆದುಕೊಂಡಿರುವ ಸಹಕಾರ ಸಂಘ;"][3]

[5][(ಎ2)][5] "ಉಪವಿಧಿಗಳು" ಎಂದರೆ ಈ ಅಧಿನಿಯಮದ ಮೇರೆಗೆ ನೋಂದಾಯಿತ ವಾಗಿರುವ ಅಥವಾ ನೋಂದಾಯಿತವಾಗಿದೆಯೆಂದು ಭಾವಿಸಲಾಗುವ ಮತ್ತು ತತ್ಕಾಲದಲ್ಲಿ ಜಾರಿಯಲ್ಲಿರುವ ಉಪವಿಧಿಗಳು; ಮತ್ತು ಉಪವಿಧಿಗಳ ನೋಂದಾಯಿತ ತಿದ್ದುಪಡಿಯು ಇದರಲ್ಲಿ ಒಳಗೊಳ್ಳುತ್ತದೆ;

[6][ಎ3) 'ಮುಖ್ಯ ಕಾರ್ಯನಿರ್ವಾಹಕ' ಎಂದರೆ ಯಾವುದೇ ಪದನಾಮದಿಂದ ಕರೆಯಲಾಗುವ ಸಹಕಾರ ಸಂಘದ ಯಾರೇ ನೌಕರ ಮತ್ತು ಇದು, ಈ ಅಧಿನಿಯಮ, ನಿಯಮಗಳ ಅಥವಾ ಉಪ ವಿಧಿಗಳ ಮೇರೆಗೆ ಮುಖ್ಯ ಕಾರ್ಯನಿರ್ವಾಹಕನ ಪ್ರಕಾರ್ಯಗಳನ್ನು ನಿರ್ವಹಿಸುವ ರಾಜ್ಯ ಸರ್ಕಾರದ ನೌಕರ, ಯಾವುದೇ ಇತರ ಸಂಸ್ಥೆಯ ಅಥವಾ ಸಹಕಾರ ಸಂಘದ ನೌಕರನನ್ನು ಒಳಗೊಳ್ಳುತ್ತದೆ;][6]

---

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. ಈ ಅಧಿನಿಯಮವು 1.6.1960 ರಿಂದ ಅಧಿಸೂಚನೆಯ ಮೂಲಕ ಜಾರಿಗೆ ಬಂದಿದೆ. ಅಧಿಸೂಚನೆಯ ಪಾಠವು 82ನೇ ಪುಟದಲ್ಲಿದೆ.
3. 1998ರ ಕರ್ನಾಟಕ ಅಧಿನಿಯಮ ಸಂಖ್ಯೆ 25ರ ಮೂಲಕ 15-8-98 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಪ್ರತಿಯೋಜಿಸಲಾಗಿದೆ.
5. 1998ರ ಕರ್ನಾಟಕ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಮರುಸಂಖ್ಯೆ ನೀಡಲಾಗಿದೆ.
6. 1998ರ ಕರ್ನಾಟಕ ಅಧಿನಿಯಮ ಸಂಖ್ಯೆ 25ರ ಮೂಲಕ 15-8-1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][ಎ4) 'ನಿರ್ದೇಶಕರು ಸಹಕಾರಿ ಲೆಕ್ಕ ಪರಿಶೋಧನೆ' ಎಂದರೆ ಈ ಅಧಿನಿಯಮದ ಮೇರೆಗೆ ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರ ಪ್ರಕಾರ್ಯಗಳನ್ನು [2][ನಿರ್ವಹಿಸಲು ನೇಮಕಗೊಂಡ ಒಬ್ಬ ವ್ಯಕ್ತಿ][2] ಮತ್ತು ಇದು ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರು ತಮ್ಮ ಎಲ್ಲಾ ಅಥವಾ ಯಾವುದೇ ಅಧಿಕಾರಗಳನ್ನು ಚಲಾಯಿಸುವಲ್ಲಿ ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ನೆರವು ನೀಡಲು ನೇಮಕಗೊಂಡ ಸಹಕಾರ ಲೆಕ್ಕ ಪರಿಶೋಧನಾ ಅಡಿಷನಲ್ ನಿರ್ದೇಶಕರು, ಸಹಕಾರ ಲೆಕ್ಕ ಪರಿಶೋಧನಾ ಜಂಟಿ ನಿರ್ದೇಶಕ, ಸಹಕಾರ ಲೆಕ್ಕ ಪರಿಶೋಧನಾ ಉಪ ನಿರ್ದೇಶಕ ಮತ್ತು ಸಹಕಾರ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರನ್ನು ಒಳಗೊಳ್ಳುತ್ತದೆ;][1]

(ಬಿ) "ಸಮಿತಿ" ಎಂದರೆ ಸಂಘದ ವ್ಯವಹಾರಗಳ ಕಾರ್ಯನಿರ್ವಹಣೆಯನ್ನು ವಹಿಸಿಕೊಟ್ಟ ಯಾವುದೇ ಹೆಸರಿನಿಂದ ಕರೆಯಲಾಗುವ ಸಹಕಾರ ಸಂಘದ ಆಡಳಿತ ಮಂಡಲಿ;

[3][ಬಿ-1) 'ಸಹಕಾರ ಬ್ಯಾಂಕ್' ಎಂದರೆ ಬ್ಯಾಂಕಿಂಗ್ ವ್ಯವಹಾರವನ್ನು ಮಾಡುತ್ತಿರುವ ಸಹಕಾರಿ ಸಂಘ;

ವಿವರಣೆ: ಈ ಖಂಡದ ಉದ್ದೇಶಕ್ಕಾಗಿ, "ಬ್ಯಾಂಕಿಂಗ್" ಎಂಬುದು ಬ್ಯಾಂಕಿಂಗ್ ವಿನಿಯಮನ ಅಧಿನಿಯಮ, 1949 (ಕೇಂದ್ರ ಅಧಿನಿಯಮ 1949ರ 10)ರ 5ನೇ ಪ್ರಕರಣದಲ್ಲಿ ಅದಕ್ಕೆ ನೀಡಿರುವ ಅರ್ಥವನ್ನೇ ಹೊಂದಿರತಕ್ಕದ್ದು;][3]

(ಸಿ) 'ಸಹಕಾರ ಸಂಘ' ಎಂದರೆ ಈ ಅಧಿನಿಯಮದ ಮೇರೆಗೆ ನೋಂದಾಯಿತವಾಗಿರುವ ಅಥವಾ ನೋಂದಾಯಿತವಾಗಿದೆಯೆಂದು ಭಾವಿಸಲ್ಪಡುವ ಸಂಘ;

(ಡಿ) 'ನಿಯಮಿತ ಹೊಣೆಯ ಸಹಕಾರ ಸಂಘ' ಎಂದರೆ ಯಾವ ಸಂಘದ ಸಮಾಪನದ ಸಂದರ್ಭದಲ್ಲಿ ಸಂಘದ ಋಣದ ಬಗ್ಗೆ ಸದಸ್ಯರ ಹೊಣೆಯು ಅದರ ಉಪವಿಧಿಗಳಿಂದ-

(i) ಅವರು ಹೊಂದಿದ್ದ ಷೇರುಗಳ ಮೇಲೆ ಸಂದಾಯವಾಗದ ಯಾವುದೇ ಮೊಬಲಗು ಇದ್ದಲ್ಲಿ, ಅಷ್ಟಕ್ಕೆ; ಅಥವಾ

(ii) ಸಂಘದ ಆಸ್ತಿಗೆ ವಂತಿಗೆ ನೀಡಲು ಅವರು ಒಪ್ಪಿಕೊಂಡಿರುವ ಮೊಬಲಗಿನ ಮಟ್ಟಿಗೆ

- ಸೀಮಿತವಾಗಿರುವುದೋ ಆ ಸಹಕಾರಿ ಸಂಘ;

[3][ಡಿ1) 'ಸಹಕಾರಿ ವರ್ಷ ಅಥವಾ ವರ್ಷ' ಎಂದರೆ ಏಪ್ರಿಲ್ ಮೊದಲ ದಿನದಿಂದ ಆರಂಭವಾಗುವ ವರ್ಷ.][3]

[4][(ಡಿ-2) "ಸಹಕಾರಿ" ಎಂದರೆ ಕರ್ನಾಟಕ ಸೌಹರ್ದ ಸಹಕಾರಿ ಅಧಿನಿಯಮ, 1997ರ (2000ದ ಕರ್ನಾಟಕ ಅಧಿನಿಯಮ 17) ಅಡಿಯಲ್ಲಿ ನೋಂದಾಯಿತವಾದ ಒಂದು ಸಹಕಾರಿ ಮತ್ತು ಇದು ಸಂಯುಕ್ತ ಸಹಕಾರಿ ಹಾಗೂ ಒಕ್ಕೂಟ ಸಹಕಾರಿ ಇವುಗಳನ್ನು ಒಳಗೊಳ್ಳುತ್ತದೆ.][4]

(ಇ) 'ನಿಯಮಿತವಲ್ಲದ ಹೊಣೆಯ ಸಹಕಾರ ಸಂಘ' ಎಂದರೆ ಯಾವ ಸಂಘದ ಸಮಾಪನದ ಸಂದರ್ಭದಲ್ಲಿ ಅದರ ಎಲ್ಲ ಬಾಧ್ಯತೆಗಳ ಸಲುವಾಗಿ ಮತ್ತು ಸಂಬಂಧವಾಗಿ ಹಾಗೂ ಸಂಘದ ಆಸ್ತಿಯಲ್ಲಿದ್ದ ಯಾವುದಾದರೂ ಕೊರತೆಗಾಗಿ ಹಣ ನೀಡಲು ಅದರ ಸದಸ್ಯರು ಒಟ್ಟಾಗಿ ಮತ್ತು ಬಿಡಿಯಾಗಿ ಹೊಣೆಗಾರರಾಗಿರುವರೋ ಆ ಸಹಕಾರ ಸಂಘ;

[5][(ಇ-1) "ಸಾಲ ನೀಡುವ ಏಜೆನ್ಸಿ" ಎಂದರೆ ಕರ್ನಾಟಕ ಕೃಷಿ ಸಾಲ ನೀಡಿಕೆ ಕಾರ್ಯಾಚರಣೆಗಳು ಮತ್ತು ಸಂಕೀರ್ಣ ಉಪಬಂಧಗಳ ಅಧಿನಿಯಮ, 1974ರಲ್ಲಿ ಪರಿಭಾಷಿಸಲಾದ ಸಾಲನೀಡುವ ಏಜೆನ್ಸಿ;][5] [6][ಮತ್ತು ಇದರಲ್ಲಿ ಸಹಕಾರ ಸಂಘಕ್ಕೆ ಹಣಕಾಸು ನೆರವು ನೀಡುವ ಮತ್ತು ರಾಜ್ಯ ಸರ್ಕಾರವು ಕಾಲದಿಂದ ಕಾಲಕ್ಕೆ ಅಧಿಸೂಚಿಸುವ ಯಾವುದೇ ಇತರೆ ನಿಕಾಯ ಅಥವಾ ನಿಗಮ ಅಥವಾ ಹಣಕಾಸು ಸಂಸ್ಥೆ ಸೇರುತ್ತದೆ;][6]

[7][[8][(ಇ-2)][8] 'ಠೇವಣಿ ವಿಮಾ ನಿಗಮ' ಎಂದರೆ ಠೇವಣಿ ವಿಮಾ ನಿಗಮ ಅಧಿನಿಯಮ, 1961 (1961ರ ಕೇಂದ್ರ ಅಧಿನಿಯಮ 47)ರ 3ನೇ ಪ್ರಕರಣದ ಮೇರೆಗೆ ಸ್ಥಾಪಿತವಾದ ಠೇವಣಿ ವಿಮಾ ನಿಗಮ;

[6][(ಇ-3) 'ನೌಕರ ' ಎಂದರೆ ಸಹಕಾರ ಸಂಘದ ಸಂಬಳ ತೆಗೆದುಕೊಳ್ಳುವ ನೌಕರ ಮತ್ತು ಇದು, ಸರ್ಕಾರಿ ಸಂಘದಲ್ಲಿ ತಾತ್ಕಾಲಿಕವಾಗಿ ಕೆಲಸ ಮಾಡುತ್ತಿರುವ ರಾಜ್ಯ ಸರ್ಕಾರದ ಅಧಿಕಾರಿ ಅಥವಾ ಯಾವುದೇ ಇತರೆ ಸಂಸ್ಥೆಯ ಅಥವಾ ಸಹಕಾರ ಸಂಘದ ಯಾರೇ ನೌಕರನನ್ನು ಒಳಗೊಳ್ಳುತ್ತದೆ;

(ಇ-4) 'ಫೆಡರಲ್ ಸಂಘ ' ಎಂದರೆ ಸದಸ್ಯತ್ವವು ವ್ಯಕ್ತಿಗಳಿಗೆ ಮುಕ್ತವಾಗಿರದ ಸಹಕಾರ ಸಂಘ:

ಪರಂತು, ಈ ಖಂಡದಲ್ಲಿರುವ ಯಾವುದೂ, ನಾಮಮಾತ್ರದ ಸದಸ್ಯರಾಗಿ ವ್ಯಕ್ತಿಗಳನ್ನು ಸೇರಿಸಿಕೊಳ್ಳುವುದಕ್ಕೆ ಅನ್ವಯವಾಗತಕ್ಕದ್ದಲ್ಲ;][6]

[8][(ಇ-5)][8] "ಹಣಕಾಸು ನೀಡಿಕೆ ಬ್ಯಾಂಕ್" ಎಂದರೆ ಇತರ ಸಹಕಾರ ಸಂಘಗಳಿಗೆ ನಗದು ರೂಪದಲ್ಲಿ ಅಥವಾ ವಸ್ತು ರೂಪದಲ್ಲಿ ಮುಂಗಡ ನೀಡಿಕೆಯನ್ನು ತನ್ನ ಮುಖ್ಯ ಉದ್ದೇಶವಾಗಿ ಹೊಂದಿರುವ ಒಂದು ಸಹಕಾರ ಸಂಘ;][7]

1. 1998ರ ಕರ್ನಾಟಕ ಅಧಿನಿಯಮ ಸಂಖ್ಯೆ 25ರ ಮೂಲಕ 15-8-1998 ರಿಂದ ಜಾರಿಗೆ ಬರುವಂತೆ ಮರು ಸಂಖ್ಯೆ ನೀಡಲಾಗಿದೆ ಮತ್ತು ಪ್ರತಿಯೋಜಿಸಲಾಗಿದೆ.
2. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಪ್ರತಿಯೋಜಿಸಲಾಗಿದೆ.
3. 1998ರ ಕರ್ನಾಟಕ ಅಧಿನಿಯಮ ಸಂಖ್ಯೆ 25ರ ಮೂಲಕ 15-8-98 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಸೇರಿಸಲಾಗಿದೆ.
5. 1975ರ ಅಧಿನಿಯಮ ಸಂಖ್ಯೆ 2ರ ಮೂಲಕ 17-7-1975ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
6. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ15-8-1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
7. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
8. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15-8-1998 ರಿಂದ ಜಾರಿಗೆ ಬರುವಂತೆ ಮರುಸಂಖ್ಯೆ ನೀಡಲಾಗಿದೆ.

(ಎಫ್) "ಸದಸ್ಯ" ಎಂದರೆ ಸಹಕಾರ ಸಂಘದ ನೋಂದಣಿ ಕೋರಿ ಸಲ್ಲಿಸಿದ ಅರ್ಜಿಯಲ್ಲಿ ಸೇರಿದ ಮತ್ತು ಹಾಗೆ ನೋಂದಣಿಯಾದ ತರುವಾಯ ಈ ಅಧಿನಿಯಮ, ನಿಯಮಗಳು ಮತ್ತು ಉಪವಿಧಿಗಳಿಗೆ ಅನುಸಾರವಾಗಿ ಸದಸ್ಯತ್ವಕ್ಕೆ ಪ್ರವೇಶ ಪಡೆದ ವ್ಯಕ್ತಿ ಮತ್ತು ಅದರಲ್ಲಿ ನಾಮಮಾತ್ರದ ಹಾಗೂ ಸಹ ಸದಸ್ಯ ಇವರು ಸೇರಿರುತ್ತಾರೆ;

[1][(ಜಿ) 'ಪದಾಧಿಕಾರಿ' ಎಂದರೆ ಅಧ್ಯಕ್ಷ, ಉಪಾಧ್ಯಕ್ಷ, ಸಭಾಧ್ಯಕ್ಷ, ಉಪ ಸಭಾಧ್ಯಕ್ಷ, ಸಮಾಪಕ, ಆಡಳಿತಾಧಿಕಾರಿ, ವಿಶೇಷ ಅಧಿಕಾರಿ ಮತ್ತು ಇದು ಸಮಿತಿಯ ಸದಸ್ಯನನ್ನು ಅಥವಾ ಸಹಕಾರ ಸಂಘದ ವ್ಯವಹಾರಕ್ಕೆ ಸಂಬಂಧಪಟ್ಟ ಯಾವುದೇ ಅಧಿಕಾರವನ್ನು ಚಲಾಯಿಸಲು ಅಥವಾ ಯಾವುದೇ ಪ್ರಕಾರ್ಯವನ್ನು ನಿರ್ವಹಿಸಲು ಮತ್ತು ಸಂಘದ ವ್ಯವಹಾರಕ್ಕೆ ಸಂಬಂಧಪಡುವ ಕಾರ್ಯನೀತಿಗಳ ಬಗ್ಗೆ ನಿರ್ದೇಶನ ನೀಡಲು ಅಧಿಕಾರ ಹೊಂದಿರುವ ನೌಕರನಲ್ಲದ ಯಾರೇ ಇತರೆ ವ್ಯಕ್ತಿಯನ್ನು ಒಳಗೊಳ್ಳುತ್ತದೆ.][1]

(ಹೆಚ್) "ನಿಯಮಿಸಲಾದುದು" ಎಂದರೆ ಈ ಅಧಿನಿಯಮದ ಮೇರೆಗೆ ರಚಿಸಲಾದ ನಿಯಮಗಳ ಮೂಲಕ ನಿಯಮಿಸಲಾದುದು;

[2][(ಹೆಚ್-1) 'ಪ್ರಾಥಮಿಕ ಸಂಘ' ಎಂದರೆ ಬೇರೊಂದು ಸಹಕಾರ ಸಂಘಕ್ಕೆ ಸದಸ್ಯತ್ವದ ಅವಕಾಶವಿಲ್ಲದ ಸಹಕಾರ ಸಂಘ "][2]

[3][(ಐ) 'ರಿಜಿಸ್ಟ್ರಾರ್' ಎಂದರೆ ಈ ಅಧಿನಿಯಮದ ಮೇರೆಗೆ ಸಹಕಾರ ಸಂಘಗಳ ರಿಜಿಸ್ಟ್ರಾರನ ಪ್ರಕಾರ್ಯಗಳನ್ನು ನೆರವೇರಿಸಲು ನಿಯುಕ್ತನಾದ ವ್ಯಕ್ತಿ; ಮತ್ತು ಅದರಲ್ಲಿ ರಿಜಿಸ್ಟ್ರಾರನ ಎಲ್ಲ ಅಧಿಕಾರಗಳನ್ನು ಅಥವಾ ಅವುಗಳಲ್ಲಿ ಯಾವೊಂದನ್ನು ಚಲಾಯಿಸುವಾಗ ಅವನಿಗೆ ನೆರವು ನೀಡಲು ನಿಯುಕ್ತನಾದ ಸಹಕಾರ ಸಂಘಗಳ ಅಧಿಕ ರಿಜಿಸ್ಟ್ರಾರ್, ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್, ಸಹಕಾರ ಸಂಘಗಳ ಉಪ ರಿಜಿಸ್ಟ್ರಾರ್ ಮತ್ತು ಸಹಕಾರ ಸಂಘಗಳ ಸಹಾಯಕ ರಿಜಿಸ್ಟ್ರಾರ್ ಇವರು ಸೇರುತ್ತಾರೆ;][3]

[4][(ಐ-1) 'ರಿಸರ್ವ್ ಬ್ಯಾಂಕ್' ಎಂದರೆ ಭಾರತೀಯ ರಿಸರ್ವ್‌ಬ್ಯಾಂಕ್ ಅಧಿನಿಯಮ, 1934ರ (1934ರ ಕೇಂದ್ರಾಧಿನಿಯಮ 2) ಮೇರೆಗೆ ರಚಿತವಾದ ಭಾರತೀಯ ರಿಸರ್ವ್ ಬ್ಯಾಂಕ್;][4]

(ಜೆ) 'ನಿಯಮಗಳು' ಎಂದರೆ ಈ ಅಧಿನಿಯಮದ ಮೇರೆಗೆ ರಚಿಸಲಾದ ನಿಯಮಗಳು;

[1][(ಜೆ-1) 'ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡ' ಎಂದರೆ ತತ್ಕಾಲದಲ್ಲಿ ಜಾರಿಯಲ್ಲಿರುವ ಸಂವಿಧಾನ (ಅನುಸೂಚಿತ ಜಾತಿಗಳು) ಆದೇಶ, 1950 ಮತ್ತು (ಅನುಸೂಚಿತ ಪಂಗಡಗಳು) ಆದೇಶ, 1950ರಲ್ಲಿ ಕರ್ನಾಟಕ ರಾಜ್ಯದ ಸಂಬಂಧವಾಗಿ ನಿರ್ದಿಷ್ಟಪಡಿಸಿರುವ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳು;

(ಜೆ-2) 'ದ್ವಿತೀಯ ಸಂಸ್ಥೆ ' ಎಂದರೆ ಬೇರೊಂದು ಸಹಕಾರ ಸಂಘಕ್ಕೆ ಸದಸ್ಯತ್ವದ ಅವಕಾಶವಿರುವ ಸಹಕಾರ ಸಂಘ;

(ಜೆ-3) 'ರಾಜ್ಯ ಪ್ರತಿನಿಧಿ' ಎನದರೆ 2ಎ ಪ್ರಕರಣದ ಮೇರೆಗೆ ರಾಜ್ಯ ಪ್ರತಿನಿಧಿಯಾಗಿ ನೇಮಕಗೊಂಡ ಯಾರೇ ವ್ಯಕ್ತಿ;][1]

[3][(ಕೆ) 'ನ್ಯಾಯಾಧಿಕರಣ' ಎಂದರೆ [5][ಕರ್ನಾಟಕ ಅಪೀಲು ನ್ಯಾಯಾಧೀಕರಣ ಅಧಿನಿಯಮ, 1976ರ (1976ರ ಕರ್ನಾಟಕ ಅಧಿನಿಯಮ 10) ಮೇರೆಗೆ][5] ರಚಿಸಲಾದ ನ್ಯಾಯಾಧಿಕರಣ;][3]

(ಎಲ್) [6][ಕರ್ನಾಟಕ ರಾಜ್ಯ][6]ದ ಯಾವುದಾದರೂ ಒಂದು ಪ್ರದೇಶದಲ್ಲಿ ಜಾರಿಯಲ್ಲಿರುವ ಯಾವುದೇ ಅಧಿನಿಯಮಿತಿ ಅಥವಾ ಕಾನೂನಿನ ಉಪಬಂಧದ ಉಲ್ಲೇಖಗಳು ಆ ಪ್ರದೇಶದಲ್ಲಿ ಜಾರಿಯಲ್ಲಿರುವ ಸಂವಾದಿ ಅಧಿನಿಯಮಿತಿ ಅಥವಾ ಕಾನೂನಿನ ಉಪಬಂಧ ಯಾವುದಾದರೂ ಇದ್ದರೆ ಅದಕ್ಕೆ ಸಂಬಂಧಿಸಿದಂತೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕುದು.

## [7][ಅಧ್ಯಾಯ-I-ಎ

## ಪ್ರಾಧಿಕಾರಿಗಳು ಮತ್ತು ಅಪೀಲು ನ್ಯಾಯಾಧಿಕರಣ

**2ಎ. ರಿಜಿಸ್ಟ್ರಾರ್, ಅಡಿಷನಲ್ ರಿಜಿಸ್ಟ್ರಾರ್, ಸಹ ರಿಜಿಸ್ಟ್ರಾರರು, ಉಪ-ರಿಜಿಸ್ಟ್ರಾರರು, [2][ರಾಜ್ಯ ಪ್ರತಿನಿಧಿಗಳು][2] ಮತ್ತು ಸಹಾಯಕ ರಿಜಿಸ್ಟ್ರಾರರು:-** (1) ರಾಜ್ಯ ಸರ್ಕಾರವು, ರಾಜ್ಯದ ಸಲುವಾಗಿ ಒಬ್ಬ ವ್ಯಕ್ತಿಯನ್ನು ಸಹಕಾರ ಸಂಘಗಳ ರಿಜಿಸ್ಟ್ರಾರನಾಗಿ ನೇಮಿಸಬಹುದು.

(2) ರಾಜ್ಯಸರ್ಕಾರವು, ರಿಜಿಸ್ಟ್ರಾರನಿಗೆ ನೆರವಾಗಲು [8][ಸಹಕಾರ ಸಂಘಗಳ ಒಬ್ಬ ಅಡಿಷನಲ್ ರಿಜಿಸ್ಟ್ರಾರನನ್ನು ಮತ್ತು ತನಗೆ ಉಚಿತವೆಂದು ಕಂಡುಬರುವಷ್ಟು][8] ಜನ ಸಹಕಾರ ಸಂಘಗಳ ಉಪ-ರಿಜಿಸ್ಟ್ರಾರರನ್ನು ಮತ್ತು [1][ರಾಜ್ಯ ಪ್ರತಿನಿಧಿಗಳನ್ನು ಮತ್ತು ಅಫಿಷಿಯೇಟಿಂಗ್ ಆಗಿ ಅಥವಾ ಅನ್ಯಥಾ ಸಹಕಾರ ಸಂಘಗಳ ಸಹಾಯಕ ರಿಜಿಸ್ಟ್ರಾರರನ್ನು][1] ನೇಮಿಸಬಹುದು.

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15-8-1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15-8-1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
5. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಪ್ರತಿಯೋಜಿಸಲಾಗಿದೆ.
6. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
7. 1964ರ ಅಧಿನಿಯಮ ಸಂಖ್ಯೆ 4ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
8. 1973ರ ಅಧಿನಿಯಮ ಸಂಖ್ಯೆ 14ರ ಮೂಲಕ 14.6.1973 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ರಾಜ್ಯಸರ್ಕಾರವು, ರಿಜಿಸ್ಟ್ರಾರನಿಗೆ ನೆರವಾಗಲು ತಾನು ಉಚಿತವೆಂದು ಭಾವಿಸುವಂಥ ಪದನಾಮಗಳಿರುವ ಬೇರೆ ಅಧಿಕಾರಿಗಳನ್ನು ನೇಮಿಸಬಹುದು.

(4) [1][ಲೆಕ್ಕ ಪರಿಶೋಧನೆಗೆ ಸಂಬಂಧಪಟ್ಟಂತೆ ಹೊರತುಪಡಿಸಿ,][1] ಈ ಅಧಿನಿಯಮದ ಆಡಳಿತದಲ್ಲಿ ನಿಯೋಜಿಸಲಾದ ಎಲ್ಲ ಅಧಿಕಾರಿಗಳು ಮತ್ತು ವ್ಯಕ್ತಿಗಳು, ರಾಜ್ಯಸರ್ಕಾರದ ಮತ್ತು ರಿಜಿಸ್ಟ್ರಾರನ ಅಧೀಕ್ಷಣೆಗೆ, ನಿರ್ದೇಶನಕ್ಕೆ ಮತ್ತು ನಿಯಂತ್ರಣಕ್ಕೆ ಒಳಪಟ್ಟಿರತಕ್ಕುದು, ಮತ್ತು ಈ ಅಧಿನಿಯಮದ ಮೇರೆಗೆ ನೇಮಿಸಲಾದ ಪ್ರತಿಯೊಬ್ಬ ಅಧಿಕಾರಿಯು ಯಾವ ಅಧಿಕಾರಿಗೆ ಅಥವಾ ಅಧಿಕಾರಿಗಳಿಗೆ ಅಧೀನನಾಗಿರತಕ್ಕುದೆಂಬುದನ್ನು ರಾಜ್ಯಸರ್ಕಾರವು ನಿರ್ಧರಿಸತಕ್ಕುದು:

ಪರಂತು, ಈ ಉಪಪ್ರಕರಣದ ಮೇರೆಗೆ ರಾಜ್ಯ ಸರ್ಕಾರದಲ್ಲಿ ಮತ್ತು ರಿಜಿಸ್ಟ್ರಾರನಲ್ಲಿ ನಿಹಿತವಾದ ಅಧಿಕಾರವನ್ನು ಯಾವುದೇ ನ್ಯಾಯಿಕ ಸದೃಶ ಪ್ರಕಾರ್ಯಗಳ ಚಲಾವಣೆಯಲ್ಲಿ ಮೂಲ ಪ್ರಾಧಿಕಾರದಂತೆ ಆಗಲಿ ಅಥವಾ ಅಪೀಲು ಪ್ರಾಧಿಕಾರದಂತೆ ಆಗಲಿ ಚಲಾಯಿಸುವ ಯಾರೇ ಪ್ರಾಧಿಕಾರಿಯ ವಿವೇಚನೆಯಲ್ಲಿ ಮಧ್ಯಪ್ರವೇಶ ಮಾಡುವಂತೆ ಚಲಾಯಿಸತಕ್ಕುದಲ್ಲ.

(5) ರಾಜ್ಯಸರ್ಕಾರವು, ಸಹಕಾರ ಸಂಘಗಳ ಅಡಿಷನಲ್ ರಿಜಿಸ್ಟ್ರಾರನಾಗಿ, ಸಹಕಾರ ಸಂಘಗಳ ಸಹ ರಿಜಿಸ್ಟ್ರಾರನಾಗಿ, ಸಹಕಾರ ಸಂಘಗಳ ಉಪ ರಿಜಿಸ್ಟ್ರಾರನಾಗಿ ಅಥವಾ [2][ಅಫಿಷಿಯೇಟಿಂಗ್ ಆಗಿ ಅಥವಾ ಅನ್ಯಥಾ][2] ಸಹಕಾರ ಸಂಘಗಳ ಸಹಾಯಕ ರಿಜಿಸ್ಟ್ರಾರನಾಗಿ ನೇಮಕಗೊಂಡ ಯಾರೇ ವ್ಯಕ್ತಿಗೆ, ಈ ಅಧಿನಿಯಮದ ಮೇರೆಗೆ ರಿಜಿಸ್ಟ್ರಾರನಿಗಿರುವ ಎಲ್ಲ ಅಥವಾ ಯಾವುವೇ ಅಧಿಕಾರಗಳನ್ನು, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ವಹಿಸಿಕೊಡಬಹುದು.

(6) ಈ ಅಧಿನಿಯಮದಲ್ಲಿ ಏನೇ ಇದ್ದರೂ, ಪ್ರತಿಯೊಂದು ಸಹಕಾರ ಸಂಘದ ಲೆಕ್ಕಗಳಿಗೆ ಸಂಬಂಧಿಸಿದ [3][xxx][3] ವಿಷಯಗಳು, ರಾಜ್ಯದ ಸಹಕಾರ ಸಂಘಗಳ ರಿಜಿಸ್ಟ್ರಾರನ ಮೇಲ್ವಿಚಾರಣೆಗೆ ಮತ್ತು ನಿಯಂತ್ರಣಕ್ಕೆ ಒಳಪಟ್ಟಿರತಕ್ಕುದು.

[4][(7) ನ್ಯಾಯಾಧಿಕರಣದ ಮುಂದಿರುವ ವ್ಯವಹರಣೆಗಳಲ್ಲಿ, ರಾಜ್ಯ ಪ್ರತಿನಿಧಿಯು, ರಾಜ್ಯ ಸರ್ಕಾರದ ಪರವಾಗಿ ಅಥವಾ ಈ ಅಧಿನಿಯಮದ ಮೇರೆಗೆ ನೇಮಕಗೊಂಡ ಯಾರೇ ಅಧಿಕಾರಿಯ ಪರವಾಗಿ,-

(i) ಅರ್ಜಿಗಳನ್ನು, ಅಪೀಲುಗಳನ್ನು ಮತ್ತು ಇತರ ದಸ್ತಾವೇಜುಗಳನ್ನು ಸಿದ್ಧಪಡಿಸಲು ಮತ್ತು ಸಹಿಮಾಡಲು;

(ii) ಹಾಜರಾಗಲು, ಪ್ರತಿನಿಧಿಸಲು, ಕ್ರಮಕೈಗೊಳ್ಳಲು ಮತ್ತು ವಾದಿಸಲು;

(iii) ನೋಟೀಸುಗಳನ್ನು ಮತ್ತು ಇತರೆ ಪ್ರೊಸೆಸ್‌ಗಳನ್ನು ಸ್ವೀಕರಿಸಲು; ಮತ್ತು

(iv) ಅಂಥ ವ್ಯವಹರಣೆಗಳಿಗೆ ಸಂಬಂಧಪಟ್ಟ ಇತರ ಎಲ್ಲ ಕೆಲಸಗಳನ್ನು ಮಾಡಲು ಸಕ್ಷಮನಾಗಿರತಕ್ಕುದು.][4]

[1][2ಎಎ. **[5][ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕ,][5] [5][ಸಹಕಾರ ಲೆಕ್ಕ ಪರಿಶೋಧನಾ ಅಡಿಷನಲ್ ನಿರ್ದೇಶಕ,][5] [5][ಸಹಕಾರ ಲೆಕ್ಕಪರಿಶೋಧನಾ ಜಂಟಿ ನಿರ್ದೇಶಕ,][5] [5][ಸಹಕಾರ ಲೆಕ್ಕ ಪರಿಶೋಧನಾ ಉಪನಿರ್ದೇಶಕರು,][5] ಮತ್ತು [5][ಸಹಕಾರ ಲೆಕ್ಕಪರಿಶೋಧನಾ ಸಹಾಯಕ ನಿರ್ದೇಶಕರು][5]:-** [6][(1) [7][ರಾಜ್ಯಸರ್ಕಾರವು ಒಬ್ಬ ವ್ಯಕ್ತಿಯನ್ನು ರಾಜ್ಯ ಸಹಕಾರ ಸಂಘಗಳ ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕನನ್ನಾಗಿ ನೇಮಕ ಮಾಡಬಹುದು][7] ][6]

(2) ರಾಜ್ಯ ಸರ್ಕಾರವು [5][ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕನಿಗೆ][5] ನೆರವಾಗಲು [5][ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಅಡಿಷನಲ್ ನಿರ್ದೇಶಕನನ್ನು][5] ಮತ್ತು ಸಹಕಾರ ಸಂಘಗಳಿಗಾಗಿ ತನಗೆ ಯುಕ್ತವೆಂದು ಕಂಡುಬರುವಷ್ಟು ಜನ [5][ಸಹಕಾರ ಲೆಕ್ಕಪರಿಶೋಧನಾ ಜಂಟಿ ನಿರ್ದೇಶಕರನ್ನು][5] [5][ಸಹಕಾರ ಲೆಕ್ಕಪರಿಶೋಧನಾ ಉಪ ನಿರ್ದೇಶಕರನ್ನು][5] ಮತ್ತು [5][ಸಹಕಾರ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರನ್ನು][5] ನೇಮಿಸಬಹುದು.

(3) [5][ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ][5] ನೆರವಾಗಲು ರಾಜ್ಯ ಸರ್ಕಾರವು ತಾನು ಯುಕ್ತವೆಂದು ಭಾವಿಸುವಂಥ ಪದನಾಮವುಳ್ಳ ಇತರ ಅಧಿಕಾರಿಗಳನ್ನು ನೇಮಿಸಬಹುದು.

(4) ಲೆಕ್ಕ ಪರಿಶೋಧನೆಗೆ ಸಂಬಂಧಪಟ್ಟಂತೆ ಈ ಅಧಿನಿಯಮವನ್ನು ಜಾರಿಗೆ ತರಲು ನಿಯೋಜಿತರಾದ ಎಲ್ಲ ಅಧಿಕಾರಿಗಳು ಮತ್ತು ವ್ಯಕ್ತಿಗಳು, ರಾಜ್ಯಸರ್ಕಾರದ ಮತ್ತು [5][ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕನ][5] ಅಧೀಕ್ಷಣೆಗೆ, ನಿರ್ದೇಶನಕ್ಕೆ ಮತ್ತು ನಿಯಂತ್ರಣಕ್ಕೆ ಒಳಪಟ್ಟಿರತಕ್ಕುದು. ಮತ್ತು ಈ ಪ್ರಕರಣದ ಮೇರೆಗೆ ನೇಮಕಗೊಂಡ ಪ್ರತಿಯೊಬ್ಬ ಅಧಿಕಾರಿಯು ಯಾವ ಅಧಿಕಾರಿಗೆ ಅಥವಾ ಅಧಿಕಾರಿಗಳಿಗೆ ಅಧೀನರಾಗಿರತಕ್ಕುದೆಂಬುದನ್ನು ರಾಜ್ಯಸರ್ಕಾರವು ನಿರ್ಧರಿಸತಕ್ಕುದು:

ಪರಂತು, ಈ ಉಪಪ್ರಕರಣದ ಮೇರೆಗೆ ರಾಜ್ಯಸರ್ಕಾರದಲ್ಲಿ ಮತ್ತು [5][ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕರಲ್ಲಿ][5] ನಿಹಿತವಾದ ಅಧಿಕಾರವನ್ನು, ಯಾವುದೇ ಅರೆ ನ್ಯಾಯಿಕ ಪ್ರಕಾರ್ಯಗಳಲ್ಲಿ ಮೂಲ ಅಥವಾ ಅಪೀಲು ಪ್ರಾಧಿಕಾರದಂತೆ ಅಧಿಕಾರವನ್ನು ಚಲಾಯಿಸುವ ಯಾರೇ ಪ್ರಾಧಿಕಾರಿಯ ವಿವೇಚನೆಯಲ್ಲಿ ಮಧ್ಯ ಪ್ರವೇಶಮಾಡುವಂತೆ ಚಲಾಯಿಸತಕ್ಕುದಲ್ಲ.

1. 1980ರ ಅಧಿನಿಯಮ ಸಂಖ್ಯೆ 3ರ ಮೂಲಕ 11.8.1977 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1980ರ ಅಧಿನಿಯಮ ಸಂಖ್ಯೆ 3ರ ಮೂಲಕ 11.8.1977 ರಿಂದ ಜಾರಿಗೆ ಬರುವಂತೆ ಬಿಟ್ಟು ಬಿಡಲಾಗಿದೆ.
4. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
5. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
7. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಪ್ರತಿಯೋಜಿಸಲಾಗಿದೆ.

(5) ರಾಜ್ಯಸರ್ಕಾರವು, ಸಹಕಾರ ಸಂಘಗಳ [1][ಸಹಕಾರ ಲೆಕ್ಕಪರಿಶೋಧನಾ ಅಡಿಷನಲ್ ನಿರ್ದೇಶಕನಾಗಿ,][1] [1][ಸಹಕಾರ ಲೆಕ್ಕಪರಿಶೋಧನಾ ಜಂಟಿ ನಿರ್ದೇಶಕನಾಗಿ,][1] [1][ಸಹಕಾರ ಲೆಕ್ಕಪರಿಶೋಧನಾ ಉಪನಿರ್ದೇಶಕನಾಗಿ,][1] [1][ಸಹಕಾರ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕನಾಗಿ][1] ನೇಮಕಗೊಂಡ ಯಾರೇ ವ್ಯಕ್ತಿಗೆ, ಈ ಅಧಿನಿಯಮದ ಮೇರೆಗೆ [1][ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕ]ನಿಗಿರುವ ಎಲ್ಲ ಅಥವಾ ಯಾವುವೇ ಅಧಿಕಾರಗಳನ್ನು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ವಹಿಸಿಕೊಡಬಹುದು.

(6) ಈ ಅಧಿನಿಯಮದಲ್ಲಿ ಏನೇ ಇದ್ದರೂ, ಪ್ರತಿಯೊಂದು ಸಹಕಾರ ಸಂಘದ ಲೆಕ್ಕಪರಿಶೋಧನೆಗೆ ಸಂಬಂಧಿಸಿದ ವಿಷಯಗಳು ರಾಜ್ಯದ [1][ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕನ][1] ಮೇಲ್ವಿಚಾರಣೆಗೆ ಮತ್ತು ನಿಯಂತ್ರಣಕ್ಕೆ ಒಳಪಟ್ಟಿರತಕ್ಕುದು.][1]

[2][2ಬಿ.xxxxxxxx][2]

## ಅಧ್ಯಾಯ-II

## ಸಹಕಾರ ಸಂಘಗಳ ನೋಂದಣಿ

[3][**3.** xxxxxxx ][3]

[4][**4. ನೋಂದಾಯಿಸಬಹುದಾದ ಸಂಘಗಳು:-** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಸಹಕಾರ ತತ್ವಗಳಿಗನುಸಾರವಾಗಿ ತನ್ನ ಸದಸ್ಯರ ಅಥವಾ ಸಾರ್ವಜನಿಕರ ಆರ್ಥಿಕ ಹಿತಗಳು ಅಥವಾ ಸಾಮಾನ್ಯ ಕಲ್ಯಾಣ ಅಭಿವೃದ್ಧಿಯನ್ನು ತನ್ನ ಉದ್ದೇಶವಾಗಿ ಇಟ್ಟುಕೊಂಡಿರುವ ಸಹಕಾರ ಸಂಘವನ್ನು ಅಥವಾ ಅಂಥ ಸಂಘದ ಕಾರ್ಯಪ್ರವರ್ತನೆಗಳನ್ನು ಸುಗಮಗೊಳಿಸುವ ಉದ್ದೇಶದಿಂದ ಸ್ಥಾಪಿಸಲಾಗಿರುವ ಸಹಕಾರ ಸಂಘವನ್ನು, ಈ ಅಧಿನಿಯಮದ ಮೇರೆಗೆ ನೋಂದಾಯಿಸಬಹುದು:

ಪರಂತು, ಯಾವುದೇ ಸಹಕಾರ ಸಂಘವನ್ನು, ಆರ್ಥಿಕವಾಗಿ ಅಭದ್ರವಾಗುವ ಸಂಭವವಿದ್ದರೆ, ಅಥವಾ ಅದರ ನೋಂದಣಿಯಿಂದ ಸಹಕಾರ ಚಳುವಳಿಯ ಬೆಳವಣಿಗೆಯ ಮೇಲೆ ಪ್ರತಿಕೂಲ ಪರಿಣಾಮವುಂಟಾಗಬಹುದಾಗಿದ್ದರೆ, ಅದನ್ನು ನೋಂದಾಯಿಸತಕ್ಕುದಲ್ಲ.][4]

**5. ನಿಯಮಿತ ಅಥವಾ ಅನಿಯಮಿತ ಹೊಣೆಗಾರಿಕೆಯೊಂದಿಗೆ ನೋಂದಣಿ:-** (1) ಯಾವೊಂದು ಸಹಕಾರ ಸಂಘವನ್ನು, ನಿಯಮಿತ ಅಥವಾ ಅನಿಯಮಿತ ಹೊಣೆಗಾರಿಕೆಯೊಂದಿಗೆ ನೋಂದಾಯಿಸಬಹುದು:

ಪರಂತು, ಯಾವ ಸಹಕಾರ ಸಂಘಕ್ಕೆ ಬೇರೆ ಯಾವುದೇ ಸಹಕಾರ ಸಂಘವು ಸದಸ್ಯತ್ವವನ್ನು ಹೊಂದಿರುವುದೋ ಆ ಸಹಕಾರ ಸಂಘದ ಹೊಣೆಗಾರಿಕೆಯು ನಿಯಮಿತವಾಗಿರತಕ್ಕುದು.

(2) "ನಿಯಮಿತ" ಎಂಬ ಅಥವಾ ಯಾವುದೇ ಭಾರತೀಯ ಭಾಷೆಯಲ್ಲಿ ಅದಕ್ಕೆ ಸಮಾನಾರ್ಥಕ ಶಬ್ದವನ್ನು, ಈ ಅಧಿನಿಯಮದ ಮೇರೆಗೆ ನಿಯಮಿತ ಹೊಣೆಗಾರಿಕೆಯೊಂದಿಗೆ ನೋಂದಾಯಿತವಾಗುವ ಸಹಕಾರ ಸಂಘದ ಹೆಸರಿನಲ್ಲಿ ಕೊನೆಯ ಪದವಾಗಿ ಇಟ್ಟುಕೊಳ್ಳತಕ್ಕುದು.

**6. ಸಹಕಾರ ಸಂಘಗಳ ನೋಂದಣಿಗಾಗಿ ಅರ್ಜಿ:-** (1) ಯಾವೊಂದು ಸಹಕಾರ ಸಂಘದ ನೋಂದಣಿಗಾಗಿ ನಿಯಮಿಸಬಹುದಾದಂಥ ನಮೂನೆಯಲ್ಲಿ [5][ಮತ್ತು ಅಂಥ ವಿಧಿ ವಿಧಾನಗಳನ್ನು ಪಾಲಿಸಿದ ತರುವಾಯ][5] ರಿಜಿಸ್ಟ್ರಾರನಿಗೆ ಅರ್ಜಿಯನ್ನು ಸಲ್ಲಿಸತಕ್ಕುದು; ಮತ್ತು ಅರ್ಜಿದಾರರು ಸಂಘದ ವಿಷಯದಲ್ಲಿ ಅವನು ಅಗತ್ಯಪಡಿಸಬಹುದಾದಂಥ ಎಲ್ಲ ಮಾಹಿತಿಯನ್ನು ಒದಗಿಸತಕ್ಕುದು.

(2) ಅಂಥ ಪ್ರತಿಯೊಂದು ಅರ್ಜಿಯು, ಈ ಮುಂದಿನ ಅಗತ್ಯಗಳಿಗೆ ಅನುಗುಣವಾಗಿ ಇರತಕ್ಕುದು, ಎಂದರೆ:-

(ಎ) ಅರ್ಜಿಯ ಜೊತೆಯಲ್ಲಿ ಸಹಕಾರ ಸಂಘದ ಪ್ರಸ್ತಾವಿತ ಉಪವಿಧಿಗಳ [6][ಐದು][6] ಪ್ರತಿಗಳನ್ನು ಲಗತ್ತಿಸತಕ್ಕುದು;

(ಬಿ) ಎಲ್ಲ ಅರ್ಜಿದಾರರು ವ್ಯಕ್ತಿಗಳಾಗಿರುವಲ್ಲಿ, ಅರ್ಜಿದಾರರ ಸಂಖ್ಯೆಯು ಹತ್ತಕ್ಕಿಂತ ಕಡಿಮೆ ಇರತಕ್ಕುದಲ್ಲ;

(ಸಿ) ಅರ್ಜಿದಾರರಲ್ಲಿ ಪ್ರತಿಯೊಬ್ಬನು ಹದಿನೆಂಟು ವರ್ಷಗಳಿಗೆ ಮೇಲ್ಪಟ್ಟ ವಯಸ್ಸಿನ ವ್ಯಕ್ತಿಯಾಗಿರತಕ್ಕುದು.[5][ಮತ್ತು ಅರ್ಜಿದಾರರು ಅದೇ ಕುಟುಂಬ ದವರಾಗಿರತಕ್ಕುದಲ್ಲ;

ವಿವರಣೆ:- ಈ ಖಂಡದ ಉದ್ದೇಶಕ್ಕಾಗಿ, ವ್ಯಕ್ತಿಗೆ ಸಂಬಂಧಪಟ್ಟಂತೆ ಕುಟುಂಬ ಎಂದರೆ ವ್ಯಕ್ತಿ, ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ, ಮತ್ತು ಅವರನ್ನು ಅವಲಂಬಿಸಿರುವ ಮಕ್ಕಳು ಮತ್ತು ತಂದೆ ತಾಯಿಗಳು;][5]

(ಡಿ) ಸದಸ್ಯರಿಗೆ ಸಾಲ ಕೊಡಲು ನಿಧಿಗಳ ರಚನೆ ಸೇರಿದಂತೆ ಸಹಕಾರ ಸಂಘದ ಉದ್ದೇಶಗಳಲ್ಲಿ ಒಂದೇ ಆಗಿದ್ದರೆ ಮತ್ತು ಎಲ್ಲ ಅರ್ಜಿದಾರರು ವ್ಯಕ್ತಿಗಳಾಗಿದ್ದರೆ, ಅರ್ಜಿದಾರರು ಒಂದೇ ಗ್ರಾಮದಲ್ಲಿ ಅಥವಾ ಪಟ್ಟಣದಲ್ಲಿ ಅಥವಾ [6][ಸಹಕಾರ ಸಂಘದ ಕಾರ್ಯಾಚರಣೆಯ ಉದ್ದೇಶಿತ ಪ್ರದೇಶದಲ್ಲಿ][6] ವಾಸಮಾಡುವವರು ಅಥವಾ ಒಂದೇ ಜನವರ್ಗಕ್ಕೆ ಸಂಬಂಧಿಸಿದವರು ಅಥವಾ ಒಂದೇ ವೃತ್ತಿಯನ್ನು ಅನುಸರಿಸುವವರು ಆಗಿರತಕ್ಕುದು;

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಬಿಟ್ಟುಬಿಡಲಾಗಿದೆ.
3. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
4. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
6. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಇ) ಅರ್ಜಿದಾರರಲ್ಲಿ ವ್ಯಕ್ತಿಯಾಗಿರುವ ಪ್ರತಿಯೊಬ್ಬರೂ ಮತ್ತು ಅರ್ಜಿದಾರನಾಗಿರುವ ಯಾವುದೇ ಸಹಕಾರ ಸಂಘದ ಪರವಾಗಿ ಯುಕ್ತವಾಗಿ ಅಧಿಕೃತ ವ್ಯಕ್ತಿಯು ಅರ್ಜಿಗೆ ಸಹಿ ಮಾಡತಕ್ಕುದು;

[1][(ಎಫ್) ಅರ್ಜಿಯೊಂದಿಗೆ ನಿಯಮಿಸಬಹುದಾದಂಥ ಶುಲ್ಕವನ್ನು ಸಲ್ಲಿಸಿರತಕ್ಕುದ್ದು ಮತ್ತು ಸಹಕಾರ ಸಂಘಗಳ ಬೇರೆ ಬೇರೆ ವರ್ಗಕ್ಕೆ ಅಥವಾ ವರ್ಗಗಳಿಗೆ ಬೇರೆ ಬೇರೆ ಶುಲ್ಕವನ್ನು ನಿಯಮಿಸಬಹುದು.][1]

[2][(ಜಿ) ಈ ಅಧಿನಿಯಮದ ಅಡಿಯಲ್ಲಿ ಸಹಕಾರ ಸಂಘವಾಗಿ ಪರಿವರ್ತನೆ ಹೊಂದುವ ಉದ್ದೇಶವನ್ನು ಹೊಂದಿರುವ ಸಹಕಾರಿಯ ಸಂದರ್ಭದಲ್ಲಿ, ಅಂಥ ಪರಿವರ್ತನೆಯನ್ನು ಅನುಮೋದಿಸುವ ಅಂಥ ಸಹಕಾರಿಯ ಸಾಮಾನ್ಯ ಸಭೆಯ ಗೊತ್ತುವಳಿಯು ಅರ್ಜಿಯ ಜೊತೆಯಲ್ಲಿ ಇರತಕ್ಕದ್ದು.][2]

**7. ನೋಂದಣಿ :-** (1) ರಿಜಿಸ್ಟ್ರಾರನಿಗೆ,-

(ಎ) ಅರ್ಜಿಯು ಈ ಅಧಿನಿಯಮದ, [3][ನಿಯಮಗಳ ಮತ್ತು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ][3] ಉಪಬಂಧಗಳನ್ನು ಪಾಲಿಸಿದೆಯೆಂದು;

(ಬಿ) ಪ್ರಸ್ತಾವಿತ ಸಂಘದ ಉದ್ದೇಶಗಳು 4ನೇ ಪ್ರಕರಣಕ್ಕನುಸಾರವಾಗಿವೆಯೆಂದು;

(ಸಿ) ಪ್ರಸ್ತಾವಿತ ಸಂಘದ ಧ್ಯೇಯಗಳು ಸಾಮಾಜಿಕ ನ್ಯಾಯದ ತತ್ವಗಳಿಗೆ ಅಸಂಗತವಾಗಿಲ್ಲವೆಂದು;

(ಡಿ) ಪ್ರಸ್ತಾವಿತ ಉಪವಿಧಿಗಳು ಈ ಅಧಿನಿಯಮದ ಮತ್ತು ನಿಯಮಗಳ ಉಪಬಂಧಗಳಿಗೆ ವಿರುದ್ಧವಾಗಿಲ್ಲವೆಂದು; ಮತ್ತು

(ಇ) ಪ್ರಸ್ತಾವಿತ ಸಂಘವು ಸುಭದ್ರ ವ್ಯವಹಾರದ ಅಗತ್ಯತೆಗಳನ್ನು ಪಾಲಿಸುವುದೆಂದು, ಮತ್ತು ಅದು ಯಶಸ್ವಿಯಾಗುವ ಸಮಂಜಸ ಅವಕಾಶವಿದೆ ಎಂದು

- ಮನದಟ್ಟಾದರೆ, [3][ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ ಮೂರು ತಿಂಗಳ ಅವಧಿಯೊಳಗಾಗಿ ರಿಜಿಸ್ಟ್ರಾರನು][3] ಆ ಸಹಕಾರ ಸಂಘವನ್ನು ಮತ್ತು ಅದರ ಉಪವಿಧಿಗಳನ್ನು ನೋಂದಾಯಿಸಬಹುದು. [2][ಮತ್ತು ಅರ್ಜಿಯಲ್ಲಿ ನಮೂದಿಸಿದ ಮುಖ್ಯ ಪ್ರವರ್ತಕ ಅಥವಾ ಪರಿವರ್ತನೆಗೊಂಡ ಸಹಕಾರಿಯ ಮುಖ್ಯ ಕಾರ್ಯನಿರ್ವಾಹಕರಿಗೆ ನೋಂದಣಿ ಪ್ರಮಾಣ ಪತ್ರವನ್ನು ಮತ್ತು ನೋಂದಾಯಿತ ಉಪವಿಧಿಗಳ ಮೂಲ ಪ್ರತಿಯನ್ನು ದಿನಾಂಕ ಸಹಿತ ತನ್ನ ಸಹಿ ಹಾಗೂ ಮುದ್ರೆಯೊಡನೆ ನೋಂದಾಯಿತ ಅಂಚೆ ಮೂಲಕ ಕಳುಹಿಸತಕ್ಕದ್ದು.][2]

[4][ [3][(2) ರಿಜಿಸ್ಟ್ರಾರನಿಗೆ, (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಅಂಥ ಅರ್ಜಿಯನ್ನು ವಿಲೇವಾರಿ ಮಾಡಲು ಸಾಧ್ಯವಾಗದಿದ್ದರೆ, ಸಂಘವನ್ನು ಮತ್ತು ಉಪ-ವಿಧಿಗಳನ್ನು ನೋಂದಣಿ ಮಾಡಲಾಗಿದೆಯೆಂದು ಭಾವಿಸತಕ್ಕುದು.][3]

(3) ಪ್ರಸ್ತಾವಿತ ಸಹಕಾರ ಸಂಘವನ್ನು ನೋಂದಾಯಿಸಲು ರಿಜಿಸ್ಟ್ರಾರನು ನಿರಾಕರಿಸಿದರೆ ಅವನು ತನ್ನ ನಿರ್ಣಯವನ್ನು ಅದರ ಕಾರಣ ಸಹಿತ ಅರ್ಜಿ ಸಲ್ಲಿಸಿದ ವ್ಯಕ್ತಿಗೆ ಮತ್ತು ಅರ್ಜಿ ಸಲ್ಲಿಸಿದವರು ಒಬ್ಬರಿಗಿಂತ ಹೆಚ್ಚಾಗಿರುವಲ್ಲಿ, ಅರ್ಜಿಯಲ್ಲಿ ಮೊದಲು ಸಹಿ ಮಾಡಿದ ವ್ಯಕ್ತಿಗೆ ಆ ಕೂಡಲೇ ತಿಳಿಸತಕ್ಕುದು.

(4) ರಿಜಿಸ್ಟ್ರಾರನು, ಈ ಅಧಿನಿಯಮದ ಮೇರೆಗೆ ನೋಂದಾಯಿತವಾದ ಅಥವಾ ನೊಂದಾಯಿತವಾಗಿದೆಯೆಂದು ಭಾವಿಸಲಾದ ಎಲ್ಲ ಸಹಕಾರ ಸಂಘಗಳ ಒಂದು ರಿಜಿಸ್ಟರನ್ನು ಇಟ್ಟಿರತಕ್ಕುದು.][4]

**8. ನೋಂದಣಿ ಪ್ರಮಾಣಪತ್ರ:-** ಈ ಅಧಿನಿಯಮದ ಮೇರೆಗೆ ಒಂದು ಸಹಕಾರ ಸಂಘವು ನೋಂದಾಯಿತವಾಗಿದ್ದರೆ, [5][ಅಥವಾ ನೋಂದಣಿಯಾಗಿದೆಯೆಂದು ಭಾವಿಸಿದ್ದರೆ][5] ರಿಜಿಸ್ಟ್ರಾರನು, ತಾನು ಸಹಿ ಮಾಡಿದ ಒಂದು ನೋಂದಣಿ ಪ್ರಮಾಣಪತ್ರವನ್ನು ಕೊಡತಕ್ಕುದು ಮತ್ತು ಆ ಪ್ರಮಾಣಪತ್ರವು ಅದರಲ್ಲಿ ನಮೂದಿಸಲಾದ ಸಹಕಾರ ಸಂಘವು ಈ ಅಧಿನಿಯಮದ ಮೇರೆಗೆ ಯುಕ್ತವಾಗಿ ನೋಂದಾಯಿತವಾದ [5][ಅಥವಾ ನೋಂದಾಯಿತವಾಗಿದೆಯೆಂದು ಭಾವಿಸಿದ][5] ಸಹಕಾರ ಸಂಘವಾಗಿದೆಯೆಂಬುದಕ್ಕೆ ನಿರ್ಣಾಯಕ ಸಾಕ್ಷ್ಯವಾಗಿರತಕ್ಕುದು.

**9. ಸಹಕಾರ ಸಂಘಗಳು ನಿಗಮಿತ ನಿಕಾಯಗಳಾಗಿರುವುದು:-** ಸಹಕಾರ ಸಂಘವು ನೋಂದಣಿ ಮೂಲಕ, ಅದನ್ನು ಯಾವ ಹೆಸರಿನಿಂದ ನೋಂದಾಯಿಸಲಾಗಿದೆಯೋ ಆ ಹೆಸರುಳ್ಳ ನಿಗಮಿತ ನಿಕಾಯವಾಗತಕ್ಕುದು. ಅದು ಶಾಶ್ವತ ಉತ್ತರಾಧಿಕಾರವನ್ನು ಮತ್ತು ಒಂದು ಸಾಮಾನ್ಯ ಮೊಹರನ್ನು ಹೊಂದಿರತಕ್ಕುದು, ಮತ್ತು ಸ್ವತ್ತು ಧಾರಣ ಮಾಡುವ, ಕರಾರು ಮಾಡಿಕೊಳ್ಳುವ, ದಾವೆಗಳು ಹಾಗೂ ಇತರ ಕಾನೂನು ವ್ಯವಹರಣೆಗಳನ್ನು ಹೂಡುವ ಮತ್ತು ಪ್ರತಿವಾದಿಸುವ ಮತ್ತು ಅದನ್ನು ಯಾವ ಉದ್ದೇಶಗಳಿಗಾಗಿ ರಚಿಸಲಾಗಿದೆಯೋ ಆ ಉದ್ದೇಶಗಳಿಗಾಗಿ ಅವಶ್ಯವಾದ ಎಲ್ಲ ಕಾರ್ಯಗಳನ್ನು ಮಾಡಲು ಅಧಿಕಾರ ಹೊಂದಿರತಕ್ಕುದು.

**10. ಸಹಕಾರ ಸಂಘದ ಹೆಸರಿನ ಬದಲಾವಣೆ:-** (1) ಸಹಕಾರ ಸಂಘವು, ತನ್ನ ಉಪವಿಧಿಗಳನ್ನು ತಿದ್ದುಪಡಿ ಮಾಡುವ ಮೂಲಕ ತನ್ನ ಹೆಸರನ್ನು ಬದಲಾಯಿಸಿಕೊಳ್ಳಬಹುದು.

(2) ಸಹಕಾರ ಸಂಘವು ತನ್ನ ಹೆಸರನ್ನು ಬದಲಾಯಿಸಿದಾಗ, ರಿಜಿಸ್ಟ್ರಾರನು, ಸಹಕಾರ ಸಂಘಗಳ ರಿಜಿಸ್ಟರಿನಲ್ಲಿ ಅದರ ಹಿಂದಿನ ಹೆಸರಿನ ಸ್ಥಳದಲ್ಲಿ ಹೊಸ ಹೆಸರನ್ನು ದಾಖಲುಮಾಡತಕ್ಕುದು, ಮತ್ತು ತದನುಸಾರವಾಗಿ ನೋಂದಣಿ ಪ್ರಮಾಣಪತ್ರದಲ್ಲಿ ತಿದ್ದುಪಡಿ ಮಾಡತಕ್ಕುದು.

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 27.10.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಸೇರಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ (2),(3) ಮತ್ತು (4)ನೇ ಉಪಪ್ರಕರಣಗಳನ್ನು 26.6.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
5. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ಸಹಕಾರ ಸಂಘದ ಹೆಸರಿನ ಬದಲಾವಣೆಯಿಂದ ಆ ಸಹಕಾರ ಸಂಘದ ಯಾವುವೇ ಹಕ್ಕುಗಳಿಗೆ ಅಥವಾ ಬಾಧ್ಯತೆಗಳಿಗೆ ಬಾಧಕವಾಗತಕ್ಕುದಲ್ಲ ಅಥವಾ ಆ ಸಂಘವು ಹೂಡಿದ ಅಥವಾ ಅದರ ವಿರುದ್ಧ ಹೂಡಲಾದ ಯಾವುದೇ ಕಾನೂನು ವ್ಯವಹರಣೆಗಳನ್ನು ದೋಷಯುಕ್ತಗೊಳಿಸತಕ್ಕುದಲ್ಲ ಮತ್ತು ಆ ಸಂಘದ ಹಿಂದಿನ ಹೆಸರಿನಲ್ಲಿ ಅದು ಅಥವಾ ಅದರ ವಿರುದ್ಧ ಮುಂದುವರಿಸಿರಬಹುದಾದ ಅಥವಾ ಪ್ರಾರಂಭಿಸಿರಬಹುದಾದ ಯಾವುವೇ ಕಾನೂನು ವ್ಯವಹರಣೆಗಳನ್ನು ಅದರ ಹೊಸ ಹೆಸರಿನಲ್ಲಿ ಮುಂದುವರಿಸಬಹುದು ಅಥವಾ ಪ್ರಾರಂಭಿಸಬಹುದು.

**11. ದಾಯಿತ್ವದ ಬದಲಾವಣೆ:–** (1) ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ನಿಯಮಗಳಿಗೆ ಒಳಪಟ್ಟು, ಸಹಕಾರ ಸಂಘವು, ತನ್ನ ಉಪವಿಧಿಗಳನ್ನು ತಿದ್ದುಪಡಿಮಾಡುವ ಮೂಲಕ ತನ್ನ ದಾಯಿತ್ವದ ಸ್ವರೂಪ ಅಥವಾ ವ್ಯಾಪ್ತಿಯನ್ನು ಬದಲಾಯಿಸಬಹುದು.

(2) ಸಹಕಾರ ಸಂಘವು, ತನ್ನ ದಾಯಿತ್ವದ ಸ್ವರೂಪ ಅಥವಾ ವ್ಯಾಪ್ತಿಯನ್ನು ಬದಲಾಯಿಸಲು ನಿರ್ಣಯವನ್ನು ಪಾಸುಮಾಡಿದಾಗ, ತನ್ನ ಎಲ್ಲ ಸದಸ್ಯರಿಗೆ ಮತ್ತು ಲೇಣೇದಾರರಿಗೆ ಆ ಬಗ್ಗೆ ಲಿಖಿತ ನೋಟೀಸನ್ನು ಕೊಡತಕ್ಕುದು, ಮತ್ತು ತದ್ವಿರುದ್ಧವಾದ ಯಾವುದೇ ಉಪವಿಧಿ ಅಥವಾ ಕರಾರು ಇದ್ದರೂ, ಯಾರೇ ಸದಸ್ಯನು ಅಥವಾ ಲೇಣೇದಾರನು ತನಗೆ ಆ ನೋಟೀಸು ಜಾರಿಯಾದ ದಿನಾಂಕದಿಂದ ಒಂದು ತಿಂಗಳ ಅವಧಿಯೊಳಗೆ, ಸಂದರ್ಭಾನುಸಾರ, ತನ್ನ ಷೇರುಗಳನ್ನು, ಠೇವಣಿಗಳನ್ನು ಅಥವಾ ಸಾಲಗಳನ್ನು ಹಿಂತೆಗೆದುಕೊಳ್ಳುವ ಆಯ್ಕೆಯ ಅವಕಾಶ ಹೊಂದಿರತಕ್ಕುದು.

(3) (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ತನ್ನ ಆಯ್ಕೆಯ ಅವಕಾಶವನ್ನು ಚಲಾಯಿಸದ ಯಾರೇ ಸದಸ್ಯನು ಅಥವಾ ಲೇಣೇದಾರನು ಆ ಬದಲಾವಣೆಗೆ ಒಪ್ಪಿಕೊಂಡಿರುವುದಾಗಿ ಭಾವಿಸತಕ್ಕುದು.

(4) ಸಹಕಾರ ಸಂಘದ ದಾಯಿತ್ವದ ಸ್ವರೂಪ ಅಥವಾ ವ್ಯಾಪ್ತಿಯನ್ನು ಬದಲಾಯಿಸುವ ಉಪವಿಧಿಯ ತಿದ್ದುಪಡಿಯನ್ನು -

(ಎ) ಎಲ್ಲಾ ಸದಸ್ಯರ ಮತ್ತು ಲೇಣೇದಾರರ ಒಪ್ಪಿಗೆಯನ್ನು ಪಡೆಯುವವರೆಗೆ ಅಥವಾ ಪಡೆಯಲಾಗಿದೆ ಎಂದು ಭಾವಿಸುವವರೆಗೆ; ಅಥವಾ

(ಬಿ) (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಆಯ್ಕೆಯ ಅವಕಾಶವನ್ನು, ಅದರಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಚಲಾಯಿಸುವ ಸದಸ್ಯರ ಮತ್ತು ಲೇಣೇದಾರರ ಎಲ್ಲ ಕ್ಲೇಮುಗಳನ್ನು ಸಂಪೂರ್ಣವಾಗಿ ಪೂರೈಸುವವರೆಗೆ

- ನೋಂದಾಯಿಸತಕ್ಕುದಲ್ಲ ಅಥವಾ ಅವು ಜಾರಿಯಾಗತಕ್ಕುದಲ್ಲ.

**12. ಸಹಕಾರ ಸಂಘದ ಉಪವಿಧಿಗಳ ತಿದ್ದುಪಡಿ:–** (1) ಸಹಕಾರ ಸಂಘದ ಯಾವುದೇ ಉಪವಿಧಿಯ ತಿದ್ದುಪಡಿಯು, ಈ ಅಧಿನಿಯಮದ ಮೇರೆಗೆ ನೋಂದಾಯಿತವಾದ ಹೊರತು ಅದು ಸಿಂಧುವಾಗತಕ್ಕುದಲ್ಲ.

[1][1ಎ. ಅಂಥ ತಿದ್ದುಪಡಿಯ ಪ್ರತಿಯೊಂದು ಪ್ರಸ್ತಾವದ ಜೊತೆಗೆ ಗೊತ್ತುಪಡಿಸಬಹುದಾದಂಥ ಶುಲ್ಕವು ಇರತಕ್ಕುದು ಮತ್ತು ಸಹಕಾರ ಸಂಘಗಳ ಬೇರೆ ಬೇರೆ ವರ್ಗಕ್ಕೆ ಅಥವಾ ವರ್ಗಗಳಿಗೆ ಬೇರೆ ಬೇರೆ ಫೀಜನ್ನು ಗೊತ್ತುಪಡಿಸಬಹುದು.][1]

(2) ಅಂಥ ತಿದ್ದುಪಡಿಯ ಪ್ರತಿಯೊಂದು ಪ್ರಸ್ತಾವವನ್ನು ರಿಜಿಸ್ಟ್ರಾರನಿಗೆ ಕಳಿಸತಕ್ಕುದು ಮತ್ತು ಆ ಪ್ರಸ್ತಾವಿತ ತಿದ್ದುಪಡಿಯು -

(i) ಈ ಅಧಿನಿಯಮದ ಮತ್ತು ನಿಯಮಗಳ ಉಪಬಂಧಗಳಿಗೆ ತದ್ವಿರುದ್ಧವಾಗಿಲ್ಲವೆಂದು;

(ii) ಸಹಕಾರ ತತ್ವಗಳಿಗೆ ಪ್ರತಿಕೂಲವಾಗಿಲ್ಲವೆಂದು;

(iii) ಸುಭದ್ರ ವ್ಯವಹಾರದ ಅಗತ್ಯತೆಗಳನ್ನು ಈಡೇರಿಸುವುದೆಂದು;

(iv) ಸಂಘದ ಸದಸ್ಯರ ಆರ್ಥಿಕ ಹಿತಾಸಕ್ತಿಗಳನ್ನು ಸಂವರ್ಧಿಸುವುದೆಂದು; ಮತ್ತು

(v) ಸಾಮಾಜಿಕ ನ್ಯಾಯದ ತತ್ವಗಳಿಗೆ ಅಸಂಗತವಾಗಿಲ್ಲವೆಂದು

- ರಿಜಿಸ್ಟ್ರಾರನಿಗೆ ಮನದಟ್ಟಾದರೆ, [2][ ಅವನು ಪ್ರಸ್ತಾವವನ್ನು ಸ್ವೀಕರಿಸಿದ ದಿನಾಂಕದಿಂದ ಮೂರು ತಿಂಗಳ ಅವಧಿಯೊಳಗೆ ತಿದ್ದುಪಡಿಯನ್ನು ನೋಂದಾಯಿಸತಕ್ಕುದು][2].

[3][(2-ಎ) ರಿಜಿಸ್ಟ್ರಾರನು (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಅಂಥ ಅರ್ಜಿಯನ್ನು ವಿಲೇ ಮಾಡಲು ಸಾಧ್ಯವಾಗದಿದ್ದರೆ, ಉಪ ವಿಧಿಗಳ ತಿದ್ದುಪಡಿಯನ್ನು ನೋಂದಣಿ ಮಾಡಲಾಗಿದೆಯೆಂದು ಭಾವಿಸತಕ್ಕುದು.][3]

[2][(3) ರಿಜಿಸ್ಟ್ರಾರನು, ಸಂಘದ ಉಪ ವಿಧಿಗಳ ತಿದ್ದುಪಡಿಯನ್ನು ನೋಂದಾಯಿಸಿದರೆ ಅಥವಾ ಅದು ನೋಂದಾಯಿತವಾಗಿದೆಯೆಂದು ಭಾವಿಸಿದರೆ ಅವನು ತಾನು ಪ್ರಮಾಣೀಕರಿಸಿದ ತಿದ್ದುಪಡಿಯ ಪ್ರತಿಯನ್ನು ಸಂಘಕ್ಕೆ ನೀಡತಕ್ಕುದು ಮತ್ತು ಅಂಥ ಪ್ರಮಾಣ ಪತ್ರವು, ಸಂದರ್ಭಾನುಸಾರ, ಉಪ-ವಿಧಿಗಳ ತಿದ್ದುಪಡಿಯನ್ನು ಕ್ರಮಬದ್ಧವಾಗಿ ನೋಂದಾಯಿಸಲಾಗಿದೆ ಅಥವಾ ಅದು ನೋಂದಾಯಿತವಾಗಿದೆಯೆಂದು ಭಾವಿಸಲಾಗಿದೆ ಎಂಬುದಕ್ಕೆ ನಿರ್ಣಾಯಕ ಸಾಕ್ಷ್ಯವಾಗಿರತಕ್ಕುದು.][2]

1. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಸೇರಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(4) ರಿಜಿಸ್ಟ್ರಾರನು ಸಹಕಾರ ಸಂಘದ ಉಪವಿಧಿಗಳ ತಿದ್ದುಪಡಿಯನ್ನು ನೋಂದಾಯಿಸಲು ನಿರಾಕರಿಸುವಲ್ಲಿ, ಅವನು ನಿರಾಕರಣೆಯ ಆದೇಶವನ್ನು, ಅದರ ಕಾರಣಗಳ ಸಹಿತ ಸಂಘಕ್ಕೆ ಕಳುಹಿಸತಕ್ಕುದು.

[1][(5) ರಿಜಿಸ್ಟ್ರಾರನಿಗೆ ಸಹಕಾರ ಸಂಘದ ಹಿತದೃಷ್ಟಿಯಲ್ಲಿ ಅಂಥ ಸಂಘದ ಉಪವಿಧಿಗಳ ಯಾವುದೇ ತಿದ್ದುಪಡಿಯು ಅವಶ್ಯ ಅಥವಾ ಅಪೇಕ್ಷಣೀಯವೆಂದು ಕಂಡುಬಂದರೆ, ರಿಜಿಸ್ಟ್ರಾರನು, ಆದೇಶದ ಮೂಲಕ, ತಾನು ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ತಾನು ನಿರ್ದಿಷ್ಟಪಡಿಸಿದ ಸಮಯದೊಳಗೆ ತಾನು ಪ್ರಸ್ತಾವಿಸಿದ ತಿದ್ದುಪಡಿಯನ್ನು ಮಾಡುವಂತೆ ಆ ಸಹಕಾರ ಸಂಘವನ್ನು ನಿರ್ದೇಶಿಸಬಹುದು.

(6) ಸಹಕಾರ ಸಂಘವು ಸದರಿ ಆದೇಶದಲ್ಲಿ ನಿರ್ದಿಷ್ಟಪಡಿಸಲಾದ ಸಮಯದೊಳಗೆ ಅಂಥ ತಿದ್ದುಪಡಿಯನ್ನು ಮಾಡದಿದ್ದರೆ, ಈ ಅಧಿನಿಯಮದಲ್ಲಿ ಏನೇ ಇದ್ದರೂ, ರಿಜಿಸ್ಟ್ರಾರನು, ಸಹಕಾರ ಸಂಘಕ್ಕೆ ಸುನಾವಣೆಯ ಅವಕಾಶವನ್ನು ಕೊಟ್ಟ ತರುವಾಯ ಸದರಿ ತಿದ್ದುಪಡಿಯನ್ನು ನೋಂದಾಯಿಸಬಹುದು ಮತ್ತು ಅದರ ಪ್ರತಿಯನ್ನು ತಾನು ಸಹಿ ಮಾಡಿದ ಒಂದು ಪ್ರಮಾಣಪತ್ರದೊಂದಿಗೆ ಸಹಕಾರ ಸಂಘಕ್ಕೆ ಕಳುಹಿಸಿಕೊಡಬಹುದು ಮತ್ತು ಆ ಪ್ರಮಾಣಪತ್ರವು ತಿದ್ದುಪಡಿಯು ಯುಕ್ತವಾಗಿ ನೋಂದಾಯಿತವಾಗಿದೆ ಎಂಬುದಕ್ಕೆ ನಿರ್ಣಾಯಕ ಸಾಕ್ಷ್ಯವಾಗತಕ್ಕುದು.][1]

**13. ಉಪವಿಧಿಗಳ ತಿದ್ದುಪಡಿಗಳು ಯಾವಾಗ ಜಾರಿಯಲ್ಲಿ ಬರುತ್ತವೆ:–** 106ನೇ ಪ್ರಕರಣದ ಮೇರೆಗೆ ಯಾವುದೇ ಅಪೀಲು ಆದೇಶಕ್ಕೆ ಒಳಪಟ್ಟು, ಸಹಕಾರ ಸಂಘದ ಉಪವಿಧಿಗಳ ತಿದ್ದುಪಡಿಯು, ಒಂದು ನಿರ್ದಿಷ್ಟ ದಿನದಿಂದ ಜಾರಿಯಲ್ಲಿ ಬರತಕ್ಕುದೆಂದು ವ್ಯಕ್ತಪಡಿಸಿದ್ದ ಹೊರತು, ಅದು ನೋಂದಾಯಿತವಾದ ದಿನದಂದು ಜಾರಿಗೆ ಬರತಕ್ಕುದು.

**14. ಸಹಕಾರ ಸಂಘಗಳ ಸಮ್ಮಿಳನ, ಆಸ್ತಿಗಳು ಮತ್ತು ದಾಯಿತ್ವಗಳ ವರ್ಗಾವಣೆ ಮತ್ತು ವಿಭಜನೆ:–** (1) ಸಹಕಾರ ಸಂಘವು, ಸಂಘದ ಮಹಾ ಸಭೆಯಲ್ಲಿ ಹಾಜರಿದ್ದು ಮತನೀಡುವ ಸದಸ್ಯರ ಮೂರನೇ ಎರಡರಷ್ಟು ಬಹುಮತದಿಂದ ಅಂಗೀಕೃತವಾದ ನಿರ್ಣಯದ ಮೂಲಕ,-

(ಎ) ತನ್ನನ್ನು ಎರಡು ಅಥವಾ ಹೆಚ್ಚು ಸಹಕಾರ ಸಂಘಗಳಾಗಿ ವಿಭಾಗಿಸಿಕೊಳ್ಳಬಹುದು; ಅಥವಾ

(ಬಿ) ತನ್ನ ಎಲ್ಲ ಆಸ್ತಿಗಳು ಮತ್ತು ದಾಯಿತ್ವಗಳನ್ನು ಅಥವಾ ಅವುಗಳ ಭಾಗವನ್ನು ಅದೇ ಬಗೆಯ ನಿರ್ಣಯದ ಮೂಲಕ ಅಂಥ ವರ್ಗಾವಣೆಗೆ ಒಪ್ಪಿಕೊಂಡ ಯಾವುದೇ ಇತರ ಸಹಕಾರ ಸಂಘಕ್ಕೆ ವರ್ಗಾಯಿಸಬಹುದು.

(2) ಯಾವುವೇ ಎರಡು ಅಥವಾ ಹೆಚ್ಚು ಸಹಕಾರ ಸಂಘಗಳು, ಅಂಥ ಪ್ರತಿಯೊಂದು ಸಂಘದ ಮಹಾ ಸಭೆಯಲ್ಲಿ ಹಾಜರಿದ್ದು ಮತನೀಡುವ ಸದಸ್ಯರ ಮೂರನೇ ಎರಡರಷ್ಟು ಬಹುಮತದಿಂದ ಅಂಗೀಕೃತವಾದ ನಿರ್ಣಯದ ಮೂಲಕ ಪರಸ್ಪರ ಸಮ್ಮಿಳನಗೊಂಡು, ಹೊಸ ಸಹಕಾರ ಸಂಘವನ್ನು ರೂಪಿಸಿಕೊಳ್ಳಬಹುದು.

(3) (1)ನೇ ಉಪಪ್ರಕರಣ ಅಥವಾ (2)ನೇ ಉಪಪ್ರಕರಣದ ಮೇರೆಗಿನ ಸಹಕಾರ ಸಂಘದ ನಿರ್ಣಯದಲ್ಲಿ, ಸಂದರ್ಭಾನುಸಾರ, ವರ್ಗಾವಣೆ, ವಿಭಜನೆ ಅಥವಾ ಸಮ್ಮಿಳನದ ಎಲ್ಲ ವಿವರಗಳು ಇರತಕ್ಕುದು ಮತ್ತು ಅಂಥ ಯಾವುದೇ ನಿರ್ಣಯವು ರಿಜಿಸ್ಟ್ರಾರನು ಅನುಮೋದಿಸಿದ ಹೊರತು ಜಾರಿಗೆ ಬರತಕ್ಕುದಲ್ಲ:

[2][ಪರಂತು, ಸಹಕಾರ ಬ್ಯಾಂಕಿನ ಸಂದರ್ಭದಲ್ಲಿ, ರಿಸರ್ವ್ ಬ್ಯಾಂಕಿನಿಂದ ಲಿಖಿತ ಪೂರ್ವ ಮಂಜೂರಾತಿಯಿಲ್ಲದೆ ರಿಜಿಸ್ಟ್ರಾರನು ಅಂಥ ನಿರ್ಣಯವನ್ನು ಅನುಮೋದಿಸತಕ್ಕುದಲ್ಲ.][2]

(4) ಸಹಕಾರ ಸಂಘವು, ಅಂಥ ಯಾವುದೇ ನಿರ್ಣಯವನ್ನು ಅಂಗೀಕರಿಸಿದಾಗ ಮತ್ತು ಅದನ್ನು ರಿಜಿಸ್ಟ್ರಾರನು ಅನುಮೋದಿಸಿದಾಗ, ಸಹಕಾರ ಸಂಘವು, ತನ್ನ ಎಲ್ಲ ಲೇಣೇದಾರರಿಗೆ ಮತ್ತು ಆ ನಿರ್ಣಯದ ಪರವಾಗಿ ಮತ ನೀಡದಿದ್ದ ಸಂಘದ ಸದಸ್ಯರಿಗೆ, ಆ ಬಗ್ಗೆ ಲಿಖಿತ ನೋಟೀಸು ಕೊಡತಕ್ಕುದು, ಮತ್ತು ತದ್ವಿರುದ್ಧವಾದ ಯಾವುವೇ ಉಪವಿಧಿಗಳು ಅಥವಾ ಕರಾರು ಇದ್ದರೂ, ಅಂಥ ನೋಟೀಸು ಕೊಡಲಾಗಿದ್ದ ಯಾರೇ ಲೇಣೇದಾರನಿಗೆ ಅಥವಾ ಸದಸ್ಯನಿಗೆ ಅವನಿಗೆ ನೋಟೀಸು ಜಾರಿಯಾದ ದಿನಾಂಕದಿಂದ ಒಂದು ತಿಂಗಳ ಅವಧಿಯೊಳಗೆ, ಸಂದರ್ಭಾನುಸಾರ, ತನ್ನ ಷೇರುಗಳನ್ನು, ಠೇವಣಿಗಳನ್ನು ಅಥವಾ ಸಾಲಗಳನ್ನು ಹಿಂತೆಗೆದುಕೊಳ್ಳುವ ಆಯ್ಕೆಯ ಅವಕಾಶ ಇರತಕ್ಕುದು.

(5) (4)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಅವಧಿಯೊಳಗೆ ತನ್ನ ಆಯ್ಕೆಯ ಅವಕಾಶವನ್ನು ಚಲಾಯಿಸದಿರುವ ಯಾರೇ ಸದಸ್ಯನು ಅಥವಾ ಲೇಣೇದಾರನು ಮತ್ತು ನಿರ್ಣಯದ ಪರವಾಗಿ ಮತ ನೀಡಿದ ಪ್ರತಿಯೊಬ್ಬ ಸದಸ್ಯನು, ನಿರ್ಣಯದಲ್ಲಿ ಇರುವ ಪ್ರಸ್ತಾವಗಳಿಗೆ ಸಮ್ಮತಿ ನೀಡಿರುವುದಾಗಿ ಭಾವಿಸತಕ್ಕುದು.

(6) ಈ ಪ್ರಕರಣದ ಮೇರೆಗೆ ಸಹಕಾರ ಸಂಘವು ಅಂಗೀಕರಿಸಿದ ನಿರ್ಣಯವು,-

(ಎ) ಅದಕ್ಕೆ ಈ ಪ್ರಕರಣದ ಮೇರೆಗೆ ಎಲ್ಲ ಸದಸ್ಯರ ಮತ್ತು ಲೇಣೇದಾರರ ಸಮ್ಮತಿ ಪಡೆಯುವತನಕ ಅಥವಾ ಪಡೆಯಲಾಗಿದೆಯೆಂದು ಭಾವಿಸುವ ತನಕ; ಅಥವಾ

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ (5) ಮತ್ತು (6)ನೇ ಉಪಪ್ರಕರಣಗಳನ್ನು ಸೇರಿಸಲಾಗಿದೆ.
2. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಬಿ) (4)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಆಯ್ಕೆಯ ಅವಕಾಶವನ್ನು ಅದರಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಚಲಾಯಿಸಿರುವ ಸದಸ್ಯರ ಮತ್ತು ಲೇಣೇದಾರರ ಎಲ್ಲ ಕ್ಲೇಮುಗಳನ್ನು ಸಂಪೂರ್ಣವಾಗಿ ಪೂರೈಸುವ ತನಕ

- ಜಾರಿಯಾಗತಕ್ಕುದಲ್ಲ.

(7) ಈ ಪ್ರಕರಣದ ಮೇರೆಗೆ ಸಹಕಾರ ಸಂಘವು ಅಂಗೀಕರಿಸಿದ ನಿರ್ಣಯವು ಯಾವುದೇ ಆಸ್ತಿಗಳು ಮತ್ತು ದಾಯಿತ್ವಗಳ ವರ್ಗಾವಣೆಯನ್ನು ಒಳಗೊಂಡಿರುವಲ್ಲಿ, ಆಗ ಆ ನಿರ್ಣಯವು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಯಾವುದೇ ಮುಂದಿನ ಹಸ್ತಾಂತರಣವಿಲ್ಲದೆ ಆಸ್ತಿಗಳು ಮತ್ತು ದಾಯಿತ್ವಗಳು ವರ್ಗಾವಣೆ ಪಡೆದವನಲ್ಲಿ ನಿಹಿತವಾಗಲು ಪರ್ಯಾಪ್ತ ಹಸ್ತಾಂತರಣವಾಗತಕ್ಕುದು.

[1][ [2][**14ಎ.** xxx][2]

**14ಬಿ. ಕೆಲವು ಪ್ರದೇಶಗಳಲ್ಲಿ ರಿಜಿಸ್ಟ್ರಾರನು ಸಹಕಾರ ಬ್ಯಾಂಕುಗಳ ಸಮ್ಮಿಳನಕ್ಕೆ ಯೋಜನೆಯನ್ನು ತಯಾರಿಸುವುದು:-** (1) ಯಾವೊಂದು ಸಹಕಾರ ಬ್ಯಾಂಕಿನ ಸಂಬಂಧದಲ್ಲಿ ಕೇಂದ್ರಸರ್ಕಾರವು, ಬ್ಯಾಂಕು ವ್ಯವಹಾರ ವಿನಿಯಮನ ಅಧಿನಿಯಮ, 1949ರ (1949ರ ಕೇಂದ್ರ ಅಧಿನಿಯಮ 10) 45ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಸ್ಥಗಿತಗೊಳಿಸುವ ಆದೇಶವನ್ನು ಹೊರಡಿಸಿರುವಲ್ಲಿ ಸ್ಥಗಿತಗೊಳಿಸಿದ ಅವಧಿಯಲ್ಲಿ, ರಿಜಿಸ್ಟ್ರಾರನು -

(i) ಸಹಕಾರ ಬ್ಯಾಂಕಿನ ಪುನಃ ಸಂಘಟನೆಗೆ; ಅಥವಾ

(ii) ಸಹಕಾರ ಬ್ಯಾಂಕನ್ನು ಯಾವುದೇ ಇತರ ಸಹಕಾರ ಬ್ಯಾಂಕಿನೊಂದಿಗೆ ಸಮ್ಮಿಳನಗೊಳಿಸುವ ಸಲುವಾಗಿ

- ಒಂದು ಯೋಜನೆಯನ್ನು ತಯಾರಿಸಬಹುದು.

(2) ಅಂಥ ಯಾವುದೇ ಯೋಜನೆಯನ್ನು ರಿಸರ್ವ್ ಬ್ಯಾಂಕು ಮಂಜೂರು ಮಾಡಿದ ಹೊರತು, ಅದನ್ನು ಜಾರಿಗೊಳಿಸತಕ್ಕುದಲ್ಲ.

**14ಸಿ. ಠೇವಣಿ ವಿಮಾ ನಿಗಮಕ್ಕೆ ಸಹಕಾರ ಬ್ಯಾಂಕಿನ ದಾಯಿತ್ವ:-** ಈ ಅಧಿನಿಯಮದ 14ನೇ ಪ್ರಕರಣದಲ್ಲಿ ಅಥವಾ ಇತರ ಉಪಬಂಧದಲ್ಲಿ ಏನೇ ಇದ್ದರೂ, ಠೇವಣಿ ವಿಮಾ ನಿಗಮ ಅಧಿನಿಯಮ, 1961ರ (1961ರ ಕೇಂದ್ರ ಅಧಿನಿಯಮ 47) ಅರ್ಥದಲ್ಲಿ ವಿಮೆ ಪಡೆದ ಬ್ಯಾಂಕು ಆಗಿರುವ ಯಾವೊಂದು ಸಹಕಾರ ಬ್ಯಾಂಕು ಸಮ್ಮಿಳನಗೊಂಡಿರುವಲ್ಲಿ ಅಥವಾ ಅದರ ಪುನಃ ಸಂಘಟನೆಯಾಗಿರುವಲ್ಲಿ ಮತ್ತು ಠೇವಣಿ ವಿಮಾ ನಿಗಮವು ವಿಮೆ ಪಡೆದ ಬ್ಯಾಂಕಿನ ಠೇವಣಿದಾರರಿಗೆ, ಆ ಅಧಿನಿಯಮದ 16ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಸಂದಾಯ ಮಾಡಲು ಹೊಣೆಯಾಗಿರುವಲ್ಲಿ, ಸಂದರ್ಭಾನುಸಾರ, ವಿಮೆ ಪಡೆದ ಆ ಬ್ಯಾಂಕು ಯಾವುದರೊಂದಿಗೆ ಸಮ್ಮಿಳನಗೊಂಡಿದೆಯೋ ಆ ಬ್ಯಾಂಕು ಅಥವಾ ಅಂಥ ಸಮ್ಮಿಳನವಾದ ಮೇಲೆ ರಚಿತವಾದ ಹೊಸ ಸಹಕಾರ ಬ್ಯಾಂಕು ಅಥವಾ ವಿಮೆ ಪಡೆದ ಬ್ಯಾಂಕು ಅಥವಾ ವರ್ಗಾವಣೆ ಪಡೆದ ಬ್ಯಾಂಕು ಅಂಥ ಸಂದರ್ಭಗಳಲ್ಲಿ ಠೇವಣಿ ವಿಮಾ ನಿಗಮ ಅಧಿನಿಯಮ, 1961ರ 21ನೇ ಪ್ರಕರಣದಲ್ಲಿ ಉಲ್ಲೇಖಿಸಲಾದ ಪ್ರಮಾಣದಲ್ಲಿ ಮತ್ತು ರೀತಿಯಲ್ಲಿ ಠೇವಣಿ ವಿಮಾ ನಿಗಮಕ್ಕೆ ಮರುಸಂದಾಯ ಮಾಡಲು ಹೊಣೆಯಾಗತಕ್ಕುದು.][1]

**15. ಕೆಲವು ಸಂದರ್ಭಗಳಲ್ಲಿ ಸಹಕಾರ ಸಂಘಗಳ ನೋಂದಣಿ ಪ್ರಮಾಣ ಪತ್ರಗಳ ರದ್ದಿಯಾತಿ:-** (1) ಸಹಕಾರ ಸಂಘದ ಸಮಗ್ರ ಆಸ್ತಿಗಳನ್ನು ಮತ್ತು ದಾಯಿತ್ವಗಳನ್ನು 14ನೇ ಪ್ರಕರಣ [1][ಅಥವಾ 14ಎ ಪ್ರಕರಣದ][1] ಉಪಬಂಧಗಳಿಗನುಸಾರವಾಗಿ ಇನ್ನೊಂದು ಸಹಕಾರ ಸಂಘಕ್ಕೆ ವರ್ಗಾಯಿಸಿರುವಲ್ಲಿ, ಮೊದಲು ನಮೂದಿಸಿದ ಸಹಕಾರ ಸಂಘದ ನೋಂದಣಿಯು ರದ್ದಾಗತಕ್ಕುದು ಮತ್ತು ಆ ಸಂಘವು ವಿಘಟಿತವಾಗಿದೆಯೆಂದು ಭಾವಿಸತಕ್ಕುದು ಮತ್ತು ಅದು ನಿಗಮಿತ ನಿಕಾಯವಾಗಿರುವುದು ಮುಕ್ತಾಯವಾಗತಕ್ಕುದು.

(2) ಎರಡು ಅಥವಾ ಹೆಚ್ಚು ಸಹಕಾರ ಸಂಘಗಳು 14ನೇ ಪ್ರಕರಣದ [1][ಅಥವಾ 14ಎ ಪ್ರಕರಣದ][1] ಉಪಬಂಧಗಳಿಗನುಸಾರವಾಗಿ ಹೊಸ ಸಹಕಾರ ಸಂಘವಾಗಿ ಸಮ್ಮಿಳನಗೊಂಡಿರುವಲ್ಲಿ, ಸಮ್ಮಿಳನಗೊಳ್ಳುವ ಪ್ರತಿಯೊಂದು ಸಂಘದ ನೋಂದಣಿಯು ಹೊಸ ಸಂಘವು ನೋಂದಣಿಯಾದ ಮೇಲೆ ರದ್ದಾಗತಕ್ಕುದು ಮತ್ತು ಅಂಥ ಪ್ರತಿಯೊಂದು ಸಂಘವು ವಿಘಟಿತವಾಗಿದೆ ಎಂದು ಭಾವಿಸತಕ್ಕುದು ಮತ್ತು ಅದು ನಿಗಮಿತ ನಿಕಾಯವಾಗಿರುವುದು ಮುಕ್ತಾಯವಾಗತಕ್ಕುದು.

(3) ಯಾವೊಂದು ಸಹಕಾರ ಸಂಘವು, 14ನೇ ಪ್ರಕರಣ [1][ಅಥವಾ 14ಎ ಪ್ರಕರಣದ][1] ಉಪಬಂಧಗಳಿಗನುಸಾರವಾಗಿ ಎರಡು ಅಥವಾ ಹೆಚ್ಚು ಸಹಕಾರ ಸಂಘಗಳಾಗಿ [3][ವಿಭಜನೆಯಾಗಿರುವಲ್ಲಿ][3] ಆ ಸಂಘದ ನೋಂದಣಿಯು ಹೊಸ ಸಂಘಗಳು ನೋಂದಣಿಯಾದ ಮೇಲೆ ರದ್ದಾಗತಕ್ಕುದು ಮತ್ತು ಆ ಸಂಘವು ವಿಘಟಿತವಾಗಿದೆ ಎಂದು ಭಾವಿಸತಕ್ಕುದು ಮತ್ತು ಅದು ನಿಗಮಿತ ನಿಕಾಯವಾಗಿ ಅಸ್ತಿತ್ವದಲ್ಲಿರುವುದು ಮುಕ್ತಾಯವಾಗತಕ್ಕುದು.

1. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
3. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

## ಅಧ್ಯಾಯ-III

## ಸಹಕಾರ ಸಂಘದ ಸದಸ್ಯರು ಮತ್ತು ಅವರ ಹಕ್ಕುಗಳು ಮತ್ತು ಹೊಣೆಗಾರಿಕೆಗಳು

**16. ಸದಸ್ಯರಾಗಬಹುದಾದ ವ್ಯಕ್ತಿಗಳು:-** [1][(1) 17ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು ಈ ಮುಂದಿನವನ್ನು ಹೊರತುಪಡಿಸಿ ಯಾರೇ ವ್ಯಕ್ತಿಗೆ ಸಹಕಾರ ಸಂಘದ ಸದಸ್ಯರನ್ನಾಗಿ ಪ್ರವೇಶ ನೀಡತಕ್ಕುದಲ್ಲ, ಎಂದರೆ:-

(ಎ) ಕರಾರು ಅಧಿನಿಯಮ, 1872ರ (1872ರ ಕೇಂದ್ರಾಧಿನಿಯಮ 1872ರ ix) ರ ಮೇರೆಗೆ ಕರಾರು ಮಾಡಿಕೊಳ್ಳಲು ಸಕ್ಷಮನಾದ ವ್ಯಕ್ತಿ;

(ಬಿ) ಯಾವುದೇ ಇತರ ಸಹಕಾರ ಸಂಘ;

(ಸಿ) ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ;

(ಡಿ) ಭಾರತೀಯ ಜೀವ ವಿಮಾ ನಿಗಮ, ರಾಜ್ಯ ಉಗ್ರಾಣ ನಿಗಮ ಮತ್ತು ರಾಜ್ಯ ಸರ್ಕಾರ ಅನುಮೋದಿಸಬಹುದಾದ ಅಂಥ ಇತರ ಸಂಸ್ಥೆಗಳು;

(ಇ) ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960 (1960ರ ಕರ್ನಾಟಕ ಅಧಿನಿಯಮ 17)ರ ಮೇರೆಗೆ ನೋಂದಾಯಿತವಾಗಿರುವ ಸಂಘವನ್ನು ಒಳಗೊಂಡಂತೆ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ರಚಿಸಲಾದ ಫರ್ಮು, ಕಂಪನಿ ಅಥವಾ ಯಾವುದೇ ಇತರ ನಿಗಮಿತ ನಿಕಾಯ;

(ಎಫ್) ಕರ್ನಾಟಕ ಕೃಷಿ ಉತ್ಪಾದನಾ ಮಾರುಕಟ್ಟೆ (ವಿನಿಯಮ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27) ರ ಮೇರೆಗೆ ಸ್ಥಾಪಿಸಿದ ಮಾರುಕಟ್ಟೆ ಸಮಿತಿ;

(ಜಿ) ಸ್ಥಳೀಯ ಪ್ರಾಧಿಕಾರ.

**ವಿವರಣೆ:-** ಈ ಖಂಡದ ಉದ್ದೇಶಕ್ಕಾಗಿ, ಸ್ಥಳೀಯ ಪ್ರಾಧಿಕಾರ ಎಂದರೆ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ರಚಿಸಿರುವ ಮುನಸಿಪಲ್ ಕಾರ್ಪೊರೇಷನ್, ಮುನಸಿಪಲ್ ಕೌನ್ಸಿಲ್, ಪಟ್ಟಣ ಪಂಚಾಯಿತಿ, ಜಿಲ್ಲಾ ಪಂಚಾಯಿತಿ, ತಾಲ್ಲೂಕು ಪಂಚಾಯತಿ ಅಥವಾ ಗ್ರಾಮ ಪಂಚಾಯತಿ.][1]

[2][(2) ಯಾವುದೇ ಸಹಕಾರ ಸಂಘವು, ಈ [1][ಅಧಿನಿಯಮದ, ನಿಯಮಗಳ ಮತ್ತು ಉಪವಿಧಿಗಳ][1] ಉಪ ಬಂಧಗಳ ಮೇರೆಗೆ ಸದಸ್ಯತ್ವಕ್ಕೆ ಯುಕ್ತವಾದ ಅರ್ಹತೆಯಿರುವ ಯಾರೇ ವ್ಯಕ್ತಿಗೆ ಸಾಕಷ್ಟು ಕಾರಣವಿಲ್ಲದೆ ಸದಸ್ಯತ್ವಕ್ಕೆ ಪ್ರವೇಶವನ್ನು ನಿರಾಕರಿಸತಕ್ಕುದಲ್ಲ.

(3) ಯಾವುದೇ ಸಹಕಾರ ಸಂಘದ ಸದಸ್ಯನಾಗಬಯಸುವ ಯಾರೇ ವ್ಯಕ್ತಿಯು, ಅಂಥ ಸಂಘದ ಸದಸ್ಯನಾಗುವುದಕ್ಕೆ ಪ್ರವೇಶ ಕೋರಿ ಲಿಖಿತ ಅರ್ಜಿಯನ್ನು ಸಲ್ಲಿಸತಕ್ಕುದು.

(4) ಪ್ರತಿಯೊಂದು ಸಹಕಾರ ಸಂಘವು, ಅಂಥ ಸಂಘಕ್ಕೆ ಪ್ರವೇಶ ಕೋರುವ ಅರ್ಜಿಯು ತಲುಪಿದ ದಿನಾಂಕದಿಂದ ಮೂರು ತಿಂಗಳೊಳಗಾಗಿ ಅಂಥ ವ್ಯಕ್ತಿಯನ್ನು ಸದಸ್ಯನಾಗಿ ಸೇರಿಸಿಕೊಳ್ಳತಕ್ಕುದು ಅಥವಾ ಸೇರಿಸಿಕೊಳ್ಳಲು ನಿರಾಕರಿಸತಕ್ಕುದು ಮತ್ತು ಅಂಥ ಯುಕ್ತ ಅವಧಿಯೊಳಗಾಗಿ ಪ್ರವೇಶ ನೀಡಿದ ಬಗ್ಗೆ ಅಥವಾ ನಿರಾಕರಣೆಯ ಬಗ್ಗೆ ಅರ್ಜಿದಾರನಿಗೆ ಲಿಖಿತ ಪತ್ರವನ್ನು ಕಳಿಸತಕ್ಕುದು. ಸದಸ್ಯನಾಗಲು ಪ್ರವೇಶದ ಬಗ್ಗೆ ಅಂಥ ಯುಕ್ತ ಅವಧಿಯೊಳಗಾಗಿ ಅರ್ಜಿದಾರನಿಗೆ ಯಾವ ಸೂಚನೆಯೂ ತಲುಪದಿದ್ದರೆ, ಅವನ ಪ್ರವೇಶ ಕೋರುವ ಅರ್ಜಿಯನ್ನು 105ಎ ಪ್ರಕರಣದ ಉದ್ದೇಶಗಳಿಗಾಗಿ ಯುಕ್ತ ಅವಧಿಯ ಕೊನೆಯ ದಿನದಂದು ಆ ಸಹಕಾರ ಸಂಘವು ನಿರಾಕರಿಸಿತ್ತೆಂದು ಭಾವಿಸತಕ್ಕುದು.][2]

[3][(5) ಹಿಂದಿನ ಉಪಪ್ರಕರಣಗಳಲ್ಲಿ ಅಥವಾ 18ನೇ ಪ್ರಕರಣದಲ್ಲಿ ಅಥವಾ ರಾಜ್ಯಸರ್ಕಾರವು, ಅಧಿಸೂಚನೆಯ ಮೂಲಕ, ನಿರ್ದಿಷ್ಟಪಡಿಸಬಹುದಾದಂಥ ಸಹಕಾರ ಸಂಘ ಅಥವಾ ಸಹಕಾರ ಸಂಘಗಳ ವರ್ಗಗಳ ನಿಯಮಗಳು ಮತ್ತು ಉಪವಿಧಿಗಳಲ್ಲಿ ಏನೇ ಇದ್ದರೂ, ಅಂಥ ಸಹಕಾರ ಸಂಘದ ಸದಸ್ಯನಾಗಲು ಪ್ರವೇಶವನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ವ್ಯಕ್ತಿಯು, ಅಂಥ ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ ಅಂಥ ಸಹಕಾರ ಸಂಘದ ಸಹ ಸದಸ್ಯನಾಗಿ ಪ್ರವೇಶ ಪಡೆದಿರುವನೆಂದು ಭಾವಿಸತಕ್ಕುದು.

(6) ಸಂಘವು ಯುಕ್ತ ದಿನಾಂಕದಿಂದ [1][ಅರವತ್ತು ದಿನಗಳ][1] ಒಳಗೆ ಅಂಥ ಪ್ರವೇಶಕ್ಕೆ ಆಕ್ಷೇಪಿಸಿ ಅರ್ಜಿಯನ್ನು ರಿಜಿಸ್ಟ್ರಾರನಿಗೆ ಸಲ್ಲಿಸದಿದ್ದಲ್ಲಿ ಅಂಥ ವ್ಯಕ್ತಿಯು ಸದಸ್ಯನಾಗಿ ಪ್ರವೇಶ ಪಡೆದಿರುವುದಾಗಿ ಭಾವಿಸತಕ್ಕುದು.

(7) [1][(6)ನೇ ಉಪಪ್ರಕರಣದ][1] ಮೇರೆಗೆ ಅರ್ಜಿಯನ್ನು ಸಲ್ಲಿಸಿರುವಲ್ಲಿ, ರಿಜಿಸ್ಟ್ರಾರನು, ಆ ವ್ಯಕ್ತಿಗೆ ಮತ್ತು ಸಂಬಂಧಿಸಿದ ಸಹಕಾರ ಸಂಘಕ್ಕೆ ಮನವಿ ಮಾಡಿಕೊಳ್ಳಲು ಅವಕಾಶವನ್ನು ನೀಡಿದ ತರುವಾಯ, ಆ ವ್ಯಕ್ತಿಯು 17ನೇ ಪ್ರಕರಣದ ಮೇರೆಗೆ ಸದಸ್ಯನಾಗಲು

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ (2) ರಿಂದ (4)ರ ವರೆಗಿನ ಉಪಪ್ರಕರಣಗಳನ್ನು 26.6.1965 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ (5) ರಿಂದ (7)ರ ವರೆಗಿನ ಉಪಪ್ರಕರಣಗಳನ್ನು 20.1.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

ಅನರ್ಹನಲ್ಲದ ವ್ಯಕ್ತಿ ಎಂದು ಅವನಿಗೆ ಕಂಡುಬಂದಲ್ಲಿ ಆದೇಶದ ಮೂಲಕ ಆ ಅರ್ಜಿಯನ್ನು ತಿರಸ್ಕರಿಸತಕ್ಕುದು ಮತ್ತು ಆ ತರುವಾಯ ವ್ಯಕ್ತಿಯು, ಸಂಬಂಧಪಟ್ಟ ಸಹಕಾರ ಸಂಘದ ಸದಸ್ಯನಾಗಿ ಪ್ರವೇಶ ಪಡೆದಿರುವನೆಂದು ಭಾವಿಸತಕ್ಕುದು.][3]

[1][(8) ಈ ಪ್ರಕರಣ ಹಾಗೂ 17ನೇ ಪ್ರಕರಣದಲ್ಲಿ ಏನೇ ಇದ್ದರೂ, ರಾಜ್ಯಸರ್ಕಾರವು ಅಂಥ ಸಹಕಾರ ಸಂಘದ ಷೇರು ಬಂಡವಾಳಕ್ಕೆ ವಂತಿಗೆ ನೀಡಿದ ದಿನದಿಂದ ಆ ಸಹಕಾರ ಸಂಘದ ಸದಸ್ಯನಾಗಿ ಪ್ರವೇಶ ಪಡೆದಿದೆ ಎಂದು ಭಾವಿಸತಕ್ಕುದು.][1]

**17. ಸದಸ್ಯತ್ವಕ್ಕೆ ಅನರ್ಹತೆ:-** (1) ಯಾರೇ ವ್ಯಕ್ತಿಯು -

(ಎ) ತಾನು ದಿವಾಳಿಯೆಂದು ನ್ಯಾಯನಿರ್ಣಯ ಪಡೆಯಲು ಅರ್ಜಿಹಾಕಿಕೊಂಡಿದ್ದರೆ ಅಥವಾ ಅನನುಮುಕ್ತ ದಿವಾಳಿಯಾಗಿದ್ದರೆ; ಅಥವಾ

(ಬಿ) ರಾಜಕೀಯ ಸ್ವರೂಪದ ಅಪರಾಧವಾಗಿರದ ಅಥವಾ ನೈತಿಕ ಅಧಃಪತನದ ಅಪರಾಧಕ್ಕಾಗಿ ಶಿಕ್ಷೆ ವಿಧಿಸಲ್ಪಟ್ಟು, ಅಂಥ ಶಿಕ್ಷೆಯ ತೀರ್ಪು ವಿಪರ್ಯಯವಾಗಿರದಿದ್ದರೆ ಅಥವಾ ಅಂಥ ಅಪರಾಧವು ಕ್ಷಮಿಸಲ್ಪಡದಿದ್ದರೆ, ಮತ್ತು ಅಂಥ ಶಿಕ್ಷೆ ಮುಗಿದ ತಾರೀಖಿನಿಂದ ಐದು ವರ್ಷಗಳ ಅವಧಿ ಗತಿಸಿರದಿದ್ದರೆ;

[2][(ಸಿ) ಅಂಥ ಸಹಕಾರ ಸಂಘವು ನಡೆಸುವಂಥ ಬಗೆಯ ವ್ಯವಹಾರವನ್ನು ನಡೆಸುತ್ತಿದ್ದರೆ [3][xxxx][3];

[3][ವಿವರಣೆ:- "ಹತ್ತಿರದ ಸಂಬಂಧಿ" ಪದಾವಳಿಯು, 29 ಸಿ ಪ್ರಕರಣದ (1)ನೇ ಉಪಪ್ರಕರಣದ (ಎಫ್) ಖಂಡದ ವಿವರಣೆಯಲ್ಲಿ ಕೊಟ್ಟಿರುವ ಅರ್ಥವನ್ನೇ ಹೊಂದಿರತಕ್ಕದ್ದು;][3]

(ಡಿ) ಅದೇ ಬಗೆಯ ವ್ಯವಹಾರವನ್ನು ನಡೆಸುತ್ತಿರುವ ಸಹಕಾರ ಸಂಘಕ್ಕೆ ಅದಾಗಲೇ ಸದಸ್ಯನಾಗಿದ್ದರೆ

- ಅವನು ಸದಸ್ಯನಾಗಿ ಪ್ರವೇಶ ಪಡೆಯಲು ಅರ್ಹನಾಗತಕ್ಕುದಲ್ಲ.][2]

(2) ಸದಸ್ಯನು, [4][(1)ನೇ ಉಪಪ್ರಕರಣದ [5][xxx][5]][4] ರಲ್ಲಿ ನಿರ್ದಿಷ್ಟಪಡಿಸುವ ಅನರ್ಹತೆಗಳಲ್ಲಿ ಯಾವುದಾದರೊಂದಕ್ಕೆ ಒಳಪಟ್ಟಿದ್ದರೆ, ಅನರ್ಹನಾದ ದಿನಾಂಕದಿಂದ ಅವನು ಸದಸ್ಯನಾಗಿರುವುದು ಕೊನೆಗೊಂಡಿತೆಂದು ಭಾವಿಸತಕ್ಕುದು.

[3][(2ಎ) ಸದಸ್ಯನು ಅಧಿನಿಯಮ, ನಿಯಮಗಳ ಅಥವಾ ಉಪ ವಿಧಿಗಳ ಮೇರೆಗೆ ಸದಸ್ಯನಾಗಿ ತನ್ನ ಕರ್ತವ್ಯಗಳನ್ನು ನೆರವೇರಿಸುವಲ್ಲಿ ಸತತವಾಗಿ ಮೂರು ವರ್ಷಗಳ ಕಾಲ ವಿಫಲನಾದರೆ, ಅವನು ಅಂಥ ಅವಧಿ ಮುಗಿದಾಗ ಸದಸ್ಯನಾಗಿರುವುದು ನಿಂತುಹೋಗತಕ್ಕುದು.][3]

[6][(3) ಸದಸ್ಯನು, (2)ನೇ ಅಥವಾ (2ಎ) ಉಪ-ಪ್ರಕರಣದ ಮೇರೆಗೆ ಸದಸ್ಯನಾಗಿರುವುದು ನಿಂತುಹೋಗಿದೆಯೆಂದು ಭಾವಿಸಬೇಕಾಗಿದೆಯೇ ಅಥವಾ ಸದಸ್ಯನಾಗಿರುವುದು ನಿಂತು ಹೋಗಿದೆಯೇ ಎಂಬ ಪ್ರಶ್ನೆ ಉದ್ಭವಿಸಿದಾಗ, ರಿಜಿಸ್ಟ್ರಾರನು ಸ್ವತಃ ತಾನೇ ಅಥವಾ ಅವನಿಗೆ ಸಲ್ಲಿಸಿದ ವರದಿಯ ಮೇಲೆ ಮತ್ತು ಸಂಬಂಧಪಟ್ಟ ವ್ಯಕ್ತಿಗೆ ಅಹವಾಲು ಹೇಳಿಕೊಳ್ಳಲು ಅವನಿಗೆ ಒಂದು ಅವಕಾಶವನ್ನು ಕೊಟ್ಟ ನಂತರ ವಿಷಯವನ್ನು ಬಗೆಹರಿಸಬಹುದು."][6]

**18. ನಾಮಮಾತ್ರದ ಅಥವಾ ಸಹವರ್ತಿ ಸದಸ್ಯರು:-** [7][(1) 16ನೆಯ ಪ್ರಕರಣದಲ್ಲಿ ಏನೇ ಇದ್ದರೂ ಸಹಕಾರ ಸಂಘವು,-

(ಎ) ಯಾರೇ ವ್ಯಕ್ತಿಯನ್ನು ನಾಮಮಾತ್ರದ ಅಥವಾ ಸಹವರ್ತಿ ಸದಸ್ಯನಾಗಿ;

(ಬಿ) ಯಾವುದೇ ಬ್ಯಾಂಕಿಂಗ್ ಕಂಪನಿಯನ್ನು ನಾಮಮಾತ್ರ ಸದಸ್ಯನಾಗಿ;

**ವಿವರಣೆ:-** ಈ ಉಪಪ್ರಕರಣದಲ್ಲಿ "ಬ್ಯಾಂಕಿಂಗ್ ಕಂಪನಿ" ಎಂಬುದು ಠೇವಣಿ ವಿಮಾ ನಿಗಮ ಅಧಿನಿಯಮ, 1961 ರಲ್ಲಿ (1961ರ ಕೇಂದ್ರಾಧಿನಿಯಮ 47) ಅದಕ್ಕೆ ಕೊಟ್ಟಿರುವ ಅರ್ಥವನ್ನೇ ಹೊಂದಿರತಕ್ಕುದು;

[3][(ಸಿ) ಯಾವುದೇ ಫರ್ಮು, ಕಂಪನಿ, ಸಹಕಾರ ಸಂಘ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ರಚಿಸಲಾದ ಯಾವುದೇ ನಿಕಾಯ ಅಥವಾ ನಿಗಮವನ್ನು ನಾಮಮಾತ್ರದ ಅಥವಾ ಸಹವರ್ತಿ ಸದಸ್ಯನಾಗಿ;][3]

[8][(ಡಿ) ಸ್ವಸಹಾಯ ತಂಡವನ್ನು ನಾಮಮಾತ್ರ ಸದಸ್ಯರಾಗಿ][8]

- ಸೇರಿಸಿಕೊಳ್ಳಬಹುದು.

1. 1979ರ ಅಧಿನಿಯಮ ಸಂಖ್ಯೆ 16ರ ಮೂಲಕ 1.6.1960 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1976ರ ಅಧಿನಿಯಮ ಸಂಖ್ಯೆ 71ರ ಮೂಲಕ 3.11.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಬಿಟ್ಟುಬಿಡಲಾಗಿದೆ.
4. 1976ರ ಅಧಿನಿಯಮ ಸಂಖ್ಯೆ 71ರ ಮೂಲಕ 3.11.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
6. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
7. 1975ರ ಅದಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
8. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಸೇರಿಸಲಾಗಿದೆ.

(2) ನಾಮಮಾತ್ರ ಸದಸ್ಯನು ಸಂಘದ ಆಸ್ತಿಗಳು ಅಥವಾ ಲಾಭಗಳಲ್ಲಿ ಯಾವುದೇ ರೂಪದಲ್ಲಿ ಯಾವುದೇ ಪಾಲಿಗೆ ಹಕ್ಕುಹೊಂದಿರತಕ್ಕುದಲ್ಲ ಮತ್ತು ಒಬ್ಬ ವ್ಯಕ್ತಿಯಾಗಿರುವ ನಾಮಮಾತ್ರ ಸದಸ್ಯನು ಸಂಘದ [1][ಪದಾಧಿಕಾರಿ][1] ಯಾಗಲು ಹಕ್ಕು ಹೊಂದಿರತಕ್ಕುದಲ್ಲ.][7]

(3) ಸಹವರ್ತಿ ಸದಸ್ಯನು ಷೇರುಗಳನ್ನು ಹೊಂದಿರಬಹುದು, ಆದರೆ ಸಂಘದ [1][ಪದಾಧಿಕಾರಿ][1] ಯಾಗಲು ಹಕ್ಕು ಹೊಂದಿರತಕ್ಕುದಲ್ಲ.

(4) ಈ ಪ್ರಕರಣದಲ್ಲಿ ಉಪಬಂಧಿಸಿದುದನ್ನುಳಿದು, ನಾಮಮಾತ್ರ ಅಥವಾ ಸಹವರ್ತಿ ಸದಸ್ಯನು, ಸಂಘದ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಸದಸ್ಯನ ವಿಶೇಷಾಧಿಕಾರಗಳನ್ನು ಮತ್ತು ಹಕ್ಕುಗಳನ್ನು ಹೊಂದಿರತಕ್ಕುದು ಮತ್ತು ಅಂಥ ಸದಸ್ಯನ ಹೊಣೆಗಾರಿಕೆಗಳಿಗೆ ಒಳಪಟ್ಟಿರತಕ್ಕುದು.

[2]**[18ಎ. ಸದಸ್ಯತ್ವದ ಸಮಾಪ್ತಿ:–** ಒಬ್ಬ ವ್ಯಕ್ತಿಯು ಒಂದು ಸಹಕಾರ ಸಂಘದ ಸದಸ್ಯನಾಗಿರುವುದು,-

(ಎ) ಒಬ್ಬ ವ್ಯಕ್ತಿಯಾಗಿದ್ದಲ್ಲಿ ಆತನು ಅಥವಾ ಆಕೆಯು,-

(i) ಮರಣ ಹೊಂದಿದಾಗ;

(ii) ರಾಜೀನಾಮೆ ನೀಡಿದಾಗ;

(iii) ಸಹಕಾರ ಸಂಘದ ಉಪವಿಧಿಗಳಿಗೆ ಅನುಸಾರವಾಗಿ ವಜಾಗೊಂಡಾಗ ಅಥವಾ ಉಚ್ಚಾಟನೆಗೊಂಡಾಗ; ಅಥವಾ

(iv) ಸಹಕಾರ ಸಂಘದಲ್ಲಿಯ ಆತನಾಕೆಯ ಇಡೀ ಷೇರು ಅಥವಾ ಬಡ್ಡಿಯು ಇತರ ಸದಸ್ಯನಿಗೆ ವರ್ಗಾವಣೆಯಾದಾಗ;

(ಬಿ) ಫರ್ಮ್, ಕಂಪನಿ, ಸಹಕಾರ ಸಂಘ ಅಥವಾ ನಿಗಮಿತ ನಿಕಾಯವಾಗಿದ್ದಲ್ಲಿ,-

(i) ಫರ್ಮ್ ಅಥವಾ ನಿಗಮಿತ ನಿಕಾಯವು ವಿಸರ್ಜನೆಗೊಂಡಾಗ

(ii) ಒಂದು ಕಂಪನಿ ಅಥವಾ ಒಂದು ಸಹಕಾರ ಸಂಘವು ಪರಿಸಮಾಪನೆಗೊಂಡಾಗ

- ಸಮಾಪ್ತಿಯಾಗತಕ್ಕುದು.][2]

**19. ಬಾಕಿ ಸಂದಾಯ ಮಾಡುವವರೆಗೆ ಸದಸ್ಯನು ಹಕ್ಕುಗಳನ್ನು ಚಲಾಯಿಸತಕ್ಕುದಲ್ಲ:–** [1][16ನೆಯ ಪ್ರಕರಣದ(8)ನೆಯ ಉಪಪ್ರಕರಣದಲ್ಲಿ ಅನ್ಯಥಾ ಹೇಳಿರುವುದನ್ನುಳಿದು ಸಹಕಾರ ಸಂಘದ ಯಾರೇ ಸದಸ್ಯನು][1] ಉಪವಿಧಿಗಳಲ್ಲಿ ಸದಸ್ಯತ್ವಕ್ಕೆ ಸಂಬಂಧಿಸಿದಂತೆ ನಿರ್ದಿಷ್ಟಪಡಿಸಬಹುದಾದಂಥ ಸಂದಾಯವನ್ನು ಸಂಘಕ್ಕೆ ಮಾಡಿದ ಹೊರತು ಅಥವಾ ಅಂಥ ಹಿತಾಸಕ್ತಿಯನ್ನು ಸಂಘದಲ್ಲಿ ಪಡೆದ ಹೊರತು ಸದಸ್ಯನ ಹಕ್ಕುಗಳನ್ನು ಚಲಾಯಿಸತಕ್ಕುದಲ್ಲ.;

[3][**20. ಸದಸ್ಯರ ಮತಗಳು:–** (1) ಸಹಕಾರ ಸಂಘದ ಯಾರೇ ಸದಸ್ಯನು ಸಂಘದ ವ್ಯವಹಾರಗಳಲ್ಲಿ ಒಂದಕ್ಕಿಂತ ಹೆಚ್ಚು ಮತವನ್ನು ಹೊಂದಿರತಕ್ಕುದಲ್ಲ:

[4][ಪರಂತು, ರಾಜ್ಯಸರ್ಕಾರವು ಸಹಕಾರ ಸಂಘದ ಸದಸ್ಯನಾಗಿರುವಲ್ಲಿ, ರಾಜ್ಯ ಸರ್ಕಾರವು ಅಂಥ ಸಹಕಾರ ಸಂಘದ ಸಮಿತಿಗೆ ನಾಮನಿರ್ದೇಶಿತನಾದ ಅಥವಾ ನಾಮನಿರ್ದೇಶಿತನೆಂದು ಭಾವಿಸಲಾದ ಪ್ರತಿಯೊಬ್ಬ ವ್ಯಕ್ತಿಯು ಒಂದು ಮತವನ್ನು ಹೊಂದಿರತಕ್ಕುದು.][4]

(2) ಈ ಕೆಳಕಂಡ ವ್ಯಕ್ತಿಗಳು, ತಾವು ಸದಸ್ಯರಾಗಿರುವ ಸಹಕಾರ ಸಂಘದ ಸಭೆಯಲ್ಲಿ ಮತಚಲಾಯಿಸಲು ಹಕ್ಕನ್ನು ಹೊಂದಿರತಕ್ಕುದಲ್ಲ, ಎಂದರೆ:-

[5][(ಎ) ನಾಮ ಮಾತ್ರ ಸದಸ್ಯ ಅಥವಾ ಸಹವರ್ತಿ ಸದಸ್ಯ;

(ಎ-i) ಬಾಕಿದಾರನಾದ ಒಬ್ಬ ಸದಸ್ಯ;

(ಎ-ii) [1][16ನೇ ಪ್ರಕರಣದ (1)ನೇ ಉಪಪ್ರಕರಣದ (ಡಿ), (ಇ), (ಎಫ್), ಮತ್ತು (ಜಿ) ಖಂಡಗಳ ][1] ಮೇರೆಗೆ ಸೇರಿಸಿಕೊಂಡ ಬಾಕಿದಾರರಾಗಿರುವ ಸದಸ್ಯರು;][5]

[6][(ಎ-iii) ಅಂಥ ಸಭೆಯ ದಿನಾಂಕಕ್ಕೆ ಮುಂಚಿತವಾಗಿ [7][ಹನ್ನೆರಡು ತಿಂಗಳ][7] ಒಳಗೆ ಸಂಘದ ಸದಸ್ಯನಾದ [8][ಒಬ್ಬ ವ್ಯಕ್ತಿ][8];

ಪರಂತು, ಈ ಖಂಡದಲ್ಲಿರುವುದು ಯಾವುದೂ, ಅದರ ನೋಂದಣಿಯಾದ ತರುವಾಯ ತಕ್ಷಣವೇ ನಡೆದ ಅಂಥ ಸಂಘದ ಮೊದಲ ಸರ್ವಸದಸ್ಯರ ಸಭೆಯಲ್ಲಿ ಭಾಗವಹಿಸುವ ಸಂಘದ [8][ಸದಸ್ಯನಿಗೆ][8] ಅನ್ವಯವಾಗತಕ್ಕುದಲ್ಲ.][6]

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಸೇರಿಸಲಾಗಿದೆ.
3. 1976ರ ಅಧಿನಿಯಮ ಸಂಖ್ಯೆ 71ರ ಮೂಲಕ 3.11.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1979ರ ಅಧಿನಿಯಮ ಸಂಖ್ಯೆ 16ರ ಮೂಲಕ 18.12.1978 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
5. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
7. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಪ್ರತಿಯೋಜಿಸಲಾಗಿದೆ.
8. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಪ್ರತಿಯೋಜಿಸಲಾಗಿದೆ.

(ಬಿ) (i) ಯಾವ ಸಹಕಾರ ಸಂಘದ ಸಮಿತಿಯು ರದ್ದಾಗಿದೆಯೋ ಅಥವಾ ಯಾವುದಕ್ಕೆ ಈ ಅಧಿನಿಯಮದ [1][31ನೇ][1] ಪ್ರಕರಣದ ಮೇರೆಗೆ ವಿಶೇಷ ಅಧಿಕಾರಿಯನ್ನು ನೇಮಿಸಲಾಗಿದೆಯೋ;

(ii) ಯಾವ ಸಹಕಾರ ಸಂಘವು 12ನೇ ಪ್ರಕರಣದ ಮೇರೆಗೆ [1][ವಿಘಟಿತವಾಗಬೇಕೆಂದು ಆದೇಶಿಸಲಾಗಿದೆಯೋ][1];

(iii) ಯಾವ ಸಹಕಾರ ಸಂಘವು ತನ್ನ ಕಾರ್ಯವನ್ನು ಪ್ರಾರಂಭಿಸಿಲ್ಲವೋ ಅಥವಾ ತನ್ನ ಕಾರ್ಯವನ್ನು ನಿಲ್ಲಿಸಿದೆಯೋ;

[1][(iv) ಯಾವ ಸಹಕಾರ ಸಂಘದ ಮೂಲ ಉದ್ದೇಶವು ಸಾಲವನ್ನು ನೀಡುವುದಾಗಿದೆಯೋ ಮತ್ತು ಸಭೆ ನಡೆದ ಸಹಕಾರ ವರ್ಷದ ನಿಕಟಪೂರ್ವ ಸಹಕಾರ ವರ್ಷದ ವಸೂಲಿಯು, ಒಟ್ಟು ತಗಾದೆಯ ಶೇಕಡಾ ಎಪ್ಪತ್ತೈದಕ್ಕಿಂತ ಕಡಿಮೆ ಆಗಿರುವುದೋ ಮತ್ತು ಸಂದರ್ಭಾನುಸಾರ ತಾನು ಋಣಿಯಾಗಿರುವ ಹಣಕಾಸು ಬ್ಯಾಂಕಿಗೆ ಅಥವಾ ಸಾಲ ನೀಡುವ ಏಜೆನ್ಸಿಗೆ:-

(ಎ) ಸಂಘದ ತಗಾದೆಯು ಹಣಕಾಸು ಬ್ಯಾಂಕಿನ ಅಥವಾ ಸಾಲ ನೀಡಿಕೆ ಏಜೆನ್ಸಿಯ ತಗಾದೆಗಿಂತ ಕಡಿಮೆಯಾಗಿದ್ದರೆ, ಸಂಘದ ತಗಾದೆಯ ಶೇ.75 ರಷ್ಟನ್ನು, ಅಥವಾ

(ಬಿ) ಸಂಘದ ತಗಾದೆಯು ಹಣಕಾಸು ಬ್ಯಾಂಕಿನ ಅಥವಾ ಸಾಲ ನೀಡಿಕೆ ಏಜೆನ್ಸಿಯ ತಗಾದೆಗಿಂತ ಹೆಚ್ಚಾಗಿದ್ದರೆ, ಹಣಕಾಸು ಬ್ಯಾಂಕಿನ ಅಥವಾ ಸಾಲನೀಡಿಕೆ ಏಜೆನ್ಸಿಯ ವಾಸ್ತವಿಕ ತಗಾದೆಯಷ್ಟನ್ನು, ಸದರಿ ಸಹಕಾರ ವರ್ಷ ಮುಗಿದ ಹದಿನೈದು ದಿನಗಳಿಗಿಂತ ತಡವಾಗದಂತೆ ವರ್ಗಾವಣೆ ಮಾಡಲು ವಿಫಲವಾಗಿದೆಯೋ.][1]

[2][(v) ivನೇ ಉಪಖಂಡದಲ್ಲಿ ಉಲ್ಲೇಖಿಸಿದ ಸಂಘವಲ್ಲದ ಇತರ ಬಾಕಿದಾರ ಸಂಘವಾಗಿದೆಯೋ

- ಆ ಯಾವುದೇ ಸಹಕಾರ ಸಂಘ.][2]

[3][(ಸಿ) xxx][3]

**ವಿವರಣೆ:-** ಸಂಘದ ಸದಸ್ಯನನ್ನು [4][ಸಾಲಗಾರನಾಗಿ][4] ಅವನು, ಅವನಿಗೆ ಹದಿನೈದು ದಿನಗಳಿಗೆ ಕಡಿಮೆಯಿಲ್ಲದ ಸಭೆಗೆ ಸಂಬಂಧಿಸಿದ ನೋಟೀಸನ್ನು ಕೊಟ್ಟ ತರುವಾಯ ಅಂಥ ಸಭೆಯ ದಿನಾಂಕಕ್ಕೆ ಕನಿಷ್ಠ [4][ಹದಿನೈದು ದಿನಗಳಿಗೆ][4] ಮುಂಚೆ [2][ಸಂಘಕ್ಕೆ ತನ್ನಿಂದ ಬಾಕಿಯಿರುವ ಯಾವುದೇ ಬಗೆಯ ಬಾಕಿಗಳನ್ನು ಸಂದಾಯ ಮಾಡಲು ತಪ್ಪಿದರೆ][2] ಆ ಬಾಕಿದಾರನೆಂದು ಭಾವಿಸತಕ್ಕುದು.][3]

[2][(3) ಸಂಬಂಧಪಟ್ಟ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಸದಸ್ಯ ಆಗಿರುವ, ಆದರೆ ತನ್ನ ಸದಸ್ಯರಿಗೆ ಹಣಕಾಸು ನೆರವು ನೀಡಲು ಇತರ ಹಣಕಾಸು ಏಜೆನ್ಸಿಗಳಿಂದ ಸಾಲ ಎತ್ತಲು ರಿಜಿಸ್ಟ್ರಾರನು ಅನುಮತಿ ನೀಡಿರುವ ಕೃಷಿ ಸಾಲ ನೀಡಿಕೆ ಸಂಘವು, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಸಭೆಯಲ್ಲಿ ಮತ ನೀಡುವ ಹಕ್ಕನ್ನು ಹೊಂದಿರತಕ್ಕುದಲ್ಲ.][2]

**21. ಮತ ಚಲಾಯಿಸುವ ರೀತಿ:-** [5][(1) ಪ್ರತಿಯೊಬ್ಬ ಸದಸ್ಯನು, ಪ್ರತಿಯೊಬ್ಬ ಪ್ರತಿನಿಧಿ ಮತ್ತು ಪ್ರತಿಯೊಬ್ಬ ನಾಮನಿರ್ದೇಶಿತನು ತನ್ನ ಮತವನ್ನು ಖುದ್ದಾಗಿ ಚಲಾಯಿಸತಕ್ಕುದು, ಆದರೆ ಪರೋಕ್ಷವಾಗಿ ಅಲ್ಲ.][5]

2. (1)ನೆಯ ಉಪಪ್ರಕರಣದಲ್ಲಿ ಏನೇ ಇದ್ದರೂ,-

[6][(ಎ) ಬೇರೊಂದು ಸಹಕಾರ ಸಂಘದ ಸದಸ್ಯ ಸಂಸ್ಥೆಯಾಗಿರುವ ಒಂದು ಸಹಕಾರ ಸಂಘದ ಸಮಿತಿಯು, ಆ ಬೇರೊಂದು ಸಂಘದ ಕಾರ್ಯಕಲಾಪಗಳಲ್ಲಿ ತನ್ನ ಪರವಾಗಿ ಮತ ಚಲಾಯಿಸಲು ಸಮಿತಿಯ ಸದಸ್ಯರೊಬ್ಬರನ್ನು ನೇಮಿಸಬಹುದು;][6]

[1][(ಬಿ) ಭಾರತೀಯ ಜೀವ ವಿಮಾ ನಿಗಮವು, ರಾಜ್ಯ ಉಗ್ರಾಣ ನಿಗಮವು ಅಥವಾ ರಾಜ್ಯ ಸರ್ಕಾರ ಅನುಮೋದಿಸಿದ ಅಂಥ ಇತರ ಸಂಸ್ಥೆಗಳು ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ರಚಿಸಲಾದ ಮಾರುಕಟ್ಟೆ ಸಮಿತಿಯು ಅಥವಾ ಸ್ಥಳೀಯ ಪ್ರಾಧಿಕಾರವು ಅಥವಾ ಒಂದು ಫರ್ಮು, ಕಂಪನಿಯು ಅಥವಾ ಯಾವುದೇ ಇತರ ನಿಗಮಿತ ನಿಕಾಯವು, ಸಹಕಾರ ಸಂಘದ ಸದಸ್ಯ ಆಗಿದ್ದರೆ, ಅಂಥ ಸಂಸ್ಥೆಯು ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ರಚಿಸಲಾದ ಮಾರುಕಟ್ಟೆ ಸಮಿತಿಯು ಅಥವಾ ಸ್ಥಳೀಯ ಪ್ರಾಧಿಕಾರವು ಅಥವಾ ಫರ್ಮು, ಕಂಪನಿಯು ಅಥವಾ ಯಾವುದೇ ಇತರ ನಿಗಮಿತ ನಿಕಾಯವು ನಾಮನಿರ್ದೇಶನ ಮಾಡಿದ ವ್ಯಕ್ತಿಯು ಸಂಘದ ಕಾರ್ಯಕಲಾಪಗಳಲ್ಲಿ ಅದರ ಪರವಾಗಿ ಮತ ಚಲಾಯಿಸಬಹುದು.][1]

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
4. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ 20.1.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಪ್ರತಿಯೋಜಿಸಲಾಗಿದೆ.

[1][(3) ಯಾವುದೇ ಇತರ ಸಹಕಾರಿ ಸಂಘದ ಯಾವುದೇ ಸಭೆಯಲ್ಲಿ ಸಹಕಾರ ಸಂಘದ ಪರವಾಗಿ ಮತ ಚಲಾಯಿಸಲು (2)ನೇ ಉಪಪ್ರಕರಣದ (ಎ) ಖಂಡದ ಮೇರೆಗೆ ಸಹಕಾರಿ ಸಂಘದ ಸಮಿತಿಯಿಂದ ಒಮ್ಮೆ ನಾಮನಿರ್ದೇಶಿತನಾದ ಒಬ್ಬ ಸದಸ್ಯನನ್ನು, ಸರ್ವಸದಸ್ಯರ ಸಭೆಯಲ್ಲಿ ಹಾಜರಿರುವ ಮತ್ತು ಮತ ಚಲಾಯಿಸುವ ಸದಸ್ಯರ ಬಹುಮತದಿಂದ ಅಂಗೀಕರಿಸಿದ ಠರಾವಿನ ಹೊರತು, ಬದಲಾಯಿಸತಕ್ಕುದಲ್ಲ.][1]

[2][**22.** xxx][2]

**23. ಷೇರುಗಳ ಅಥವಾ ಹಿತಾಸಕ್ತಿಗಳ ವರ್ಗಾವಣೆಗಳ ಮೇಲೆ ನಿರ್ಬಂಧಗಳು:-** [2][ (1) xxx][2]

(2) ಸದಸ್ಯನು ಸಹಕಾರ ಸಂಘದಲ್ಲಿರುವ ತನ್ನ ಷೇರಿನ ಅಥವಾ ಹಿತಾಸಕ್ತಿಯ ಬಗ್ಗೆ ಮಾಡಿದ ವರ್ಗಾವಣೆಯು,-

(ಎ) ಅಂಥ ಷೇರು ಅಥವಾ ಹಿತಾಸಕ್ತಿಯನ್ನು ಆ ಸದಸ್ಯನು ಒಂದು ವರ್ಷಕ್ಕಿಂತ ಕಡಿಮೆಯಿಲ್ಲದಂತೆ ಧಾರಣಮಾಡಿದ ಹೊರತು;

(ಬಿ) ಆ ವರ್ಗಾವಣೆಯನ್ನು ಸಂಘದ ಸದಸ್ಯನಿಗೆ ಮಾಡಿದ್ದ ಹೊರತು; ಮತ್ತು

(ಸಿ) ವರ್ಗಾವಣೆಯನ್ನು ಸಂಘದ ಸಮಿತಿಯು ಅನುಮೋದಿಸಿದ ಹೊರತು

- ಕಾನೂನುಸಮ್ಮತ್ರವಾಗಿರತಕ್ಕುದಲ್ಲ.

[3][**23ಎ. ಷೇರು ಮೌಲ್ಯದ ಮರುಪಾವತಿ:-** (1) ಕೃಷಿ ಸಾಲ ನೀಡಿಕೆಯೇ ಪ್ರಧಾನ ಉದ್ದೇಶವಾಗಿರುವ ಸಹಕಾರ ಸಂಘದ ಒಬ್ಬ ಸದಸ್ಯನು, ಅಂಥ ಸಂಘಕ್ಕೆ ಋಣಿಯಾಗಿರದಿದ್ದರೆ, ಆಗ ಅವನು ಹೊಂದಿರುವ ಷೇರುಗಳಲ್ಲಿ ಒಂದನ್ನು ಬಿಟ್ಟು ಎಲ್ಲಾ ಷೇರುಗಳ ಮೌಲ್ಯವನ್ನು, ಅವನು ಅರ್ಜಿ ಸಲ್ಲಿಸಿದಲ್ಲಿ ಅವನಿಗೆ ಮರು ಪಾವತಿ ಮಾಡತಕ್ಕುದು.

(2) ಸಹಕಾರ ಸಂಘಕ್ಕೆ ಅಂಥ ಸದಸ್ಯನಿಂದ ಬಾಕಿ ಇರುವ ಋಣದ ಮೊಬಲಗು, ಅವನು ಅಂಥ ಸಂಘದಲ್ಲಿ ಹೊಂದಿರುವ ಷೇರುಗಳಲ್ಲಿ ಒಂದನ್ನು ಬಿಟ್ಟು ಎಲ್ಲಾ ಷೇರುಗಳ ಮೌಲ್ಯಕ್ಕೆ ಸಮನಾಗಿದ್ದರೆ ಅಥವಾ ಅದಕ್ಕೆ ಕಡಿಮೆಯಾಗಿದ್ದರೆ, ಆಗ ಆ ಸದಸ್ಯನು ಅರ್ಜಿಯನ್ನು ಸಲ್ಲಿಸಿದ ತರುವಾಯ ಋಣದ ಮೊಬಲಗನ್ನು ತೀರಿಸಲು ಅಗತ್ಯವಾದಷ್ಟು ಸಂಖ್ಯೆಯ ಷೇರುಗಳ ಮೌಲ್ಯವನ್ನು ಅಂಥ ಋಣದ ಪೂರ್ಣ ತೀರಿಕೆಯಾಗಿ ಹೊಂದಾಣಿಕೆ ಮಾಡಿಕೊಳ್ಳತಕ್ಕುದು ಮತ್ತು ಒಂದನ್ನು ಬಿಟ್ಟು ಉಳಿದವುಗಳ ಮೌಲ್ಯವನ್ನು ಅವನಿಗೆ ಮರು ಪಾವತಿ ಮಾಡತಕ್ಕುದು. ಆ ತರುವಾಯ ಅದಕ್ಕೆ ಸಂಬಂಧಿಸಿದ ಷೇರು ಪ್ರಮಾಣ ಪತ್ರಗಳನ್ನು ರದ್ದುಗೊಳಿಸತಕ್ಕುದು.][3]

**24. ಸದಸ್ಯನ ಮರಣಾನಂತರ ಹಿತಾಸಕ್ತಿಯ ವರ್ಗಾವಣೆ:-** (1) ಸಹಕಾರ ಸಂಘದ ಸದಸ್ಯನ ಮರಣಾನಂತರ, ಸಹಕಾರ ಸಂಘವು ಮರಣ ಹೊಂದಿದ ಸದಸ್ಯನ ಷೇರು ಅಥವಾ ಹಿತಾಸಕ್ತಿಯನ್ನು -

(ಎ) ನಿಯಮಗಳಿಗನುಸಾರವಾಗಿ, ನಾಮನಿರ್ದೇಶಿತ ವ್ಯಕ್ತಿ ಅಥವಾ ವ್ಯಕ್ತಿಗಳಿಗೆ ಆ ನಿಮನಿರ್ದೇಶನವು ಜಾರಿಯಲ್ಲಿದ್ದರೆ, ವರ್ಗಾಯಿಸತಕ್ಕುದು; ಅಥವಾ

(ಬಿ) ಯಾರೇ ವ್ಯಕ್ತಿಯನ್ನು ನಾಮನಿರ್ದೇಶನ ಮಾಡಿರದಿದ್ದರೆ ಅಥವಾ ನಾಮನಿರ್ದೇಶನವು ಜಾರಿಯಲ್ಲಿರದಿದ್ದರೆ;

(i) ಮೃತ ಸದಸ್ಯನ ಷೇರು ಅಥವಾ ಹಿತಾಸಕ್ತಿಯು [4][ಒಂದು ಲಕ್ಷ ರೂಪಾಯಿ][4] ಮೀರದಿರುವಲ್ಲಿ ಮೃತ ಸದಸ್ಯನ ವಾರಸುದಾರರು ಅಥವಾ ಕಾನೂನು ಸಮ್ಮತ ಪ್ರತಿನಿಧಿಗಳೆಂದು ಸಮಿತಿಗೆ ಕಂಡುಬರಬಹುದಾದ ವ್ಯಕ್ತಿಗಳಿಗೆ ಅಂಥ ವ್ಯಕ್ತಿಗಳು ನಷ್ಟ ಭರ್ತಿ ಬಂಧಪತ್ರವನ್ನು ಸಮಿತಿಯು ಅಗತ್ಯಪಡಿಸಬಹುದಾದ ಜಾಮೀನುಗಳೊಂದಿಗೆ ಬರೆದುಕೊಟ್ಟ ಮೇಲೆ;

(ii) ಮೃತ ಸದಸ್ಯನ ಷೇರು ಅಥವಾ ಹಿತಾಸಕ್ತಿಯು [4][ಒಂದು ಲಕ್ಷ ರೂಪಾಯಿ][4] ಮೀರಿರುವಲ್ಲಿ, ಸಕ್ಷಮ ನ್ಯಾಯಾಲಯವು ನೀಡಿದ ಉತ್ತರಾಧಿಕಾರ ಪ್ರಮಾಣ ಪತ್ರವನ್ನು ಅಥವಾ ಇತರ ಕಾನೂನು ಸಮ್ಮತ ಅಧಿಕಾರ ಪತ್ರವನ್ನು ಹಾಜರುಪಡಿಸುವ ವ್ಯಕ್ತಿಗೆ ಅಥವಾ ವ್ಯಕ್ತಿಗಳಿಗೆ

- ವರ್ಗಾಯಿಸತಕ್ಕುದು:

ಪರಂತು, ಸಂದರ್ಭಾನುಸಾರ ಅಂಥ ನಾಮನಿರ್ದೇಶಿತವನ್ನು, ವಾರಸುದಾರನನ್ನು ಅಥವಾ ಕಾನೂನು ಸಮ್ಮತ ಪ್ರತಿನಿಧಿಯನ್ನು ಸಹಕಾರ ಸಂಘದ ಸದಸ್ಯನನ್ನಾಗಿ ಸೇರಿಸಿಕೊಂಡಿರಬೇಕು:

ಮತ್ತೂ ಪರಂತು, ಈ ಉಪಪ್ರಕರಣದಲ್ಲಿರುವುದು ಯಾವುದೂ, ಸಹಕಾರ ಸಂಘದಲ್ಲಿ ಮೃತ ಸದಸ್ಯನು ಹೊಂದಿದ್ದ ಷೇರು ಅಥವಾ ಹಿತಾಸಕ್ತಿಯನ್ನು ವಾರಸಿನ ಮೂಲಕ ಅಥವಾ ಅನ್ಯಥಾ ಪಡೆಯಲು ಅಪ್ರಾಪ್ತ ವಯಸ್ಕನನ್ನು ಅಥವಾ ಅಸ್ವಸ್ಥಚಿತ್ತನಾಗಿರುವ ವ್ಯಕ್ತಿಯನ್ನು ಪ್ರತಿಬಂಧಿಸತಕ್ಕುದಲ್ಲ.

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
3. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) (1)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ, ಸಂದರ್ಭಾನುಸಾರ, ಅಂಥ ಯಾರೇ ನಾಮನಿರ್ದೇಶಿತನು, ವಾರಸುದಾರನು ಅಥವಾ ಕಾನೂನು ಸಮ್ಮತ ಪ್ರತಿನಿಧಿಯು, ನಿಯಮಗಳಿಗನುಸಾರವಾಗಿ ನಿಶ್ಚಿತಪಡಿಸಲಾದ ಮೃತ ಸದಸ್ಯನ ಷೇರು ಅಥವಾ ಹಿತಾಸಕ್ತಿಯ ಮೌಲ್ಯವನ್ನು ತನಗೆ ಸಂದಾಯ ಮಾಡುವಂತೆ ಆ ಸಂಘವನ್ನು ಅಗತ್ಯಪಡಿಸಬಹುದು.

(3) ಸಹಕಾರ ಸಂಘವು, ಮೃತ ಸದಸ್ಯನಿಗೆ ಸಂಘದಿಂದ ಸಲ್ಲಬೇಕಾಗಿದ್ದ ಇತರ ಎಲ್ಲ ಹಣಗಳನ್ನು, ಸಂದರ್ಭಾನುಸಾರ, ಅಂಥ ನಾಮನಿರ್ದೇಶಿತನಿಗೆ, ವಾರಸುದಾರನಿಗೆ ಅಥವಾ ಕಾನೂನು ಸಮ್ಮತ ಪ್ರತಿನಿಧಿಗೆ ಸಂದಾಯ ಮಾಡಬಹುದು.

(4) ಸಹಕಾರ ಸಂಘದಿಂದ ಈ ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ಮಾಡಲಾದ ಎಲ್ಲ ವರ್ಗಾವಣೆಗಳು ಮತ್ತು ಸಂದಾಯಗಳು, ಇತರ ಯಾರೇ ವ್ಯಕ್ತಿಯಿಂದ ಸಂಘದ ಮೇಲೆ ಮಾಡಲಾದ ಯಾವುದೇ ತಗಾದೆಯ ವಿರುದ್ಧವಾಗಿ ಕಾನೂನು ಮಾನ್ಯವಾಗಿರತಕ್ಕುದು ಮತ್ತು ಪರಿಣಾಮಕಾರಿಯಾಗಿರತಕ್ಕುದು.

**25. ಹಿಂದಿನ ಸದಸ್ಯನ ಹೊಣೆ ಮತ್ತು ಮೃತ ಸದಸ್ಯನ ಆಸ್ತಿಪಾಸ್ತಿ:-** (1) (2)ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು-

(ಎ) ಹಿಂದಿನ ಸದಸ್ಯನ ಸಂದರ್ಭದಲ್ಲಿ, ಅವನ ಸದಸ್ಯತ್ವವು ಕೊನೆಗೊಂಡ ದಿನಾಂಕದಂದು; ಮತ್ತು

(ಬಿ) ಮೃತ ಸದಸ್ಯನ ಸಂದರ್ಭದಲ್ಲಿ, ಅವನ ಮರಣದ ದಿನಾಂಕದಂದು

- ಇದ್ದಂಥ ಸಹಕಾರ ಸಂಘದ ಋಣಗಳ ಬಗ್ಗೆ ಹಿಂದಿನ ಸದಸ್ಯನ ಹೊಣೆ ಅಥವಾ ಮೃತ ಸದಸ್ಯನ ಆಸ್ತಿಪಾಸ್ತಿಯ ಹೊಣೆಯು ಅಂಥ ದಿನಾಂಕದಿಂದ ಎರಡು ವರ್ಷಗಳ ಅವಧಿಯವರೆಗೆ ಮುಂದುವರಿಯತಕ್ಕುದು.

(2) 72ನೇ ಪ್ರಕರಣದ ಮೇರೆಗೆ ಸಹಕಾರ ಸಂಘದ ಸಮಾಪನ ಮಾಡಲು ಆದೇಶವಾಗಿರುವಲ್ಲಿ, ಸಮಾಪನದ ಆದೇಶದ ದಿನಾಂಕಕ್ಕೆ ನಿಕಟಪೂರ್ವದ ಎರಡು ವರ್ಷಗಳ ಒಳಗೆ ಸದಸ್ಯತ್ವವು ಮುಕ್ತಾಯವಾದಂಥ ಹಿಂದಿನ ಸದಸ್ಯನ ಅಥವಾ ಮೃತ ಸದಸ್ಯನ ಆಸ್ತಿಪಾಸ್ತಿಯ ಹೊಣೆಯು, ಸಂಘದ ಸಮಾಪನದ ಎಲ್ಲ ವ್ಯವಹರಣೆಗಳು ಪೂರ್ಣಗೊಳ್ಳುವವರೆಗೆ ಮುಂದುವರಿಯತಕ್ಕುದು, ಆದರೆ ಅಂಥ ಹೊಣೆಯು, ಸಂದರ್ಭಾನುಸಾರ, ಸದಸ್ಯತ್ವವು ಕೊನೆಗೊಂಡ ಅಥವಾ ಮರಣದ ದಿನಾಂಕದಂದು ಇದ್ದ ಸಂಘದ ಋಣಗಳಿಗೆ ಮಾತ್ರ ವ್ಯಾಪ್ತವಾಗತಕ್ಕುದು.

## ಅಧ್ಯಾಯ-IV

## ಸಹಕಾರ ಸಂಘಗಳ ವ್ಯವಸ್ಥಾಪನೆ

[1][**26. ಸಹಕಾರ ಸಂಘದಲ್ಲಿ ಅಂತಿಮ ಅಧಿಕಾರ:-** ಈ ಅಧಿನಿಯಮ, ನಿಯಮಗಳು ಮತ್ತು ಉಪವಿಧಿಗಳ ಉಪಬಂಧಗಳಿಗೆ ಒಳಪಟ್ಟು, ಸಹಕಾರ ಸಂಘದ ಅಂತಿಮ ಅಧಿಕಾರವು ಸರ್ವ ಸದಸ್ಯರಲ್ಲಿ ನಿಹಿತವಾಗಿರತಕ್ಕುದು:

ಪರಂತು, ಈ ಉಪಪ್ರಕರಣದಲ್ಲಿ ಇರುವುದು ಯಾವುದೂ, ಈ ಅಧಿನಿಯಮ ಅಥವಾ ನಿಯಮಗಳು ಅಥವಾ ಉಪವಿಧಿಗಳಿಂದ ಯಾವೊಂದು ಸಮಿತಿಗೆ, ಅಥವಾ ಯಾವೊಬ್ಬ [2][ಪದಾಧಿಕಾರಿಗೆ][2] ಪ್ರದತ್ತವಾದ ಯಾವುದೇ ಅಧಿಕಾರವನ್ನು, ಅಂಥ ಸಮಿತಿಯು ಅಥವಾ ನೋಂದಾಯಿತ ಸಹಕಾರ ಸಂಘದ ಯಾರೇ [2][ಪದಾಧಿಕಾರಿಯು][2] ಚಲಾಯಿಸುವುದಕ್ಕೆ ಬಾಧಕವಾಗತಕ್ಕುದಲ್ಲ.

(2) (1)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ -

(ಎ) ಒಂದು ಸಹಕಾರ ಸಂಘದ ಕಾರ್ಯ ಕ್ಷೇತ್ರವು ನಿಯಮಿಸಬಹುದಾದ ಕ್ಷೇತ್ರಕ್ಕಿಂತ ಕಡಿಮೆಯಾಗಿಲ್ಲದಿರುವಲ್ಲಿ; ಅಥವಾ

(ಬಿ) ಸಹಕಾರ ಸಂಘವು ನಿಯಮಿಸಬಹುದಾದ ಸಂಖ್ಯೆಗಿಂತ ಕಡಿಮೆಯಿಲ್ಲದ ಸಂಖ್ಯೆಯ ಸದಸ್ಯರನ್ನು ಹೊಂದಿರುವಲ್ಲಿ

- ರಿಜಿಸ್ಟ್ರಾರನು, ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಸರ್ವಸದಸ್ಯರ ಎಲ್ಲಾ ಅಧಿಕಾರಗಳನ್ನು ಅಥವಾ ಅವುಗಳ ಪೈಕಿ ಯಾವುದನ್ನಾದರೂ ಚಲಾಯಿಸಲು ನಿಯಮಗಳಿಗನುಸಾರವಾಗಿ ನಿಯಮಿಸಬಹುದಾದಂತೆ ಆಯ್ಕೆ ಮಾಡಲಾದ ಸಹಕಾರ ಸಂಘದ ಅಷ್ಟು ಸದಸ್ಯರನ್ನೊಳಗೊಂಡ (ಇಲ್ಲಿ ಇನ್ನು ಮುಂದೆ ಪ್ರಾತಿನಿಧಿಕ ಸರ್ವಸದಸ್ಯರ ನಿಕಾಯ ಎಂದು ಕರೆಯಲಾಗುವ) ಒಂದು ಚಿಕ್ಕ ನಿಕಾಯವನ್ನು ರಚಿಸಲು ಉಪಬಂಧಿಸಿ, ಸಹಕಾರ ಸಂಘದ ಉಪವಿಧಿಗಳನ್ನು ತಿದ್ದುಪಡಿ ಮಾಡಬಹುದು ಮತ್ತು ಈ ಅಧಿನಿಯಮದಲ್ಲಿ ಸರ್ವಸದಸ್ಯರ ನಿಕಾಯ ಅಥವಾ ಅದರ ಸಭೆಯನ್ನು ಯಾವುದೇ ರೂಪದಲ್ಲಿ ಅಥವಾ ಪದಗಳಲ್ಲಿ ಮಾಡಲಾದ ಯಾವುದೇ ಉಲ್ಲೇಖವು, ಅಂಥ ಉಲ್ಲೇಖವು, ಸಂದರ್ಭಾನುಸಾರ, ಪ್ರಾತಿನಿಧಿಕ ಸರ್ವಸದಸ್ಯರ ನಿಕಾಯ ಅಥವಾ ಅದರ ಸಭೆಗೆ ಮಾಡಿದ ಉಲ್ಲೇಖವಾಗಿದ್ದರೆ ಹೇಗೋ ಹಾಗೆ ಜಾರಿಯಾಗತಕ್ಕುದು.

(3) ರಿಜಿಸ್ಟ್ರಾರನು (2)ನೇ ಉಪಪ್ರಕರಣದ ಮೇರೆಗೆ ಉಪವಿಧಿಗಳಿಗೆ ಮಾಡಿದ ತಿದ್ದುಪಡಿಗಳನ್ನು 12ನೇ ಪ್ರಕರಣದ ಮೇರೆಗೆ ನೋಂದಾಯಿಸಲಾಗಿದೆ ಎಂದು ಭಾವಿಸತಕ್ಕುದು.

1. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ 20.1.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(4) ಪ್ರಾತಿನಿಧಿಕ ಸರ್ವಸದಸ್ಯರ ನಿಕಾಯವು ಯಾವುದೇ ಅಧಿಕಾರವನ್ನು ಚಲಾಯಿಸುವುದು, ನಿಯಮಗಳು ಅಥವಾ ಉಪವಿಧಿಗಳು ನಿಯಮಿಸಬಹುದಾದಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೆ ಒಳಪಟ್ಟಿರತಕ್ಕುದು.][1]

[1][**26ಎ. ಸಹಕಾರ ಸಂಘಗಳ ಪಾಲುಗಾರಿಕೆ:-** (1) ಯಾವುದೇ ಎರಡು ಅಥವಾ ಅದಕ್ಕಿಂತ ಹೆಚ್ಚಿನ ಸಹಕಾರ ಸಂಘಗಳು ಅಂಥ ಪ್ರತಿಯೊಂದು ಸಹಕಾರ ಸಂಘದ ಮಹಾಸಭೆಯಲ್ಲಿ ಹಾಜರಿದ್ದು ಮತದಾನದ ತರುವಾಯ ಸದಸ್ಯರ ನಾಲ್ಕನೇ ಮೂರರಷ್ಟು ಸದಸ್ಯರ ಬಹುಮತದಿಂದ ಅಂಗೀಕರಿಸಲಾದ ನಿರ್ಣಯದ ಮೂಲಕ ಯಾವುದೇ ಒಂದು ಅಥವಾ ಅದಕ್ಕಿಂತ ಹೆಚ್ಚು ನಿರ್ದಿಷ್ಟ ವ್ಯವಹಾರಗಳನ್ನು ನಿರ್ವಹಿಸುವ ಸಲುವಾಗಿ ಪಾಲುಗಾರಿಕೆಯಲ್ಲಿ ಸೇರಿಕೊಳ್ಳಬಹುದು. [2][XXXX][2] ಮಹಾಸಭೆಯ ದಿನಾಂಕವನ್ನು ಸೂಚಿಸುವ ಬರಹದಲ್ಲಿರುವ ನೋಟೀಸನ್ನು ಅಂಥ ಸಭೆಯನ್ನು ಕರೆಯುವುದಕ್ಕೆ ಹತ್ತು ಪೂರ್ಣ ದಿನಗಳಿಗೆ ಮೊದಲು ಸದಸ್ಯನಿಗೆ ನೀಡತಕ್ಕುದು.

[3][ಪರಂತು, ನೆರವು ಪಡೆದ ಸಂಘವಾಗಿದ್ದಲ್ಲಿ ರಿಜಿಸ್ಟ್ರಾರ್ ರವರಿಂದ ಮತ್ತು ಸಹಕಾರಿ ಬ್ಯಾಂಕ್ ಆಗಿದ್ದಲ್ಲಿ ಭಾರತೀಯ ರಿಜರ್ವ್ ಬ್ಯಾಂಕ್‌ನಿಂದ ಮೊದಲೇ ಅನುಮೋದನೆಯನ್ನು ಪಡೆಯದೆ ಅಂಥ ಸಹೋದ್ಯಮದಲ್ಲಿ ಸೇರಿಕೊಳ್ಳತಕ್ಕದ್ದಲ್ಲ.][3]

(2) ಭಾರತೀಯ ಪಾಲುಗಾರಿಕೆ ಅಧಿನಿಯಮ, 1932ರಲ್ಲಿರುವುದು (1932ರ ಕೇಂದ್ರಾಧಿನಿಯಮ ಸಂಖ್ಯೆ 9) ಯಾವುದೂ ಅಂಥ ಪಾಲುಗಾರಿಕೆಗೆ ಅನ್ವಯವಾಗತಕ್ಕುದಲ್ಲ.

**26-ಬಿ. ಸಹಕಾರ ಸಂಘಗಳಿಂದ ಸಹೋದ್ಯಮ:-** (1) ಯಾವುದೇ ಸಹಕಾರ ಸಂಘ ಅಥವಾ ಸಹಕಾರ ಸಂಘಗಳು, ಕೈಗಾರಿಕಾ ಬಂಡವಾಳ ಹೂಡಿಕೆ, ಹಣಕಾಸು ನೆರವು ಅಥವಾ ಮಾರಾಟ ಮತ್ತು ಆಡಳಿತ ನಿರ್ವಹಣೆಯಲ್ಲಿ ಪ್ರಾವೀಣ್ಯತೆಯೂ ಸೇರಿದಂತೆ ಅಂಥ ಸಂಘ ಅಥವಾ ಸಂಘಗಳ ಉಪ-ವಿಧಿಗಳಲ್ಲಿ ಅವಕಾಶ ಕಲ್ಪಿಸಿರುವ ಯಾವುದೇ ಒಂದು ಅಥವಾ ಅದಕ್ಕಿಂತ ಹೆಚ್ಚಿನ ನಿರ್ದಿಷ್ಟಪಡಿಸಿರುವ ವ್ಯವಹಾರಗಳನ್ನು ನಿರ್ವಹಿಸಲು ಸರ್ಕಾರದ ಯಾವುದೇ ಉದ್ಯಮದೊಡನೆ ಅಥವಾ ರಾಜ್ಯ ಸರ್ಕಾರದಿಂದ ಅನುಮೋದನೆ ಪಡೆದ ಯಾವುದೇ ಇತರ ಉದ್ಯಮದೊಡನೆ ಸಹೋದ್ಯಮ ನಡೆಸಬಹುದು. [2][XXXX][2]

[3][ಪರಂತು, ನೆರವು ಪಡೆದ ಸಂಘವಾಗಿದ್ದಲ್ಲಿ ರಿಜಿಸ್ಟ್ರಾರ್ ರವರಿಂದ ಮತ್ತು ಒಂದು ಸಹಕಾರಿ ಬ್ಯಾಂಕ್ ಆಗಿದ್ದಲ್ಲಿ ಭಾರತೀಯ ರಿಜರ್ವ್ ಬ್ಯಾಂಕ್‌ನಿಂದ ಮೊದಲೇ ಅನುಮೋದನೆಯನ್ನು ಪಡೆಯದೆ ಅಂಥ ಸಹೋದ್ಯಮದಲ್ಲಿ ಸೇರಿಕೊಳ್ಳತಕ್ಕದ್ದಲ್ಲ.][2]3

(2) (1)ನೇ ಉಪ-ಪ್ರಕರಣದಡಿ ಸಹೋದ್ಯಮದ ಅಂಥ ಯೋಜನೆಗಳಿಗೆ ಅನುಮೋದನೆ ನೀಡುವುದಕ್ಕೆ ಮೊದಲು, ರಿಜಿಸ್ಟ್ರಾರರು [3][ಅಥವಾ ಸಂದರ್ಭಾನುಸಾರ ಭಾರತೀಯ ರಿಜರ್ವ್ ಬ್ಯಾಂಕ್][3] ಈ ಕೆಳಕಂಡ ವಿಷಯಗಳ ಬಗ್ಗೆ ಸೂಕ್ತ ಗಮನವನ್ನು ನೀಡತಕ್ಕುದು, ಎಂದರೆ:-

(ಎ) ಈ ಯೋಜನೆಯನ್ನು ಆರ್ಥಿಕವಾಗಿ ಸಮರ್ಥವಾಗಿ ನಡೆಸಿಕೊಂಡು ಹೋಗುವ ಕಾರ್ಯಸಾಧ್ಯತೆ;

(ಬಿ) ಸಹಕಾರ ಸಂಘ ಅಥವಾ ಸಹಕಾರ ಸಂಘಗಳ ಸಹಕಾರ ಸ್ವರೂಪವನ್ನು ಯಾವ ರೀತಿಯಲ್ಲೂ ಬದಲಾಯಿಸದೆ ಇದನ್ನು ಕಾರ್ಯರೂಪಕ್ಕೆ ತರಬಹುದು;

(ಸಿ) ಈ ಯೋಜನೆಯು ಸಹಕಾರ ಸಂಘದ ಅಥವಾ ಸಹಕಾರ ಸಂಘಗಳ ಸದಸ್ಯರ ಹಿತಾಸಕ್ತಿಗಳಿಗೆ ಅನುಗುಣವಾಗಿ ಅಥವಾ ಸಾರ್ವಜನಿಕ ಹಿತಾಸಕ್ತಿ ಅಥವಾ ಸಾಮಾನ್ಯವಾಗಿ, ಸಹಕಾರ ಆಂದೋಲನದ ಹಿತಾಸಕ್ತಿಗನುಗುಣವಾಗಿದೆ.][1]

[3][(ಡಿ) ಸಹಕಾರಿ ಬ್ಯಾಂಕಿನ ಸಂದರ್ಭದಲ್ಲಿ, ಯೋಜನೆಯು ಠೇವಣಿದಾರರ ಹಿತಾಸಕ್ತಿಗೆ ಅಥವಾ ಬ್ಯಾಂಕಿಂಗ್ ನೀತಿಗೆ ಹಾನಿಕರವಾಗಿಲ್ಲದಿದ್ದರೆ.][3]

[2][**27. ವಾರ್ಷಿಕ ಮಹಾ ಸಭೆ:-** (1) ಪ್ರತಿಯೊಂದು ಸಹಕಾರ ಸಂಘವು,-

(ಎ) ಸಮಿತಿಯು ಮಂಡಿಸಿದ ವಾರ್ಷಿಕ ವರದಿಯ ಪರಿಶೀಲನೆಯ;

(ಬಿ) ಲಭ್ಯವಿರುವ ಇತ್ತೀಚಿನ ಲೆಕ್ಕ ಪರಿಶೋಧನಾ ವರದಿ ಮತ್ತು ಅದರ ಮೇಲಿನ ಸಮಿತಿಯ ವರದಿಯ ಪರಿಶೀಲನೆಯ;

(ಸಿ) ವಿಚಾರಣಾ ವರದಿ ಯಾವುದಾದರೂ ಇದ್ದರೆ, ಅದರ ಪರಿಶೀಲನೆಯ;

(ಡಿ) ನಿವ್ವಳ ಲಾಭಗಳ ವಿಲೆಯ;

(ಇ) ಕಾರ್ಯಾಚರಣೆಯಲ್ಲಿ ಕೊರತೆ ಏನಾದರೂ ಇದ್ದರೆ ಅದರ ಪುನರವಲೋಕನ ಮತ್ತು ಅಂಥ ಕೊರತೆಯನ್ನು ಕಡಿಮೆ ಮಾಡಲು ಕಾರ್ಯಕ್ರಮದ;

(ಎಫ್) ಮುಂಬರುವ ವರ್ಷಕ್ಕಾಗಿ ಸಮಿತಿಯು ತಯಾರಿಸಿದ ಸಂಘದ ಚಟುವಟಿಕೆಗಳ ಕಾರ್ಯಕ್ರಮದ ಅನುಮೋದನೆಯ;

(ಜಿ) ವಾರ್ಷಿಕ ಬಜೆಟ್‌ನ ಅನುಮೋದನೆಯ;

(ಎಚ್) ನಿರ್ದಿಷ್ಟ ಮೀಸಲು ಮತ್ತು ಇತರ ನಿಧಿಗಳ ಸೃಜನೆಯ;

(ಐ) ಇತರ ಸಹಕಾರ ಸಂಘಗಳಲ್ಲಿ ಸಹಕಾರ ಸಂಘದ ಸದಸ್ಯತ್ವದ ಅನುಮೋದನೆಯ;

(ಜೆ) ಯಾವುದೇ ಪೂರಕ ಸಂಘದ ವಾರ್ಷಿಕ ವರದಿ ಮತ್ತು ಲೆಕ್ಕಪತ್ರಗಳು ಯಾವುದಾದರೂ ಇದ್ದರೆ ಅವುಗಳ ಪುನರವಲೋಕನದ;

(ಕೆ) ಸಮಿತಿಯ ಸದಸ್ಯರ ಅಥವಾ ಮುಖ್ಯ ಕಾರ್ಯನಿರ್ವಾಹಕರ ಬಂಧುಗಳಾಗಿದ್ದು ನೇಮಕ ಹೊಂದಿದ ನೌಕರರ ಪಟ್ಟಿಯ ಪರಿಶೀಲನೆಯ;

(ಎಲ್) ಉಪ ವಿಧಿಗಳ ತಿದ್ದುಪಡಿಯ;

---

1. 2000ರ ಅಧಿನಿಯಮ ಸಂಖ್ಯೆ 2ರ ಮೂಲಕ ಸೇರಿಸಲಾಗಿದೆ
2. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಬಿಟ್ಟುಬಿಡಲಾಗಿದೆ.
3. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಸೇರಿಸಲಾಗಿದೆ.

(ಎಮ್) ಸಹಕಾರಿ ಸಂಘದ ಸಮಿತಿಯ ಸದಸ್ಯರು, ಪದಾಧಿಕಾರಿಗಳು ಮತ್ತು ನೌಕರರಿಗಾಗಿ ವರ್ತನ ಸಂಹಿತೆಯ ರಚನೆಯ;

(ಎನ್) ಸದಸ್ಯರ ಪ್ರವೇಶ ಮತ್ತು ಅವರನ್ನು ತೆಗೆದುಹಾಕುವ ಮೇಲಿನ ಸೂಚನೆಯ; ಮತ್ತು

(ಒ) ಉಪವಿಧಿಗಳಿಗನುಸಾರವಾಗಿ ಮಂಡಿಸಬಹುದಾದ ಯಾವುದೇ ಇತರ ವಿಷಯದ ಪರಿಶೀಲನೆಯ

- ಉದ್ದೇಶಗಳಿಗಾಗಿ ಸದಸ್ಯರ ಮಹಾ ಸಭೆಯನ್ನು ಸೆಪ್ಟೆಂಬರ್ 30ನೇ ದಿನಾಂಕದೊಳಗೆ ವರ್ಷದಲ್ಲಿ ಒಮ್ಮೆ ನಡೆಸತಕ್ಕದು:

[1][ಪರಂತು, ರಿಜಿಸ್ಟ್ರಾರನು, ವಿಶೇಷ ಆದೇಶದ ಮೂಲಕ ಅಂಥ ಸಭೆ ನಡೆಸುವ ಅವಧಿಯನ್ನು ಆರು ತಿಂಗಳುಗಳನ್ನು ಮೀರದ ಅವಧಿಗೆ ವಿಸ್ತರಿಸಬಹುದು][1]

(2) (1)ನೇ ಉಪ-ಪ್ರಕರಣದ ಉಪಬಂಧಗಳಿಗೆ ಅನುಸಾರರಾಗಿ, ಮಹಾ ಸಭೆಯನ್ನು ಕರೆಯಲು ತಪ್ಪಿದರೆ, ರಿಜಿಸ್ಟ್ರಾರನು, ಆದೇಶದ ಮೂಲಕ,-

(ಎ) ಅಂಥ ಸಭೆಯನ್ನು ಕರೆಯುವುದು ಯಾರ ಕರ್ತವ್ಯವಾಗಿತ್ತೋ ಮತ್ತು ಯಾರು ಅಂಥ ಸಭೆಯನ್ನು ಕರೆಯಲು ಸೂಕ್ತ ಕಾರಣವಿಲ್ಲದೆ ತಪ್ಪಿರುವರೋ ಆ ಯಾರೇ ಪದಾಧಿಕಾರಿಯನ್ನು ಅಥವಾ ಸಮಿತಿಯ ಸದಸ್ಯನನ್ನು ಐದು ವರ್ಷಗಳಿಗೆ ಮೀರದ ಅವಧಿಯವರೆಗೆ, ಸಮಿತಿಯ ಪದಾಧಿಕಾರಿಯಾಗಿರಲು ಅಥವಾ ಸದಸ್ಯನಾಗಿರಲು ಅಥವಾ ಹಾಗೆ ಆಯ್ಕೆಯಾಗಲು ಅನರ್ಹನೆಂದು ಘೋಷಿಸಬಹುದು.

(ಬಿ) ಅಂಥ ಸಭೆಯನ್ನು ಕರೆಯುವುದು ಯಾರ ಕರ್ತವ್ಯವಾಗಿತ್ತೋ ಮತ್ತು ಯಾರು ಅಂಥ ಸಭೆಯನ್ನು ಕರೆಯಲು ಸೂಕ್ತ ಕಾರಣವಿಲ್ಲದೆ ತಪ್ಪಿರುವರೋ, ಸಂಘದ ಆ ನೌಕರನ ಸಂದರ್ಭದಲ್ಲಿ, ಅವನಿಗೆ ಒಂದು ಸಾವಿರ ರೂಪಾಯಿಗಳ ದಂಡ ವಿಧಿಸಬಹುದು ಮತ್ತು ಅಂಥ ನೌಕರನ ಮೇಲೆ ಶಿಸ್ತು ಕ್ರಮವನ್ನು ತೆಗೆದುಕೊಳ್ಳುವಂತೆಯೂ ಸಮಿತಿಗೆ ನಿರ್ದೇಶಿಸಬಹುದು ಮತ್ತು ಹಾಗೆ ವಿಧಿಸಲಾದ ದಂಡದ ಮೊತ್ತವು ಸಂದಾಯವಾಗದೆ ಉಳಿದ ಅದನ್ನು ಭೂ ಕಂದಾಯದ ಬಾಕಿಯಂತೆ ವಸೂಲು ಮಾಡತಕ್ಕದು:

ಪರಂತು, ಯಾವ ವ್ಯಕ್ತಿಯ ವಿರುದ್ಧ ಆದೇಶ ಮಾಡಬೇಕಾಗಿದೆಯೋ ಅವನಿಗೆ ಅಹವಾಲು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ಕೊಟ್ಟ ಹೊರತು, ಈ ಉಪ-ಪ್ರಕರಣದ ಮೇರೆಗೆ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ.][2]

[2][(3) (1)ನೇ ಉಪ ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ಮಹಾಸಭೆಯನ್ನು ಕರೆಯಲು ತಪ್ಪಿದಲ್ಲಿ, ರಿಜಿಸ್ಟ್ರಾರ್ ಅಥವಾ ಈ ಸಂಬಂಧದಲ್ಲಿ ಆತನಿಂದ ಅಧಿಕೃತನಾದ ಯಾವೊಬ್ಬ ಇತರ ವ್ಯಕ್ತಿಯು, (2)ನೇ ಉಪ ಪ್ರಕರಣದ ಉಪಬಂಧಗಳಿಗೆ ಬಾಧಕವಾಗದಂತೆ, (1)ನೇ ಉಪ ಪ್ರಕರಣದ ಉದ್ದೇಶಕ್ಕಾಗಿ ಮಹಾಸಭೆಯನ್ನು ಕರೆಯತಕ್ಕದ್ದು.][2]

**28. ವಿಶೇಷ ಮಹಾ ಸಭೆ:-** (1) ಸಹಕಾರ ಸಂಘದ ಸಮಿತಿಯು, ಯಾವುದೇ ಸಮಯದಲ್ಲಿ ವಿಶೇಷ ಮಹಾಸಭೆಯನ್ನು ಕರೆಯಬಹುದು ಮತ್ತು ಅಂಥ ಸಭೆಯನ್ನು ರಿಜಿಸ್ಟ್ರಾರನಿಂದ ಅಥವಾ [3][ಒಂದು ನಿರ್ದಿಷ್ಟ ಕಾರ್ಯ ಕಲಾಪವನ್ನು ನಡೆಸಲು ಐವತ್ತು ಸದಸ್ಯರಿಂದ ಅಥವಾ ಒಟ್ಟು ಸದಸ್ಯರ ಸಂಖ್ಯೆಯ ಐದನೇ ಒಂದರಷ್ಟು, ಇದರಲ್ಲಿ ಯಾವುದು ಕಡಿಮೆಯೋ ಅಷ್ಟು ಸದಸ್ಯರಿಂದ][3] ನಿಯಮಿಸಬಹುದಾದಷ್ಟು ಪ್ರಮಾಣದ ಸದಸ್ಯರಿಂದ ಲಿಖಿತ ಕೋರಿಕೆಯನ್ನು ಸ್ವೀಕರಿಸಿದ ತರುವಾಯ ಒಂದು ತಿಂಗಳೊಳಗೆ ಕರೆಯತಕ್ಕದು.

(2) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಕೋರಿಕೆಗೆ ಅನುಸಾರವಾಗಿ ಸಹಕಾರ ಸಂಘದ ವಿಶೇಷ ಮಹಾ ಸಭೆಯನ್ನು ಕರೆಯದಿದ್ದರೆ, ರಿಜಿಸ್ಟ್ರಾರನು ಅಥವಾ ಅವನಿಂದ ಈ ಬಗ್ಗೆ ಅಧಿಕೃತನಾದ ಯಾರೇ ವ್ಯಕ್ತಿಯು ಅಂಥ ಸಭೆಯನ್ನು ಕರೆಯಲು ಅಧಿಕಾರ ಹೊಂದಿರತಕ್ಕುದು ಮತ್ತು ಆ ಸಭೆಯನ್ನು ಸಮಿತಿಯಿಂದ ಕರೆಯಲಾದ ಸಭೆ ಎಂದು ಭಾವಿಸತಕ್ಕುದು ಮತ್ತು ಆ ಸಭೆಯು ಸಂಘದ ಉಪವಿಧಿಗಳ ಮೇರೆಗೆ ವಾರ್ಷಿಕ ಮಹಾ ಸಭೆಯಲ್ಲಿ ನಡೆಸಬಹುದಾದ ಎಲ್ಲ ವ್ಯವಹಾರಗಳನ್ನು ಮತ್ತು ರಿಜಿಸ್ಟ್ರಾರನು ಮಾಡಿದ ಕೋರಿಕೆಯಲ್ಲಿ ವಿಶೇಷವಾಗಿ ನಮೂದಿಸಿದ ಇತರ ವ್ಯವಹಾರಗಳನ್ನು ನಡೆಸಲು ಅಧಿಕಾರ ಹೊಂದಿರತಕ್ಕುದು.

[4][**28ಎ. ಸಹಕಾರ ಸಂಘಗಳ ವ್ಯವಸ್ಥಾಪನೆಯು ಸಮಿತಿಯಲ್ಲಿ ನಿಹಿತವಾಗಿರುವುದು:-** (1) ಯಾವೊಂದು ಸಹಕಾರ ಸಂಘದ ವ್ಯವಸ್ಥಾಪನೆಯು ಈ ಅಧಿನಿಯಮ, ನಿಯಮಗಳು ಮತ್ತು ಅಂಥ ಸಂಘದ ಉಪವಿಧಿಗಳಿಗೆ ಅನುಗುಣವಾಗಿ ರಚಿಸಲಾದ ಒಂದು ಸಮಿತಿಯಲ್ಲಿ ನಿಹಿತವಾಗಿರತಕ್ಕುದು. ಆ ಸಮಿತಿಯು ಈ ಅಧಿನಿಯಮ, ನಿಯಮಗಳು ಮತ್ತು ಉಪವಿಧಿಗಳ ಮೇರೆಗೆ ಅದಕ್ಕೆ ಪ್ರದಾನ ಮಾಡಿದ ಅಧಿಕಾರಗಳನ್ನು ಚಲಾಯಿಸತಕ್ಕುದು, ಕರ್ತವ್ಯಗಳನ್ನು ನಿರ್ವಹಿಸತಕ್ಕುದು ಮತ್ತು ಪ್ರಕಾರ್ಯಗಳನ್ನು ನೆರವೇರಿಸತಕ್ಕುದು.

[3][(2) ಸಹಕಾರ ಸಂಘದ ಸಮಿತಿಯು ಸರ್ಕಾರದಿಂದ ನಾಮನಿರ್ದೇಶಿತರಾದ ವ್ಯಕ್ತಿಗಳು ಮತ್ತು ಮುಖ್ಯ ಕಾರ್ಯನಿರ್ವಾಹಕರನ್ನು ಹೊರತುಪಡಿಸಿ ಒಂಭತ್ತಕ್ಕಿಂತ ಕಡಿಮೆ ಇಲ್ಲದ ಆದರೆ ಕೆಳಗೆ ನಿರ್ದಿಷ್ಟಪಡಿಸಿದಷ್ಟು ಸಂಖ್ಯೆಗಿಂತ ಹೆಚ್ಚಿಲ್ಲದ ಸದಸ್ಯರನ್ನು ಒಳಗೊಂಡಿರತಕ್ಕುದು, ಎಂದರೆ:-

(i) ಪ್ರಾಥಮಿಕ ಸಂಘದ ಮತ್ತು ಸೆಕೆಂಡರಿ ಸಂಘದ ಕಾರ್ಯಾಚರಣೆ ಪ್ರದೇಶ ವ್ಯಾಪ್ತಿಯು-

(ಎ) ತಾಲ್ಲೂಕಿನ ಒಂದು ಭಾಗಕ್ಕೆ ವ್ಯಾಪಿಸಿದ್ದರೆ, ಒಂಭತ್ತು ಸದಸ್ಯರು;

(ಬಿ) ಇಡೀ ತಾಲ್ಲೂಕಿಗೆ ವ್ಯಾಪಿಸಿದ್ದರೆ, ಹನ್ನೊಂದು ಸದಸ್ಯರು;

(ಸಿ) ತಾಲ್ಲೂಕನ್ನು ಮೀರಿದ ಆದರೆ ಜಿಲ್ಲೆಯನ್ನು ಮೀರದ ಪ್ರದೇಶಕ್ಕೆ ವ್ಯಾಪಿಸಿದ್ದರೆ ಹದಿಮೂರು ಸದಸ್ಯರು:

[1][ಪರಂತು, ಒಂದು ಜಿಲ್ಲೆಯನ್ನು ಮೀರದ ಕಾರ್ಯಾಚರಣೆಯ ಪ್ರದೇಶವನ್ನು ಹೊಂದಿರುವ ನಗರ ಸಹಕಾರ ಬ್ಯಾಂಕಿನ ಸಂಬಂಧದಲ್ಲಿ, ಗರಿಷ್ಠ ಸಂಖ್ಯೆಯು ಹದಿನೈದು ಸದಸ್ಯರನ್ನು ಮೀರತಕ್ಕುದಲ್ಲ][1]

1. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಸೇರಿಸಲಾಗಿದೆ.
2. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಸೇರಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಡಿ) ಜಿಲ್ಲೆಯನ್ನು ಮೀರಿ ವ್ಯಾಪಿಸಿದ್ದರೆ, ಹದಿನೆಂಟು ಸದಸ್ಯರು;

(ii) ಅಪೆಕ್ಸ್ ಸಂಘಗಳನ್ನು ಹೊರತುಪಡಿಸಿ ಸಂಯುಕ್ತ ಸಂಘವಾಗಿದ್ದಲ್ಲಿ, ಇಪ್ಪತ್ತೊಂದು ಸದಸ್ಯರು;

(iii) ಒಂದು ಅಪೆಕ್ಸ್ ಸಂಘವಾಗಿದ್ದಲ್ಲಿ, [1][ಮೂವತ್ತೆರಡು ಸದಸ್ಯರು][1] :

ಪರಂತು, ಸದಸ್ಯನು ಸಂಘದ ಸಮಿತಿಯಲ್ಲಿ ಒಂದಕ್ಕಿಂತ ಹೆಚ್ಚಿನ ಮತ ಕ್ಷೇತ್ರವನ್ನು ಪ್ರತಿನಿಧಿಸತಕ್ಕುದಲ್ಲ.

(3) ಪ್ರತಿ ಪ್ರಾಥಮಿಕ ಸಂಘದ ಸಮಿತಿಯಲ್ಲಿ:-

(i) ಒಂದು ಸ್ಥಾನವನ್ನು ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ವರ್ಗಗಳಿಗೆ ಸೇರಿದ ವ್ಯಕ್ತಿಗಳಿಂದ ಚುನಾವಣೆ ಮೂಲಕ ಭರ್ತಿ ಮಾಡುವುದಕ್ಕಾಗಿ;

(ii) ಒಂದು ಸ್ಥಾನವನ್ನು ಮಹಿಳೆಯರಿಂದ ಚುನಾವಣೆ ಮೂಲಕ ಭರ್ತಿ ಮಾಡುವುದಕ್ಕಾಗಿ

- ಮೀಸಲಿಡತಕ್ಕುದು:

ಪರಂತು, ಪರಿಶಿಷ್ಟ ಜಾತಿಗಳು, ಪರಿಶಿಷ್ಟ ವರ್ಗಗಳು ಮತ್ತು ಮಹಿಳೆಯರಿಗೆ ಸೇರಿದ ಯಾರೇ ಸದಸ್ಯರು ಇಲ್ಲದಿದ್ದ ಸಂಘದ ಸಂದರ್ಭದಲ್ಲಿ ಯಾವುದೇ ಅಂತಹ ಮೀಸಲಾತಿಯನ್ನು ಮಾಡುವುದು ಅಗತ್ಯವಿರತಕ್ಕುದಲ್ಲ.

(4) 29ಎ ಮತ್ತು 39ಎ ಪ್ರಕರಣದ ಉಪಬಂಧಗಳಿಗೊಳಪಟ್ಟು, ಸಮಿತಿಯ ಸದಸ್ಯರ ಅಧಿಕಾರದ ಅವಧಿಯು ಐದು ಸಹಕಾರ ವರ್ಷಗಳಾಗಿರತಕ್ಕುದು ಮತ್ತು ಸದರಿ ಅವಧಿಯು ಮುಕ್ತಾಯವಾದ ದಿನಾಂಕದಂದು ಸಮಿತಿಯ ಅಂಥ ಸದಸ್ಯರು ಪದವನ್ನು ತೆರವುಗೊಳಿಸಿದ್ದಾರೆಂದು ಭಾವಿಸತಕ್ಕುದು:

ಪರಂತು, ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 1997 ಪ್ರಾರಂಭವಾಗುವುದಕ್ಕೆ ಮೊದಲು, ಅಂಥ ಸಂಘದ ಉಪ-ವಿಧಿಗಳಿಗನುಸಾರವಾಗಿ ಯಾವುದೇ ಸಹಕಾರ ಸಂಘದ ಸಮಿತಿಗೆ ಈಗಾಗಲೇ ಚುನಾವಣೆ ನಡೆದಿದ್ದರೆ, ಅಂಥ ಸಹಕಾರ ಸಂಘದ ಸಮಿತಿಯ ಪದಾವಧಿಯು, ಅಂಥ ಚುನಾವಣೆ ನಡೆದ ಸಹಕಾರ ವರ್ಷವೂ ಸೇರಿದಂತೆ ಮೂರು ವರ್ಷಗಳಾಗಿರತಕ್ಕುದು.

ವಿವರಣೆ:- ಈ ಉಪ-ಪ್ರಕರಣದ ಉದ್ದೇಶಕ್ಕಾಗಿ, ಸಮಿತಿಯ ಚುನಾವಣೆಯನ್ನು ಸಹಕಾರ ವರ್ಷದ ಮಧ್ಯಭಾಗದಲ್ಲಿ ನಡೆಸಿದ್ದರೆ, ಸಮಿತಿಯ ಪದಾವಧಿಯನ್ನು ಲೆಕ್ಕ ಹಾಕುವ ಉದ್ದೇಶಕ್ಕಾಗಿ, ಸಹಕಾರ ವರ್ಷದ ಉಳಿದ ಭಾಗವನ್ನೂ ಒಂದು ವರ್ಷವೆಂದು ಭಾವಿಸತಕ್ಕುದು:

ಮತ್ತೂ ಪರಂತು, ನೋಂದಣಿಯ ನಂತರ ಸಂಘದ ಮೊದಲ ಮಹಾ ಸಭೆಯನ್ನು ಸಂಘದ ವ್ಯವಹರಣೆಗಳನ್ನು ನಿರ್ವಹಿಸುವುದಕ್ಕೆ ಮೊದಲ ಸಮಿತಿಯನ್ನು ಆಯ್ಕೆ ಮಾಡಲು ನೋಂದಣಿಯ ದಿನಾಂಕದಿಂದ ಒಂದು ತಿಂಗಳೊಳಗೆ ನಡೆಸತಕ್ಕುದು. ಮತ್ತು ಅಂಥ ಸಮಿತಿಯ ಪದಾವಧಿಯೂ ಸಹ ಐದು ಸಹಕಾರ ವರ್ಷಗಳಾಗಿರತಕ್ಕುದು.

[2][ಅಲ್ಲದೆ ಪರಂತು, 14ನೇ ಪ್ರಕರಣದ ಅನುಸಾರವಾಗಿ ಒಂದುಗೂಡಿದ ಅಥವಾ ಮಾನ್ಯತೆ ಪಡೆದ ಅಥವಾ ವಿಭಾಗದ ನಂತರ ರಚನೆಯಾದ ಸಹಕಾರಿ ಸಂಘದ ಅಥವಾ ಸಂಘಗಳ ಮೊದಲ ಮಹಾಸಭೆಯನ್ನು ಸಹಕಾರಿ ಸಂಘದ ಅಥವಾ ಸಂಘಗಳ ವ್ಯವಹಾರವನ್ನು ನಿರ್ವಹಿಸಲು ಮೊದಲ ಸಮಿತಿಯನ್ನು ಆಯ್ಕೆ ಮಾಡಲು ನೋಂದಣಿಯ ದಿನಾಂಕದಿಂದ ಮೂರು ತಿಂಗಳ ಒಳಗೆ ನಡೆಸತಕ್ಕದ್ದು ಮತ್ತು ಅಂಥ ಸಮಿತಿಯ ಪದಾವಧಿಯು ಸಹ ಐದು ಸಹಕಾರ ವರ್ಷಗಳಾಗಿರತಕ್ಕದ್ದು.][2]

(5) 29ಎ ಪ್ರಕರಣದ ಮೇರೆಗೆ ಸಮಿತಿಯ ಪದಾವಧಿಯು ಮುಗಿದ ನಂತರ ಹೊಸ ಸಮಿತಿಯು ರಚನೆಯಾಗಿರದಿದ್ದರೆ, ರಿಜಿಸ್ಟ್ರಾರನು ಅಥವಾ ಯಾರ ಅಧಿಕಾರ ವ್ಯಾಪ್ತಿಯೊಳಗೆ ಸಂಘವು ಇರುವುದೋ ಮತ್ತು ಯಾರು ರಿಜಿಸ್ಟ್ರಾರರಿಂದ ಅಧಿಕಾರ ಹೊಂದಿದ್ದಾರೋ ಆ ಯಾರೇ ಇತರ ಅಧಿಕಾರಿಯು ಆಡಳಿತಾಧಿಕಾರಿ ಆಗಿ ಅಧಿಕಾರ ಹೊಂದಿದ್ದಾರೆಂದು ಭಾವಿಸತಕ್ಕುದು ಮತ್ತು ಅವರು ಎಲ್ಲ ಉದ್ದೇಶಗಳಿಗಾಗಿ ವ್ಯವಸ್ಥಾಪನೆಯ ಸಮಿತಿಯಾಗಿ ಕಾರ್ಯನಿರ್ವಹಿಸತಕ್ಕುದು. ಆಡಳಿತಾಧಿಕಾರಿಯು, ರಿಜಿಸ್ಟ್ರಾರರ ನಿಯಂತ್ರಣಕ್ಕೊಳಪಟ್ಟು, ಸಹಕಾರ ಸಂಘದ ಸಮಿತಿಯ ಅಥವಾ ಸಹಕಾರ ಸಂಘದ ಯಾರೇ ಪದಾಧಿಕಾರಿಯ ಎಲ್ಲ ಅಧಿಕಾರಗಳನ್ನು ಚಲಾಯಿಸತಕ್ಕುದು ಮತ್ತು ಎಲ್ಲ ಪ್ರಕಾರ್ಯಗಳನ್ನೂ ನಿರ್ವಹಿಸತಕ್ಕುದು ಮತ್ತು ಸಹಕಾರ ಸಂಘದ ಹಿತದೃಷ್ಟಿಯಿಂದ ಅಗತ್ಯವೆನಿಸಬಹುದಾದ ಅಂಥ ಎಲ್ಲ ಕ್ರಮಗಳನ್ನು ಕೈಗೊಳ್ಳತಕ್ಕುದು:

[2][ಪರಂತು, ರಿಜಿಸ್ಟ್ರಾರ್‌ನು 14ನೇ ಪ್ರಕರಣದ ಅನುಸಾರವಾಗಿ ಒಂದುಗೂಡಿದ ಅಥವಾ ಮಾನ್ಯತೆ ಪಡೆದ ಅಥವಾ ವಿಭಾಗದ ನಂತರ ರಚನೆಯಾದ ಸಹಕಾರಿ ಸಂಘಕ್ಕೆ ಅಥವಾ ಪ್ರತಿಯೊಂದು ಸಹಕಾರಿ ಸಂಘಗಳಿಗಾಗಿ ಮೂರು ತಿಂಗಳ ಅವಧಿಗಾಗಿ ಒಬ್ಬ ಆಡಳಿತಾಧಿಕಾರಿಯನ್ನು ನೇಮಿಸತಕ್ಕದ್ದು ಮತ್ತು ಹಾಗೆ ನೇಮಕಗೊಂಡ ಆಡಳಿತಾಧಿಕಾರಿಯು, ಅಂಥ ಸಹಕಾರಿ ಸಂಘದ ಅಥವಾ ಸಂದರ್ಭಾನುಸಾರವಾಗಿ ಸಂಘಗಳ ಸಮಿತಿಗೆ ಚುನಾವಣೆಯನ್ನು ನಡೆಸಲು ವ್ಯವಸ್ಥೆ ಮಾಡತಕ್ಕದ್ದು.][2]

(6) ಸಮಿತಿಯ [3][ಸದಸ್ಯರು][3] ಸಹಕಾರ ಸಂಘದ ಪದಾಧಿಕಾರಿಗಳನ್ನು ಅವರ ಪೈಕಿಯಿಂದಲೇ ಚುನಾಯಿಸತಕ್ಕುದು. ಪದಾಧಿಕಾರಿಗಳ ಚುನಾವಣೆಯು ರಹಸ್ಯ ಮತದಾನದ ಮೂಲಕ ನಡೆಯತಕ್ಕುದು.][4]][3]

[4][**28ಬಿ. ಸಮಿತಿಯು ಚುನಾವಣೆಗೆ ವ್ಯವಸ್ಥೆ ಮಾಡಬೇಕು:-** (1) ಸಮಿತಿಯು ಅಧಿನಿಯಮ, ನಿಯಮಗಳು, ಮತ್ತು ಉಪ ವಿಧಿಗಳಿಗನುಸಾರವಾಗಿ, ಮುಂದಿನ ಸಮಿತಿಯ ಸದಸ್ಯರ ಚುನಾವಣೆಗೆ ವ್ಯವಸ್ಥೆಯನ್ನು ಮಾಡತಕ್ಕುದು.

(2) 39ಎ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಕಾಲಮಿತಿಯೊಳಗೆ ಚುನಾವಣೆಗೆ ವ್ಯವಸ್ಥೆ ಮಾಡಲು ವಿಫಲರಾದ ಸಮಿತಿಯ ಸದಸ್ಯರು ನಿರ್ದಿಷ್ಟಪಡಿಸಿದ ಕಾಲಮಿತಿಯ ಕೊನೆಯ ದಿನದಂದು ಅವರ ಪದವನ್ನು ತೆರವುಗೊಳಿಸಿದ್ದಾರೆಂದು ಭಾವಿಸತಕ್ಕುದು ಮತ್ತು ಅಂಥ ಸದಸ್ಯರು ಅವರ ಪದಾವಧಿ ಮುಕ್ತಾಯವಾದ ದಿನಾಂಕದಿಂದ ಐದು ವರ್ಷಗಳ ಅವಧಿಯವರೆಗೆ ಸಮಿತಿಯ ಸದಸ್ಯರಾಗಿ ಚುನಾವಣೆಗೆ ಅರ್ಹರಾಗತಕ್ಕುದಲ್ಲ.

(3) 28ಎ ಪ್ರಕರಣದ (5)ನೇ ಉಪ-ಪ್ರಕರಣದ ಮೇರೆಗೆ ಅಧಿಕಾರವನ್ನು ವಹಿಸಿಕೊಳ್ಳುವ ಆಡಳಿತಾಧಿಕಾರಿಯು, ಸಾಧ್ಯವಾದಷ್ಟು ಬೇಗನೆ, ಆದರೆ ಆರು ತಿಂಗಳ ಅವಧಿಯೊಳಗೆ, ಅಧಿನಿಯಮ, ನಿಯಮಗಳು ಮತ್ತು ಉಪ ವಿಧಿಗಳಿಗನುಸಾರವಾಗಿ ಸಂಘದ ಹೊಸ ಸಮಿತಿಯ ರಚನೆಗೆ ವ್ಯವಸ್ಥೆ ಮಾಡತಕ್ಕುದು.][4]

1. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಪ್ರತಿಯೋಜಿಸಲಾಗಿದೆ.
2. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಸೇರಿಸಲಾಗಿದೆ.
3. 2000ದ ಅಧಿನಿಯಮ ಸಂಖ್ಯೆ 13ರ ಮೂಲಕ 26.2.2000 ದಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**29. ನೆರವು ಪಡೆದ ಸಹಕಾರ ಸಂಘದ ಸಮಿತಿಯಲ್ಲಿ ಸರ್ಕಾರದ ನಾಮನಿರ್ದೇಶಿತರು:-**

(1) ರಾಜ್ಯ ಸರ್ಕಾರವು, ಯಾವುದೇ ಸಹಾಯಕ ಸಂಘದ ಸಮಿತಿಗೆ ಮೂರಕ್ಕಿಂತ ಹೆಚ್ಚಿಲ್ಲದ ವ್ಯಕ್ತಿಗಳನ್ನು ತನ್ನ ಪ್ರತಿನಿಧಿಗಳೆಂದು ನಾಮ ನಿರ್ದೇಶಿಸಬಹುದು. ಅದರಲ್ಲಿ ಒಬ್ಬರು ಪರಿಶಿಷ್ಟ ಜಾತಿಗಳು ಅಥವಾ ಪರಿಶಿಷ್ಟ ಪಂಗಡಗಳಿಗೆ ಸೇರಿದ ವ್ಯಕ್ತಿಯಾಗಿರತಕ್ಕದು ಮತ್ತು ಒಬ್ಬರು ಮಹಿಳೆಯಾಗಿರತಕ್ಕದು.

[2][(2) ಹಾಗೆ ನಾಮನಿರ್ದೇಶಿತರಾದ ವ್ಯಕ್ತಿಗಳು, ರಾಜ್ಯ ಸರ್ಕಾರವು ಕಾಲಕಾಲಕ್ಕೆ ಗೊತ್ತುಪಡಿಸಬಹುದಾದಂತೆ ಪ್ರಾಥಮಿಕ ಸಹಕಾರ ಸಂಘಗಳು ಮತ್ತು ಸಹಕಾರ ಸಂಘಗಳ ಇತರ ಯಾವುದೇ ವರ್ಗ ಅಥವಾ ವರ್ಗಗಳ ಪದಾಧಿಕಾರಿಗಳಾಗುವುದಕ್ಕೆ ಹಕ್ಕನ್ನು ಹೊಂದಿರತಕ್ಕುದಲ್ಲ.][2]

[2][(3) (1)ನೇ ಉಪ ಪ್ರಕರಣದ ಮೇರೆಗೆ ಒಂದು ಸಹಕಾರ ಸಂಘದ ಸದಸ್ಯನಾಗಿ ನಾಮನಿರ್ದೇಶಿತನಾದ ವ್ಯಕ್ತಿಯು ರಾಜ್ಯಸರ್ಕಾರದ ಇಷ್ಟಪರ್ಯಂತ ಅಂಥ ಸದಸ್ಯನಾಗಿ ಪದಧಾರಣ ಮಾಡತಕ್ಕುದು.][2]

(4) (1)ನೇ ಉಪ-ಪ್ರಕರಣದ ಮೇರೆಗೆ ಸರ್ಕಾರದ ಅಧಿಕಾರಿಯನ್ನು ನಾಮ ನಿರ್ದೇಶನ ಮಾಡಿದಲ್ಲಿ ಅಂಥ ಅಧಿಕಾರಿಯು ಸಮಿತಿಯ ಯಾವುದೇ ಸಭೆಗೆ ತಾನು ಸ್ವತಃ ಹಾಜರಾಗಲು ಅಸಮರ್ಥನಾಗಿದ್ದರೆ ಅವನ ಪ್ರತಿನಿಧಿಯಾಗಿ ಸಭೆಗೆ ಹಾಜರಾಗಲು ಒಬ್ಬ ಅಧೀನ ಅಧಿಕಾರಿಯನ್ನು ಪ್ರತಿನಿಯೋಜಿಸಬಹುದು ಮತ್ತು ಅಂಥ ಅಧೀನ ಅಧಿಕಾರಿಯನ್ನು, ಅಂಥ ಸಭೆಯ ಉದ್ದೇಶಕ್ಕಾಗಿ, ರಾಜ್ಯ ಸರ್ಕಾರದ ಪ್ರತಿನಿಧಿಯಾಗಿ ನಾಮನಿರ್ದೇಶನಗೊಂಡ ಒಬ್ಬ ವ್ಯಕ್ತಿಯೆಂದು ಭಾವಿಸತಕ್ಕುದು.][1]

[3][**29ಎ. ಪದಾವಧಿಯ ಪ್ರಾರಂಭ:-** [4][(1) [1][ಸಮಿತಿಯ ಚುನಾಯಿತ ಸದಸ್ಯರ ಪದಾವಧಿಯು ಸಮಿತಿಯ ಚುನಾಯಿತ ಬಹುಮತ ಸದಸ್ಯರು ಅಧಿಕಾರ ವಹಿಸಿಕೊಳ್ಳುವ ದಿನಾಂಕದಂದು ಅಥವಾ ಹೊರಹೋಗುವ ಸಮಿತಿಯ ಸದಸ್ಯರ ಪದಾವಧಿಯು ಮುಕ್ತಾಯವಾದ ದಿನಾಂಕದಂದು, ಯಾವುದು ನಂತರವೋ ಅಂದು ಪ್ರಾರಂಭವಾಗತಕ್ಕುದು.][1]

[5][(2) ಈ ಅಧಿನಿಯಮದಲ್ಲಿ ಅಥವಾ ನಿಯಮಗಳಲ್ಲಿ ಅಥವಾ ಸಹಕಾರ ಸಂಘದ ಉಪವಿಧಿಗಳಲ್ಲಿ ಏನೇ ಇದ್ದರೂ, ಆ ಸಮಿತಿಯನ್ನು [6][xxx][6] ಚುನಾವಣೆಯ ತರುವಾಯ ಸಮಿತಿಯ ಸಭೆಯ ಸದಸ್ಯರಾಗಿ ಕಾರ್ಯನಿರ್ವಹಿಸಲು [1][ಸಮಿತಿಯ ಚುನಾಯಿತ ಸದಸ್ಯರ ಪೈಕಿ ಬಹು ಸಂಖ್ಯೆಯಲ್ಲಿ ಸದಸ್ಯರು ಇರುವ ಪಕ್ಷದಲ್ಲಿ][1] ಯಥಾ ರೀತಿ ರಚಿಸಲಾಗಿದೆ ಎಂದು ಭಾವಿಸತಕ್ಕುದು.

(3) (2)ನೇ ಉಪಪ್ರಕರಣದ ಮೇರೆಗೆ ರಚಿಸಲಾಗಿದೆ ಎಂದು ಭಾವಿಸಲಾದ ಸಮಿತಿಯು, ಸಹಕಾರ ಸಂಘದ ಎಲ್ಲ ಅಧಿಕಾರಗಳನ್ನು ಚಲಾಯಿಸಲು ಮತ್ತು ಎಲ್ಲ ಪ್ರಕಾರ್ಯಗಳನ್ನು ನೆರವೇರಿಸಲು ಸಕ್ಷಮವಾಗಿರತಕ್ಕುದು.

[6][(4) xxxx

(5) xxxx

(6) xxxx][6]][5]

[1][**29ಬಿ. ಸದಸ್ಯನ ರಾಜೀನಾಮೆ:-** ನಾಮನಿರ್ದೇಶಿತ ಸದಸ್ಯನನ್ನು ಹೊರತುಪಡಿಸಿ, ಸಮಿತಿಯ ಸದಸ್ಯನು ತನ್ನ ಸದಸ್ಯತ್ವಕ್ಕೆ ತಾನು ಸಹಿ ಹಾಕಿದ ಪತ್ರದ ಮೂಲಕ ರಾಜೀನಾಮೆಯನ್ನು ಮುಖ್ಯ ಕಾರ್ಯನಿರ್ವಾಹಕರಿಗೆ ಕೊಡಬಹುದು ಮತ್ತು ಹದಿನೈದು ದಿನಗಳೊಳಗೆ ತಾನು ಸಹಿ ಹಾಕಿದ ಪತ್ರದ ಮೂಲಕ ಮುಖ್ಯ ಕಾರ್ಯನಿರ್ವಾಹಕರಿಗೆ ತಲುಪಿಸಿರುವ ಅಂತಹ ರಾಜೀನಾಮೆಯನ್ನು ಅವನು ವಾಪಸ್ಸು ಪಡೆದ ಹೊರತು ಹಾಗೆ ತಲುಪಿಸಿದ ದಿನಾಂಕದಿಂದ ಸದರಿ ಹದಿನೈದು ದಿನಗಳ ಅವಧಿ ಮುಕ್ತಾಯವಾದ ದಿನಾಂಕದಂದು ಅವನ ಸ್ಥಾನವು ಖಾಲಿಯಾಗತಕ್ಕುದು. ಅಂತಹ ಪತ್ರ ನೀಡಿದ ನಂತರ ಸಮಾವೇಶಗೊಳ್ಳುವ ಸಮಿತಿಯ ಸಭೆಯಲ್ಲಿ ಮುಖ್ಯ ಕಾರ್ಯನಿರ್ವಾಹಕನು ರಾಜೀನಾಮೆ ಪತ್ರವನ್ನು ಇಡತಕ್ಕುದು.][1]

**29ಸಿ. ಸಮಿತಿಯ ಸದಸ್ಯತ್ವಕ್ಕೆ ಅನರ್ಹತೆಗಳು:-** (1) ಯಾರೇ ವ್ಯಕ್ತಿಯು [1][ಯಾವುದೇ ಸಹಕಾರ ಸಂಘದ ಸಮಿತಿಯ][1] ಸದಸ್ಯನಾಗಿ ಚುನಾಯಿತನಾಗಲು, ಅಥವಾ ನೇಮಕಗೊಳ್ಳಲು ಅಥವಾ ಮುಂದುವರಿಯಲು,-

[1][(ಎ) ಋಣಿಯಾಗಿ ತನ್ನಿಂದ ಸಲ್ಲಬೇಕಾದ ಯಾವುದೇ ಬಾಕಿಗಳ ಸಂಬಂಧದಲ್ಲಿ ಅವನು ಆ ಸಂಘ ಅಥವಾ ಇತರ ಯಾವುದೇ ಸಹಕಾರ ಸಂಘಕ್ಕೆ ಸುಸ್ತಿದಾರನಾಗಿದ್ದರೆ;][1]

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಪ್ರತಿಯೋಜಿಸಲಾಗಿದೆ.
3. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 29ಎ ಯಿಂದ 29ಡಿ ವರೆಗಿನ ಪ್ರಕರಣಗಳನ್ನು 23.9.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ 20.1.1976 ರಿಂದ ಜಾರಿಗೆ ಬರುವಂತೆ ಮರು ಸಂಖ್ಯೆ ನೀಡಲಾಗಿದೆ.
5. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ 20.1.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
6. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಬಿ) ಅಂಥ ಸಹಕಾರ ಸಂಘದೊಂದಿಗೆ ಮಾಡಿಕೊಂಡ ಯಾವುದೇ ಕರಾರಿನಲ್ಲಿ ಅಥವಾ ಅಂಥ ಸಹಕಾರ ಸಂಘವು ಖಾಸಗಿಯಾಗಿ ಅಥವಾ ಹರಾಜಿನಲ್ಲಿ ಮಾಡಿದ ಮಾರಾಟ ಅಥವಾ ಖರೀದಿಯಲ್ಲಿ ಅಥವಾ ಆ ಕರಾರು, ಮಾರಾಟ, ಖರೀದಿ ಅಥವಾ ವಹಿವಾಟಿನಲ್ಲಿ (ಬಂಡವಾಳ ಹೂಡಿಕೆ ಮತ್ತು ಸಾಲ ಪಡೆಯುವುದನ್ನು ಬಿಟ್ಟು) ಹಣಕಾಸಿನ ಹಿತಾಸಕ್ತಿಗಳನ್ನು ಒಳಗೊಂಡ ಸಹಕಾರ ಸಂಘದ ಯಾವುದೇ ಕರಾರಿನಲ್ಲಿ ಅಥವಾ ವಹಿವಾಟಿನಲ್ಲಿ ಅವನು ನೇರವಾಗಿ ಅಥವಾ ಪರೋಕ್ಷವಾಗಿ ಹಿತಾಸಕ್ತಿ ಹೊಂದಿದ್ದರೆ;

(ಸಿ) ಅಂಥ ಸಹಕಾರ ಸಂಘವು ನಡೆಸುತ್ತಿರುವ ಅಥವಾ ಸಹಕಾರ ಸಂಘದ ಯಾವ ಸಹಕಾರ ಸಂಘವು ಸದಸ್ಯನಾಗಿರುವುದೋ ಆ ಸಹಕಾರ ಸಂಘವು ನಡೆಸುತ್ತಿರುವ ಅದೇ ಸ್ವರೂಪದ ವ್ಯವಹಾರವನ್ನು [1][ಅವನು ಅಥವಾ ಅವನ ಹತ್ತಿರದ ಸಂಬಂಧಿಯು ನಡೆಸುತ್ತಿದ್ದರೆ:][1]

[2][ಪರಂತು, ಯಾರೇ ವ್ಯಕ್ತಿಯು, ಹತ್ತಿರದ ಸಂಬಂಧಿಯೇ ಅಥವಾ ಅಲ್ಲವೆ ಎಂಬ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಆ ಪ್ರಕರಣವನ್ನು ರಿಜಿಸ್ಟ್ರಾರನು ತೀರ್ಮಾನಿಸತಕ್ಕುದು ಮತ್ತು ಅವನ ತೀರ್ಮಾನವೇ ಅಂತಿಮವಾಗಿರತಕ್ಕುದು;][2]

(ಡಿ) ಅಂಥ ಸಹಕಾರ ಸಂಘದ ಪರವಾಗಿ ನ್ಯಾಯವಾದಿಯಾಗಿ ನೇಮಕಗೊಂಡರೆ ಅಥವಾ ಅಂಥ ಸಹಕಾರ ಸಂಘದ ವಿರುದ್ಧ ನ್ಯಾಯವಾದಿಯಾಗಿ ನಿಯೋಜನೆಯನ್ನು ಸ್ವೀಕರಿಸಿದರೆ;

(ಇ) ಅವನು ಅಂಥ ಸಹಕಾರ ಸಂಘದ ಅಥವಾ ಅದರ ಹಣಕಾಸು ಬ್ಯಾಂಕಿನ ವೇತನ ಪಡೆಯುವ ನೌಕರನಾಗಿದ್ದರೆ;

[3][xxxx][3]

(ಎಫ್) ಅವನು ಅಂಥ ಸಹಕಾರ ಸಂಘದ ವೇತನ ಪಡೆಯುವ ನೌಕರನ ಹತ್ತಿರದ ಸಂಬಂಧಿಯಾಗಿದ್ದರೆ

- ಅರ್ಹನಾಗತಕ್ಕುದಲ್ಲ.

[4][**ವಿವರಣೆ:-** [1][ಈ ಖಂಡದ ಮತ್ತು (ಸಿ) ಖಂಡದ][1] ಉದ್ದೇಶಕ್ಕಾಗಿ 'ಹತ್ತಿರದ ಸಂಬಂಧಿ' ಎಂದರೆ,-

(i) ಗಂಡ, ಹೆಂಡತಿ ಮತ್ತು ಅವಿವಾಹಿತ ಮಗಳು;

(ii) ತಂದೆ, ತಾಯಿ ಅವಿಭಕ್ತ ಮಗ, ಅವಿಭಕ್ತ ಸಹೋದರ ಮತ್ತು ಅವಿವಾಹಿತ ಸಹೋದರಿ; ಮತ್ತು

(iii) ಹತ್ತಿರದ ಸಂಬಂಧಿಗಳೆಂದು ನಿಯಮಿಸಬಹುದಾದಂಥ ಇತರ ಸಂಬಂಧಿಕರು.

[5][xxx][5] ][4]

[2][(ಜಿ) ಅವನು ಸಹಕಾರ ಸಂಘದ ವೇತನ ಪಡೆಯುವ ನೌಕರನಾಗಿದ್ದು, ಅವನನ್ನು ಸಹಕಾರ ಸಂಘದ ಸೇವೆಯಿಂದ ವಜಾ ಮಾಡಲಾಗಿದ್ದರೆ, ತೆಗೆದುಹಾಕಲಾಗಿದ್ದರೆ ಅಥವಾ ಕಡ್ಡಾಯ ನಿವೃತ್ತಿಗೊಳಿಸಲಾಗಿದ್ದರೆ;

(ಹೆಚ್) ಅವನು ಸಂಘದ ಸದಸ್ಯನಾಗಿರುವುದರಿಂದ ಅಥವಾ ಅಂಥ ಸದಸ್ಯನಾಗಿ ಮತ ಚಲಾಯಿಸುವುದರಿಂದ ಅನರ್ಹನಾಗಿದ್ದರೆ;

(ಐ) ಅವನು 1960ರ ದಂಡ ಸಂಹಿತೆಯ (ಕೇಂದ್ರ ಅಧಿನಿಯಮ 1860ರ 45) 153ಎ ಪ್ರಕರಣ ಅಥವಾ 171ಇ ಪ್ರಕರಣ ಅಥವಾ 171ಎಫ್ ಪ್ರಕರಣ ಅಥವಾ 505ನೇ ಪ್ರಕರಣದ (2)ನೇ ಉಪ-ಪ್ರಕರಣದ ಅಥವಾ (3)ನೇ ಉಪ-ಪ್ರಕರಣದ ಮೇರೆಗೆ ಅಥವಾ ಈ ಅಧಿನಿಯಮದ 39ಜೆ ಪ್ರಕರಣದ ಅಥವಾ 39ಕೆ ಪ್ರಕರಣದ (2)ನೇ ಉಪ-ಪ್ರಕರಣದ (ಬಿ) ಖಂಡದ ಮೇರೆಗೆ ದಂಡನೀಯವಾದ ಒಂದು ಅಪರಾಧಕ್ಕಾಗಿ ಸಿದ್ದದೋಷಿಯಾಗಿದ್ದರೆ ಹಾಗೆ ದೋಷ ಸಿದ್ಧಿಯಾದ ದಿನಾಂಕದಿಂದ ಆರು ವರ್ಷಗಳ ಅವಧಿ ಕಳೆದ ಹೊರತು;

(ಜೆ) ಅವನು, ಭಾರತದ ನ್ಯಾಯಾಲಯದಿಂದ ಯಾವುದೇ ಅಪರಾಧಕ್ಕಾಗಿ ಸಿದ್ದದೋಷಿಯಾಗಿದ್ದು ಎರಡು ವರ್ಷಗಳಿಗಿಂತ ಕಡಿಮೆಯಿಲ್ಲದ ಅವಧಿಗೆ ಕಾರಾವಾಸ ಶಿಕ್ಷೆಗೆ, ಒಳಗಾಗಿದ್ದರೆ, ಅವನ ಬಿಡುಗಡೆಯ ದಿನಾಂಕದಿಂದ ಐದು ವರ್ಷಗಳ ಅವಧಿ ಕಳೆದ ಹೊರತು;

(ಕೆ) ಅವನು 39 ಸಿ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಭ್ರಷ್ಟಾಚಾರದ ದೋಷಿಯಾಗಿದ್ದರೆ, ಆ ಅಪರಾಧದ ದೋಷಿಯಾದ ದಿನಾಂಕದಿಂದ ಆರು ವರ್ಷಗಳ ಅವಧಿ ಕಳೆದ ಹೊರತು;

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಬಿಟ್ಟುಬಿಡಲಾಗಿದೆ.
4. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ 20.1.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1976ರ ಅಧಿನಿಯಮ ಸಂಖ್ಯೆ 70ರ ಮೂಲಕ 4.12.1976 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಎಲ್) ಅವನು ಈ ಅಧಿನಿಯಮದ ಉಪಬಂಧಗಳು, ನಿಯಮಗಳು ಅಥವಾ ಉಪ-ವಿಧಿಗಳನ್ನು ಉಲ್ಲಂಘಿಸಿ ಯಾವುದೇ ಸಹಕಾರ ಸಂಘದ ಯಾವುದೇ ಮೊತ್ತವನ್ನು (ಸಾಲದ ಹೊರತು) ಅವನಲ್ಲೇ ಇಟ್ಟುಕೊಂಡಿದ್ದು ಜಮೆ ಮಾಡಲು ವಿಫಲನಾಗಿದ್ದರೆ;

(ಎಂ) ಅವನು ಒಂದು ಹಣಕಾಸು ನೀಡಿಕೆ ಬ್ಯಾಂಕಿಗೆ ಅಥವಾ ಅವನು ಪ್ರತಿನಿಧಿಸುವ ಸಹಕಾರ ಸಂಘದಿಂದ ಇರುವ ಬಾಕಿಗಳ ಸಂಬಂಧದಲ್ಲಿ ಯಾವುದೇ ಸಹಕಾರ ಸಂಘಕ್ಕೆ ಸತತವಾಗಿ ಒಂದು ವರ್ಷದವರೆಗೆ ಸುಸ್ತಿದಾರನಾಗಿದ್ದರೆ

- ಅರ್ಹನಾಗತಕ್ಕುದಲ್ಲ:

ಪರಂತು, ಸಮಿತಿಯ ಸದಸ್ಯನಾಗಿ ಮುಂದುವರಿಯಲು ಈ ಖಂಡದ ಮೇರೆಗಿನ ಅನರ್ಹತೆಯು, ಅಂಥ ಬಾಕಿಗಳ ಶೇಕಡ ಮೂವತ್ತರಷ್ಟು ಮೊತ್ತವನ್ನು ಮೀರದಂತಹ ಮೊತ್ತವನ್ನು ಸಂದಾಯ ಮಾಡುವ ಸುಸ್ತಿದಾರ ಸಹಕಾರ ಸಂಘಕ್ಕೆ ಅನ್ವಯವಾಗತಕ್ಕುದು;

(ಎನ್) ಅವನು 39ಎ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಕಾಲಮಿತಿಯೊಳಗೆ ಚುನಾವಣೆಗೆ ವ್ಯವಸ್ಥೆ ಮಾಡುವಲ್ಲಿ ವಿಫಲನಾಗಿರುವ ಸಮಿತಿಯ ಸದಸ್ಯನಾಗಿದ್ದರೆ

- ಅರ್ಹನಾಗತಕ್ಕುದಲ್ಲ.][2]

[1][(ಒ) ಅವನು ಒಂದು ಸಹಕಾರ ಸಂಘದ ಪ್ರತಿನಿಧಿಯಾಗಿ ಒಂದು ಜಿಲ್ಲಾ ಕೇಂದ್ರ ಸಂಘದ ಅಥವಾ ಒಂದು ಒಕ್ಕೂಟ ಸಂಘದ ಅಥವಾ ಒಂದು ಅಪೆಕ್ಸ್ ಸಂಘದ ಸಮಿತಿಯ ಸದಸ್ಯನಾಗಿದ್ದರೆ; ಮತ್ತು,-

(i) ಅವನು ಪ್ರತಿನಿಧಿಸುವ ಪ್ರಾಥಮಿಕ ಅಥವಾ ಸೆಕೆಂಡರಿ ಸಂಘದ ಸದಸ್ಯತ್ವವು ಸಮಾಪ್ತಿಗೊಂಡರೆ; ಅಥವಾ

(ii) ಆತನನ್ನು ಪ್ರತಿನಿಧಿಯಾಗಿ ನಾಮನಿರ್ದೇಶನ ಮಾಡಿದ ಸಂಘವು ಆತನ ನಾಮನಿರ್ದೇಶನವನ್ನು ಹಿಂತೆಗೆದುಕೊಂಡರೆ; ಅಥವಾ

(iii) ಆತನು ಸದಸ್ಯನಾಗಿರುವ ಸಂಘದ ಸಮಿತಿಯನ್ನು 30ನೇ ಪ್ರಕರಣದ ಅಡಿಯಲ್ಲಿ ರದ್ದುಗೊಳಿಸಿದರೆ ಅಥವಾ 31ನೇ ಪ್ರಕರಣದ ಅಡಿಯಲ್ಲಿ ವಿಶೇಷಾಧಿಕಾರಿಯನ್ನು ನೇಮಕಗೊಳಿಸಿದರೆ;

(iv) ಆತನು ಪ್ರತಿನಿಧಿಸುತ್ತಿರುವ ಸಂಘವು ಸಮಾಪನಗೊಂಡರೆ.][1]

(2) ಯಾವೊಂದು ಸಹಕಾರ ಸಂಘವು ಸದಸ್ಯನಾಗಿರುವ ಇತರ ಸಹಕಾರ ಸಂಘದ ಸಮಿತಿಯ ಸದಸ್ಯನಾಗಿ ಚುನಾಯಿತನಾಗಿರುವ ವ್ಯಕ್ತಿಯೂ ಸೇರಿ, ಯಾರೇ ವ್ಯಕ್ತಿಯು ಎರಡು ಸಹಕಾರ ಸಂಘಗಳಿಗಿಂತ ಹೆಚ್ಚು ಸಹಕಾರ ಸಂಘಗಳಿಗೆ [2][ಅಧ್ಯಕ್ಷ ಅಥವಾ ಸಭಾಧ್ಯಕ್ಷ, ಉಪಾಧ್ಯಕ್ಷ ಅಥವಾ ಉಪಸಭಾಧ್ಯಕ್ಷ ಅಥವಾ ಇತರ ಪದಾಧಿಕಾರಿ][2] ಆಗಿರತಕ್ಕುದಲ್ಲ.

[3][(3) xxx ][3]

[2][(4) (2)ನೇ ಉಪಪ್ರಕರಣದಲ್ಲಿ ಇರುವುದು ಯಾವುದೂ,-

(i) ರಾಜ್ಯಸರ್ಕಾರವು ಅಥವಾ ರಿಜಿಸ್ಟ್ರಾರನು, ಅಧ್ಯಕ್ಷನನ್ನಾಗಿ ಅಥವಾ ಸಭಾಧ್ಯಕ್ಷನನ್ನಾಗಿ, ಉಪಾಧ್ಯಕ್ಷನನ್ನಾಗಿ ಅಥವಾ ಉಪಸಭಾಧ್ಯಕ್ಷನನ್ನಾಗಿ ನೇಮಿಸಿದ ಯಾರೇ ವ್ಯಕ್ತಿಗೆ; ಅಥವಾ

(ii) ಸಮಿತಿಯ ಸದಸ್ಯ ಮಾತ್ರ ಆಗಿರುವ ಯಾರೇ ವ್ಯಕ್ತಿಗೆ

- ಅನ್ವಯವಾಗತಕ್ಕುದಲ್ಲ.][2]

(5) ಸಹಕಾರ ಮಾರುಕಟ್ಟೆ ಸಂಘಗಳು, ಗ್ರಾಹಕರ ಸಹಕಾರ ಸಂಘಗಳು ಮತ್ತು ರಾಜ್ಯಸರ್ಕಾರವು ರಾಜಪತ್ರದಲ್ಲಿ ಅಧಿಸೂಚನೆ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಸಹಕಾರ ಸಂಘಗಳ ವರ್ಗ ಅಥವಾ ವರ್ಗಗಳ ಸಂದರ್ಭದಲ್ಲಿ, ಯಾರೇ ವ್ಯಕ್ತಿಯು ಸಹಕಾರ ಸಂಘದೊಂದಿಗೆ ಅವನ ವ್ಯವಹಾರಗಳಿಗೆ ಸಂಬಂಧಿಸಿ ಅಂಥ ಅಧಿಸೂಚನೆಯಲ್ಲಿ ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂಥ ಹಣಕಾಸು ಮಿತಿಗಳಿಗೆ ಸಂಬಂಧಿಸಿದ ಕನಿಷ್ಠ ಷರತ್ತುಗಳನ್ನು ಪಾಲಿಸಿದ ಹೊರತು, ಅವನು ಅಂಥ ಸಹಕಾರ ಸಂಘದ ಸಮಿತಿಯ ಸದಸ್ಯನಾಗಿ ನೇಮಕಗೊಳ್ಳಲು ಅಥವಾ ಆಯ್ಕೆಯಾಗಲು ಅರ್ಹನಾಗತಕ್ಕುದಲ್ಲ.

(6) ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು ಅಥವಾ ಅಪೆಕ್ಸ್ ಸಹಕಾರ ಬ್ಯಾಂಕು ಅಥವಾ ನಿಯಮಿಸಬಹುದಾದಂಥ ಇತರ ವರ್ಗಗಳ ಸಹಕಾರ ಬ್ಯಾಂಕುಗಳ ಸಮಿತಿಗಳಲ್ಲಿ ವ್ಯಕ್ತಿ ಸದಸ್ಯರ ಯಾರೇ ಪ್ರತಿನಿಧಿಯು ಇರತಕ್ಕುದಲ್ಲ.

1. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಸೇರಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(7) ಸಮಿತಿಯ ಯಾವೊಬ್ಬ ಸದಸ್ಯನು ಈ ಪ್ರಕರಣದಲ್ಲಿ ನಮೂದಿಸಿದ ಅನರ್ಹತೆಗಳಲ್ಲಿ ಯಾವುದೇ ಒಂದಕ್ಕೆ ಗುರಿಯಾಗಿದ್ದನೆ ಅಥವಾ ಗುರಿಯಾಗಿರುವನೇ ಎಂಬ ಯಾವುದೇ ಪ್ರಶ್ನೆಯನ್ನು ರಿಜಿಸ್ಟ್ರಾರನು ಸಂಬಂಧಪಟ್ಟ ವ್ಯಕ್ತಿಗೆ ಸುನಾವಣೆಯ ಸೂಕ್ತ ಅವಕಾಶವನ್ನು ನೀಡಿದ ತರುವಾಯ ನಿರ್ಧರಿಸತಕ್ಕುದು.

[1][(8) ಸಹಕಾರ ಸಂಘದ ಸಮಿತಿಯ ಯಾರೇ ಸದಸ್ಯನು ಅವನ ಅಧಿಕಾರ ಅವಧಿಯಲ್ಲಿ,-

(ಎ) ಅವನು (1), (2) ಮತ್ತು (5)ನೇ ಉಪ-ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುವೇ ಅನರ್ಹತೆಗಳಿಗೊಳಪಟ್ಟರೆ; ಅಥವಾ

(ಬಿ) ಅವನು, ಈ ಅಧಿನಿಯಮದ ನಿಯಮಗಳ ಅಥವಾ ಸಹಕಾರ ಸಂಘದ ಉಪವಿಧಿಗಳ ಉಪಬಂಧಗಳನ್ನು ಉಲ್ಲಂಘಿಸಿ ಮೋಸದಿಂದ ಅಥವಾ ಪೂರ್ಣ ನಿರ್ಲಕ್ಷ್ಯದಿಂದ ಅಥವಾ ಮಂಜೂರಾತಿಯ ಅಗತ್ಯವಿರುವಾಗ, ಸಹಕಾರ ಸಂಘದ ಸಮಿತಿಯ ಮಂಜೂರಾತಿ ಇಲ್ಲದೆ ಅಥವಾ ಸಹಕಾರ ಸಂಘದ ಅಥವಾ ಅದರ ಸಮಿತಿಯ ನಿರ್ಣಯಗಳಿಗೆ ವಿರುದ್ಧವಾಗಿ ಅಥವಾ ಸಹಕಾರ ಸಂಘದ ಹಿತಾಸಕ್ತಿಗೆ ಬಾಧಕವಾಗುವಂತೆ ಯಾವುದೇ ರೀತಿಯಲ್ಲಿ ವರ್ತಿಸಿದ್ದರೆ ಅಥವಾ ವರ್ತಿಸುತ್ತಿದ್ದರೆ; ಅಥವಾ

(ಸಿ) ಅವನು ನಿರಂತರವಾಗಿ ಈ ಅಧಿನಿಯಮದ ನಿಯಮಗಳ ಅಥವಾ ಉಪವಿಧಿಗಳ ಮೇರೆಗೆ ಹೊರಡಿಸಲಾದ ನಿರ್ದೇಶಗಳ ಅಥವಾ ಆದೇಶಗಳ ವಿರುದ್ಧವಾಗಿ ವರ್ತಿಸಿದ್ದರೆ ಅಥವಾ ವರ್ತಿಸುತ್ತಿದ್ದರೆ; ಅಥವಾ

(ಡಿ) ಅವನು ತನ್ನ ಕರ್ತವ್ಯಗಳನ್ನು ತೃಪ್ತಿಕರವಾಗಿ ನಿರ್ವಹಿಸುತ್ತಿಲ್ಲದಿದ್ದರೆ, ರಿಜಿಸ್ಟ್ರಾರನು ತನಗೆ ಬಂದ ವರದಿಯ ಮೇರೆಗೆ ಅಥವಾ ಅನ್ಯಥಾ ಅಂತಹ ಸದಸ್ಯನನ್ನು ಆದೇಶದ ಮೂಲಕ ತೆಗೆದುಹಾಕಬಹುದು ಮತ್ತು ಈ ಉಪ-ಪ್ರಕರಣದ (ಎ), (ಬಿ), (ಸಿ) ಮತ್ತು (ಡಿ) ಖಂಡಗಳಲ್ಲಿ ಹೇಳಿರುವ ವಿಷಯಗಳ ಬಗ್ಗೆ ಅಂಥ ಆದೇಶದಲ್ಲಿ ನಿರ್ದಿಷ್ಟ ಪಡಿಸಬಹುದಾದಂತೆ ಐದು ವರ್ಷಗಳಿಗೆ ಮೀರದಂಥ ಅವಧಿಯವರೆಗೆ ಸಹಕಾರ ಸಂಘದ ಯಾವುದೇ ಪದವನ್ನು ಹೊಂದದಂತೆ ಅವನನ್ನು ಅನರ್ಹಗೊಳಿಸಬಹುದು:

ಪರಂತು, ಯಾರ ವಿರುದ್ಧ ಈ ಆದೇಶವನ್ನು ಮಾಡಲಾಗಿದೆಯೋ ಆ ವ್ಯಕ್ತಿಗೆ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶ ನೀಡಿದ ಹೊರತು ಈ ಉಪ-ಪ್ರಕರಣದ ಮೇರೆಗೆ ಯಾವ ಆದೇಶವನ್ನು ಮಾಡತಕ್ಕುದಲ್ಲ.

(9) (8)ನೇ ಉಪ-ಪ್ರಕರಣದ ಮೇರೆಗೆ ಮಾಡಿದ ಆದೇಶದ ಒಂದು ಪ್ರತಿಯನ್ನು ಸಂಬಂಧಪಟ್ಟ ಸದಸ್ಯನಿಗೆ ಮತ್ತು ಸಹಕಾರ ಸಂಘಕ್ಕೆ ಕಳುಹಿಸತಕ್ಕುದು.][1]

[2][29 ಡಿ xxx][2] ][3]

[1][**29ಇ. ಸಮಿತಿಯ ಸದಸ್ಯರ ಪದದಲ್ಲಿ ಉಂಟಾಗುವ ಆಕಸ್ಮಿಕ ಖಾಲಿ ಸ್ಥಾನವನ್ನು ಭರ್ತಿಮಾಡುವುದು:-** ಸಹಕಾರ ಸಂಘದ ಸಮಿತಿಯ ಸದಸ್ಯರ ಪದದಲ್ಲಿ ಮರಣ, ರಾಜೀನಾಮೆ, ವಜಾಮಾಡುವಿಕೆ ಅಥವಾ ಇತರ ಕಾರಣದಿಂದ ಉಂಟಾಗುವ ಯಾವುದೇ ಖಾಲಿ ಸ್ಥಾನವನ್ನು ಅಂಥ ಸಂಘದ ಉಪ ವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ರೀತಿಯಲ್ಲಿ ಭರ್ತಿ ಮಾಡತಕ್ಕುದು.

**29ಎಫ್. ಅಧ್ಯಕ್ಷ, ಸಭಾಧ್ಯಕ್ಷ, ಉಪಾಧ್ಯಕ್ಷ ಅಥವಾ ಉಪಸಭಾಧ್ಯಕ್ಷ ಮುಂತಾದವರ ಚುನಾವಣೆ:-** (1) ಪ್ರತಿಯೊಂದು ಸಹಕಾರ ಸಂಘವು ಈ ಅಧಿನಿಯಮದ ಉಪಬಂಧಗಳು, ನಿಯಮಗಳು ಅಥವಾ ಉಪ ವಿಧಿಗಳಿಗನುಸಾರವಾಗಿ ಚುನಾಯಿತರಾದಂಥ ಒಬ್ಬ ಅಧ್ಯಕ್ಷ ಅಥವಾ ಚೇರ್ ಪರ್ಸನ್, ಉಪಾಧ್ಯಕ್ಷ ಅಥವಾ ವೈಸ್ ಚೇರ್ಮನ್ ಮತ್ತು ಇತರ ಪದಾಧಿಕಾರಿಗಳನ್ನು ಹೊಂದಿರತಕ್ಕುದು.

(2) ಅಧ್ಯಕ್ಷ ಅಥವಾ ಚೇರ್‌ಪರ್ಸನ್, ಸಂಘದ ಸಮಿತಿಯ ಮತ್ತು ಅದರ ಉಪ ಸಮಿತಿಯ ಸಭೆಗಳನ್ನು ಹಾಗೂ ಸಂಘದ ಸಾಮಾನ್ಯ ಸಭೆಯ ಅಧ್ಯಕ್ಷತೆ ವಹಿಸತಕ್ಕುದು.

(3) ರಾಜೀನಾಮೆ, ಮರಣ ಅಥವಾ ವಜಾಮಾಡುವಿಕೆ ಅಥವಾ ಇತರೆ ಕಾರಣದಿಂದ ಅಧ್ಯಕ್ಷ ಅಥವಾ ಚೇರ್ ಪರ್ಸನ್‌ರ ಹುದ್ದೆಯು ಖಾಲಿಯಾಗಿದ್ದ ಪಕ್ಷದಲ್ಲಿ ಉಪಾಧ್ಯಕ್ಷ ಅಥವಾ ಸಂದರ್ಭಾನುಸಾರ ವೈಸ್ ಚೇರ್‌ಪರ್ಸನ್ ಅವರು, ಸದಸ್ಯನು ಅಧ್ಯಕ್ಷ ಅಥವಾ ಚೇರ್ ಪರ್ಸನ್‌ರಾಗಿ ಆಯ್ಕೆಯಾಗುವ ತನಕ ಅಧ್ಯಕ್ಷ ಅಥವಾ ಚೇರ್ ಪರ್ಸನರ ಕರ್ತವ್ಯಗಳನ್ನು ನಿರ್ವಹಿಸತಕ್ಕುದು.

(4) ಮುಖ್ಯ ಕಾರ್ಯನಿರ್ವಾಹಕನು ಸಾಮಾನ್ಯ ಚುನಾವಣೆಯ ನಂತರ ಸಮಿತಿಯು ರಚನೆಯಾದ ಅಥವಾ ಹಾಗೆಂದು ಭಾವಿಸಲಾದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಮತ್ತು ಅಧ್ಯಕ್ಷ ಅಥವಾ ಚೇರ್ ಪರ್ಸನ್, ಉಪಾಧ್ಯಕ್ಷ ಅಥವಾ ವೈಸ್ ಚೇರಮನ್ ನ ಅಧಿಕಾರಾವಧಿಯು ಮುಗಿಯುವ ನಿಕಟ ಮೊದಲು ಅಧ್ಯಕ್ಷ ಅಥವಾ ಚೇರ್ ಪರ್ಸನ್, ಉಪಾಧ್ಯಕ್ಷ ಅಥವಾ

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

ವೈಸ್‌ಚೇರ್‌ಪರ್ಸನ್, ಮತ್ತು ಸಹಕಾರ ಸಂಘದ ಉಪವಿಧಿಗಳ ಮೇರೆಗೆ ಚುನಾಯಿಸಬೇಕಾದಂಥ ಅಧ್ಯಕ್ಷ ಅಥವಾ ಚೇರ್ ಪರ್ಸನ್, ಉಪಾಧ್ಯಕ್ಷ ಅಥವಾ ವೈಸ್ ಚೇರ್ ಪರ್ಸನ್ ಮತ್ತು ಇತರ ಪದಾಧಿಕಾರಿಗಳನ್ನು ಚುನಾಯಿಸುವ ಉದ್ದೇಶಕ್ಕಾಗಿ ನಿಯಮಿತ ರೀತಿಯಲ್ಲಿ ಎಲ್ಲ [1][ಸದಸ್ಯರ][1] ಸಭೆಯನ್ನು ಕರೆಯತಕ್ಕುದು. ಅಧ್ಯಕ್ಷ ಅಥವಾ ಚೇರ್ ಪರ್ಸನ್, ಉಪಾಧ್ಯಕ್ಷ ಅಥವಾ ಚೇರ್‌ಮನ್ ಸ್ಥಾನಕ್ಕೆ ಅಭ್ಯರ್ಥಿಯಾಗಿರದ [1][ಸದಸ್ಯನನ್ನು][1] ಅಂತಹ ಸಭೆಯ ಅಧ್ಯಕ್ಷತೆ ವಹಿಸಲು ಆಯ್ಕೆ ಮಾಡತಕ್ಕುದು:

ಪರಂತು, ಸಹಕಾರ ಸಂಘದ ನೋಂದಣಿಯ ನಂತರ ನಡೆದ ಮೊದಲ ಮಹಾ ಸಭೆಯಲ್ಲಿ ಆಯ್ಕೆಯಾದ ಮೊದಲ ಸಮಿತಿಯ ಸದಸ್ಯರು ಅಧ್ಯಕ್ಷ ಅಥವಾ ಚೇರ್‌ಪರ್ಸನ್, ಉಪಾಧ್ಯಕ್ಷ ಅಥವಾ ವೈಸ್ ಚೇರ್‌ಪರ್ಸನ್ ಮತ್ತು ಇತರ ಪದಾಧಿಕಾರಿಗಳನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಚುನಾಯಿಸತಕ್ಕುದು.

(5) ಈ ಅಧಿನಿಯಮದ ಮೇರೆಗೆ ಉಪಬಂಧಿಸಿರುವುದನ್ನುಳಿದು ಅಧ್ಯಕ್ಷ ಅಥವಾ ಉಪಾಧ್ಯಕ್ಷ, ಛೇರ್‌ಪರ್ಸನ್ ಅಥವಾ ವೈಸ್ ಚೇರ್ ಪರ್ಸನ್ ಅಥವಾ ಇತರ ಪದಾಧಿಕಾರಿಗಳು ಐದು ವರ್ಷಗಳ ಅವಧಿಗೆ ಪದವನ್ನು ಹೊಂದಿರತಕ್ಕುದು.

(6) ಮುಖ್ಯ ಕಾರ್ಯನಿರ್ವಾಹಕನು, ಅಧ್ಯಕ್ಷ ಅಥವಾ ಚೇರ್‌ಪರ್ಸನ್, ಉಪಾಧ್ಯಕ್ಷ ಅಥವಾ ವೈಸ್ ಚೇರಪರ್ಸನ್ ಅಥವಾ ಇತರ ಪದಾಧಿಕಾರಿಗಳ ಹುದ್ದೆಯಲ್ಲಿ ಆಕಸ್ಮಿಕ ರಿಕ್ತತೆ ಉಂಟಾದಾಗ ಅಂಥ ರಿಕ್ತತೆಯನ್ನು ಭರ್ತಿ ಮಾಡುವ ಉದ್ದೇಶಕ್ಕಾಗಿ, ಸಮಿತಿಯ ಚುನಾಯಿತ [1][ಸದಸ್ಯರ][1] ಒಂದು ಸಭೆಯನ್ನು ಕರೆಯತಕ್ಕುದು, ಮತ್ತು (4)ನೇ ಉಪ-ಪ್ರಕರಣದ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕುದು.

(7) ಮುಖ್ಯ ಕಾರ್ಯನಿರ್ವಾಹಕನು, ಸಭೆಯ ದಿನಾಂಕದಿಂದ ಮೂರು ದಿನಗಳೊಳಗೆ, ಸಭೆಯನ್ನು ನಡೆಸಿದ ಬಗ್ಗೆ ಮತ್ತು ಸಭೆಯ ನಡವಳಿಗಳ ಒಂದು ಪ್ರತಿಯನ್ನು ರಿಜಿಸ್ಟ್ರಾರನಿಗೆ ಕಳುಹಿಸತಕ್ಕುದು.

(8) ಮುಖ್ಯ ಕಾರ್ಯನಿರ್ವಾಹಕನು (4) ಮತ್ತು (6)ನೇ ಉಪ-ಪ್ರಕರಣಗಳಿಗನುಸಾರವಾಗಿ ಸಭೆಯನ್ನು ಕರೆಯದಿದ್ದರೆ, ರಿಜಿಸ್ಟ್ರಾರ್ ಅಥವಾ ಹಾಗೆ ಮಾಡಲು ಅವನಿಂದ ಅಧಿಕೃತನಾದ ಯಾರೇ ವ್ಯಕ್ತಿಯು ಸದರಿ ಉಪ-ಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಿದ ಉದ್ದೇಶಗಳಿಗಾಗಿ ಸಭೆಯನ್ನು ಕರೆಯತಕ್ಕುದು.][1]

[2][**29ಜಿ. ಮುಖ್ಯ ಕಾರ್ಯನಿರ್ವಾಹಕನ ನೇಮಕ:-** (1) ಪ್ರತಿ ಸಹಕಾರ ಸಂಘಕ್ಕೆ ಒಬ್ಬ ಮುಖ್ಯ ಕಾರ್ಯನಿರ್ವಾಹಕನು ಇರತಕ್ಕುದು, ಅವನನ್ನು 128ಎ ಪ್ರಕರಣದ ಉಪಬಂಧಗಳಿಗೊಳಪಟ್ಟು ಸಂಘದಿಂದ ನೇಮಕ ಮಾಡತಕ್ಕುದು ಮತ್ತು ವಜಾಗೊಳಿಸಬಹುದಾಗಿರತಕ್ಕುದು:

ಪರಂತು,-

(i) [3][ನಿಯಮಿಸಬಹುದಾದಂಥ ನಿಯಮಗಳಿಗೊಳಪಟ್ಟು, ನೆರವು ಪಡೆದ ಸಂಘದ ಸಂದರ್ಭದಲ್ಲಿ][3] ಸರ್ಕಾರ ಅಥವಾ ರಿಜಿಸ್ಟ್ರಾರ್‌ನು ಮುಖ್ಯಕಾರ್ಯನಿರ್ವಾಹಕನನ್ನು ನೇಮಕ ಮಾಡುವ ಮತ್ತು ತೆಗೆದುಹಾಕುವ ಅಧಿಕಾರವನ್ನು ಹೊಂದಿರತಕ್ಕುದು; ಮತ್ತು

(ii) [3][ಇತರ ಸಂದರ್ಭಗಳಲ್ಲಿ][3] ಅಂಥ ಸಂಘವು ಐದು ವರ್ಷಗಳಿಗೆ ಕಡಿಮೆ ಇಲ್ಲದ ಅವಧಿಗೆ ಮುಖ್ಯ ಕಾರ್ಯನಿರ್ವಾಹಕನನ್ನು ನೇಮಕ ಮಾಡುವಂತೆ ಕೋರಿದಲ್ಲಿ ಸರ್ಕಾರ ಅಥವಾ ರಿಜಿಸ್ಟ್ರಾರನು ಮುಖ್ಯಕಾರ್ಯನಿರ್ವಾಹಕನನ್ನು ನೇಮಿಸಬಹುದು ಮತ್ತು ಅಂಥ ಮುಖ್ಯ ಕಾರ್ಯನಿರ್ವಾಹಕನನ್ನು ವಜಾ ಮಾಡಬಹುದು.

1. 2000ರ ಅಧಿನಿಯಮ ಸಂಖ್ಯೆ 13ರ ಮೂಲಕ 26.2.2000 ದಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 27.10.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಪ್ರತಿಯೋಜಿಸಲಾಗಿದೆ.

(2) ಸರ್ಕಾರ ಅಥವಾ ರಿಜಿಸ್ಟ್ರಾರನು ಸಹಕಾರ ಸಂಘಕ್ಕೆ ಮುಖ್ಯ ಕಾರ್ಯನಿರ್ವಾಹಕನನ್ನು ನೇಮಕ ಮಾಡಿದ ತರುವಾಯ, ಸಂಘದಿಂದ ನೇಮಕಗೊಂಡ ಮುಖ್ಯಕಾರ್ಯನಿರ್ವಾಹಕನು ಅವನನ್ನು ಯಾವುದೇ ಹೆಸರಿನಿಂದ ಕರೆಯಲಾಗಿರಲಿ, ಮುಖ್ಯ ಕಾರ್ಯನಿರ್ವಾಹಕನಾಗಿರುವುದು ನಿಂತುಹೋಗತಕ್ಕುದು.

(3) ಮುಖ್ಯ ಕಾರ್ಯನಿರ್ವಾಹಕನ ಸಂಬಳ ಮತ್ತು ಇತರ ಸೇವಾ ಷರತ್ತುಗಳು-

(i) ಅವನು ರಾಜ್ಯ ಸರ್ಕಾರದ ನೌಕರನಾಗಿದ್ದಲ್ಲಿ ರಾಜ್ಯ ಸರ್ಕಾರದಿದ ಹಾಗೆ ಅನುಮೋದಿತವಾದಂತೆ ಇರತಕ್ಕುದು; ಮತ್ತು

(ii) ಇತರ ಸಂದರ್ಭಗಳಲ್ಲಿ, ರಿಜಿಸ್ಟ್ರಾರರಿಂದ ಅನುಮೋದನೆ ಪಡೆದಂತೆ ಇರತಕ್ಕುದು:

ಪರಂತು, ಸಹಕಾರ ಸಂಘಗಳ ಯಾವುದೇ ವರ್ಗಕ್ಕೆ ಸಾಮಾನ್ಯವಾದ ಮುಖ್ಯ ಕಾರ್ಯನಿರ್ವಾಹಕರ ಹುದ್ದೆಗಾಗಿ ಒಂದು ವೃಂದವನ್ನು 128ಎ ಪ್ರಕರಣದ ಮೇರೆಗೆ ಸೃಜಿಸಲಾಗಿದ್ದರೆ, ಅಂಥ ಹುದ್ದೆಗೆ ನೇಮಕಗೊಂಡ ವ್ಯಕ್ತಿಗಳ ಮತ್ತು ಅಂಥ ಸೇವೆಯನ್ನು ಸೃಜಿಸುವ ಮೊದಲೇ ನೇಮಕಗೊಂಡ ವ್ಯಕ್ತಿಗಳನ್ನು ಒಳಗೊಂಡಂತೆ ಅವರ ನೌಕರಿಭರ್ತಿ, ನೇಮಕಾತಿ ಮತ್ತು ಇತರ ಸೇವಾ ಷರತ್ತುಗಳಿಗೆ ಆ ಪ್ರಕರಣದ ಉಪ ಬಂಧಗಳು ಮತ್ತು ಆ ಸಂಬಂಧದಲ್ಲಿ ಮಾಡಲಾದ ವಿನಿಯಮಗಳು ಅನ್ವಯವಾಗತಕ್ಕುದು.

(4) ಮುಖ್ಯ ಕಾರ್ಯ ನಿರ್ವಾಹಕನು ಸಂಘದ ಮುಖ್ಯ ಆಡಳಿತಾಧಿಕಾರಿಯಾಗಿರತಕ್ಕುದು ಮತ್ತು ಸಮಿತಿಯ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣಕ್ಕೆ ಮತ್ತು ಉಪ-ವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಇತರ ಷರತ್ತುಗಳು ಮತ್ತು ನಿಬಂಧನೆಗಳಿಗೊಳಪಟ್ಟು,-

(ಎ) ಸಂಘದ ಎಲ್ಲ ನೌಕರರ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣಕ್ಕೆ ಜವಾಬ್ದಾರನಾಗಿರತಕ್ಕುದು ಮತ್ತು ಸಂಘದ ದಿನನಿತ್ಯದ ನಿರ್ವಹಣೆ ಮತ್ತು ವ್ಯವಹಾರಕ್ಕೆ ಜವಾಬ್ದಾರನಾಗಿರತಕ್ಕುದು;

(ಬಿ) ಸಂಘದ ಅಧಿಕೃತ ಮತ್ತು ಸಾಮಾನ್ಯ ವ್ಯವಹಾರಗಳನ್ನು ನಡೆಸತಕ್ಕುದು;

(ಸಿ) ರಾಜ್ಯ ಸರ್ಕಾರಕ್ಕೆ ಬಾಕಿ ಇರುವ ಮತ್ತು ಸರ್ಕಾರದ ಖಾತರಿಯ ಮೇಲೆ ಪಡೆದ ಸಾಲಗಳ ಮತ್ತು ಇತರ ಸಾಲಗಳ ಮರುಪಾವತಿಗೆ ವ್ಯವಸ್ಥೆ ಮಾಡತಕ್ಕುದು ಮತ್ತು ಇದರ ಸಂಬಂಧದಲ್ಲಿ ವರದಿಯನ್ನು ರಿಜಿಸ್ಟ್ರಾರರಿಗೆ ಕಳುಹಿಸತಕ್ಕುದು;

(ಡಿ) ಉಪವಿಧಿಗಳ ಉಪಬಂಧಗಳಿಗನುಸಾರವಾಗಿ ಬ್ಯಾಂಕ್ ಲೆಕ್ಕಗಳನ್ನು ನಿರ್ವಹಿಸಲು ಜವಾಬ್ದಾರನಾಗಿರತಕ್ಕುದು ಮತ್ತು ನಿಗದಿತ ಸುರಕ್ಷಿತ ಅಭಿರಕ್ಷೆಗೆ ವ್ಯವಸ್ಥೆಗಳನ್ನು ಮಾಡತಕ್ಕುದು;

(ಇ) ಸಂಘಕ್ಕಾಗಿ ಮತ್ತು ಅದರ ಪರವಾಗಿ ಸಹಕಾರ ಸಂಘದ ಎಲ್ಲ ದಸ್ತಾವೇಜುಗಳಿಗೆ ಸಹಿ ಹಾಕತಕ್ಕುದು ಮತ್ತು ಅನುಪ್ರಮಾಣಿಸತಕ್ಕುದು;

(ಎಫ್) ಸಹಕಾರ ಸಂಘದ ಎಲ್ಲ ದಾಖಲೆಗಳು ಮತ್ತು ದಾಸ್ತಾವೇಜುಗಳ ಅಭಿರಕ್ಷಕನಾಗಿರತಕ್ಕುದು ಮತ್ತು ಸಂಘದ ಲೆಕ್ಕಪತ್ರಗಳು ಮತ್ತು ವಿವಿಧ ಪುಸ್ತಕಗಳು ಮತ್ತು ದಾಖಲೆಗಳ ಮತ್ತು ಅಧಿನಿಯಮದ ಉಪಬಂಧಗಳು, ನಿಯಮಗಳು ಮತ್ತು ಉಪ ವಿಧಿಗಳಿಗನುಸಾರವಾಗಿ ಮತ್ತು ರಿಜಿಸ್ಟ್ರಾರರು ಅಥವಾ ಸಹಕಾರ ಲೆಕ್ಕದ ನಿರ್ದೇಶಕರು ನಿರ್ದೇಶಿಸಿದಂತೆ ಸರಿಯಾದ ನಿರ್ವಹಣೆಗೆ ನಿಯತಕಾಲಿತ ವಿವರ ಪಟ್ಟಿಗಳ ಮತ್ತು ವರದಿಗಳ ಸರಿಯಾದ ನಿರ್ವಹಣೆ ಮತ್ತು ಅವುಗಳ ಸಕಾಲಿಕ ಸಲ್ಲಿಕೆಗೆ ವ್ಯವಸ್ಥೆ ಮಾಡತಕ್ಕುದು;

(ಜಿ) ಅಧ್ಯಕ್ಷ ಅಥವಾ ಚೇರ್‌ಪರ್ಸನ್ ರೊಂದಿಗೆ ಸಮಾಲೋಚಿಸಿ ಮಹಾಸಭೆ, ವ್ಯವಸ್ಥಾಪನಾ ಸಮಿತಿ ಮತ್ತು ಉಪ ಸಮಿತಿಯ ಸಭೆಯನ್ನು ನಡೆಸಲು ಜವಾಬ್ದಾರನಾಗಿರತಕ್ಕುದು ಮತ್ತು ಅಂಥ ಸಭೆಗಳ ನಡವಳಿಕೆಗಳನ್ನು ದಾಖಲು ಮಾಡತಕ್ಕುದು ಮತ್ತು ನಿರ್ವಹಿಸತಕ್ಕುದು;

(ಹೆಚ್) ಕಾರ್ಯನೀತಿಗಳು ಮತ್ತು ಗುರಿಗಳು ಮತ್ತು ಯೋಜನೆಯ ರಚನೆಯಲ್ಲಿ ಸಮಿತಿಗೆ ನೆರವು ನೀಡತಕ್ಕುದು;

(ಐ) ಸಮಿತಿಗೆ ಅಗತ್ಯವಾದ ಮಾಹಿತಿ ಒದಗಿಸುವುದು ಮತ್ತು ಸಂಘದ ಪ್ರಕಾರ್ಯಗಳು ಮತ್ತು ಕಾರ್ಯಾಚರಣೆಗಳ ಬಗ್ಗೆ ಮೌಲ್ಯ ನಿರ್ಣಯ ಮಾಡತಕ್ಕುದು;

(ಜೆ) ಸಹಕಾರ ಸಂಘದ ಪರವಾಗಿ ದಾವೆ ಹೂಡತಕ್ಕುದು ಮತ್ತು ದಾವೆಗೆ ಗುರಿಯಾಗತಕ್ಕುದು;

(ಕೆ) ಅಧಿನಿಯಮದ, ನಿಯಮಗಳ ಅಥವಾ ಉಪ-ವಿಧಿಗಳ ಮೇರೆಗೆ ಅವನಿಗೆ ವಿಧಿಸಿದ ಅಥವಾ ಅವನಿಗೆ ಪ್ರಧಾನ ಮಾಡಿದಂಥ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕುದು ಮತ್ತು ಅಧಿಕಾರಗಳನ್ನು ಚಲಾಯಿಸತಕ್ಕುದು.

[1][(4ಎ) ಮುಖ್ಯ ಕಾರ್ಯನಿರ್ವಹಣಾಧಿಕಾರಿಯು, ಸಂಘದ ಮತ್ತು ಅದರ ಸಮಿತಿಯ ಪ್ರತಿಯೊಂದು ಸಭೆಗೆ ಹಾಜರಾಗಲು ಮತ್ತು ಚರ್ಚೆಯಲ್ಲಿ ಪಾಲ್ಗೊಳ್ಳಲು ಹಾಗೂ ಯಾವುದೇ ಗೊತ್ತುವಳಿಯನ್ನು ಮಂಡಿಸಲು ಅಥವಾ ಮತ ಚಲಾಯಿಸಲು ಹಕ್ಕುಳ್ಳವನಾಗಿರತಕ್ಕುದು.][1]

1. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಸೇರಿಸಲಾಗಿದೆ.

(5) (4)ನೇ ಉಪ-ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅಧಿಕಾರಗಳು ಮತ್ತು ಕರ್ತವ್ಯಗಳ ಜೊತೆಗೆ ಅಪೆಕ್ಸ್ ಸಂಘದ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು-

(ಎ) ಸಮಿತಿಯ ಅನುಮೋದನೆಯೊಂದಿಗೆ ಮತ್ತು ಅಧಿನಿಯಮ, ಉಪ-ಬಂಧಗಳು, ನಿಯಮಗಳು ಮತ್ತು ಉಪ ವಿಧಿಗಳಿಗೊಳಪಟ್ಟು ಅಗತ್ಯ ಸಿಬ್ಬಂದಿಯನ್ನು ನೇಮಕ ಮಾಡಿಕೊಳ್ಳಲು ಅಧಿಕಾರ ಹೊಂದಿರತಕ್ಕುದು;

(ಬಿ) ಸಂಘದ ಉದ್ಯೋಗಿಗಳ ಅಧಿಕಾರಗಳು, ಕಾರ್ಯಗಳು ಮತ್ತು ಕರ್ತವ್ಯಗಳನ್ನು ನಿರ್ದಿಷ್ಟಪಡಿಸತಕ್ಕುದು;

(ಸಿ) ಸಂಘದ ಮೂಲಕ ಅಥವಾ ಸಂಘದ ವಿರುದ್ಧ ಅಥವಾ ಅನ್ಯಥಾ ಸಂಘದ ವ್ಯವಹಾರಗಳಿಗೆ ಸಂಬಂಧಪಡುವ ಯಾವುದೇ ದಾವೆ, ಅಥವಾ ಕಾನೂನು ವ್ಯವಹರಣೆಯನ್ನು ನಡೆಸಬಹುದು, ಸಮರ್ಥಿಸಿಕೊಳ್ಳಬಹುದು, ರಾಜೀ ಮಾಡಿಕೊಳ್ಳಬಹುದು ಅಥವಾ ಕೈಬಿಡಬಹುದು ಮತ್ತು ಅಧ್ಯಕ್ಷರ ಅಥವಾ ಛೇರ್ ಪರ್ಸನ್‌ರೊಂದಿಗೆ ಸಮಾಲೋಚಿಸಿ ಸಂಘದಿಂದ ಅಥವಾ ಸಂಘದ ವಿರುದ್ಧ ಮಾಡಲಾದ ಯಾವುದೇ ಕ್ಲೇಮುಗಳ ಅಥವಾ ಬೇಡಿಕೆಗಳ ಸಂದಾಯಕ್ಕಾಗಿ ಯಥೋಚಿತ ಕಾಲಾವಕಾಶವನ್ನು ನೀಡಬಹುದು.

(ಡಿ) ಸಮಿತಿಯು ಹೊರಡಿಸಿದ ಮಾರ್ಗದರ್ಶನಗಳಿಗೊಳಪಟ್ಟು, ಒಪ್ಪಂದಗಳನ್ನು ಮಾಡಿಕೊಳ್ಳಬಹುದು ಮತ್ತು ಕರಾರುಗಳನ್ನು ಬರೆದು ಕೊಡಬಹುದು;

(ಇ) ಅವನ ಯಾವುದೇ ಅಧಿಕಾರಗಳನ್ನು ಯಾರೇ ನೌಕರನಿಗೆ ಪ್ರತ್ಯಾಯೋಜಿಸಬಹುದು.

(6) ಪ್ರಾಥಮಿಕ ಸಹಕಾರ ಸಂಘಗಳ ಸಂಬಂಧದಲ್ಲಿ, ಮುಖ್ಯ ಕಾರ್ಯನಿರ್ವಾಹಕನು, ಅವನಿಂದ ಅಧಿಕೃತವಾಗಿ ದೃಢೀಕರಿಸಿದ [1][ಸ್ವೀಕೃತಿ ಮತ್ತು ಸಂದಾಯ ಲೆಕ್ಕದ ಪ್ರತಿಯನ್ನು][1] ಪ್ರತಿ ತಿಂಗಳು ರಿಜಿಸ್ಟ್ರಾರನಿಗೆ ಮತ್ತು ಹಣಕಾಸು ಬ್ಯಾಂಕ್‌ಗೆ ಅಥವಾ ಕ್ರೆಡಿಟ್ ಏಜೆನ್ಸಿಗೆ ತರುವಾಯದ ತಿಂಗಳ ಹದಿನೈದು ದಿನಗಳೊಳಗೆ ಕಳುಹಿಸತಕ್ಕುದು. ಅವನು ಮಹಾಸಭೆಗಳ ಮತ್ತು ಸಮಿತಿ ಸಭೆಗಳ ವ್ಯವಹರಣೆಗಳ ಒಂದು ದೃಢೀಕೃತ ಪ್ರತಿಯನ್ನು ಅಂತಹ ಸಭೆಗಳ ದಿನಾಂಕಗಳಿಂದ ಹದಿನೈದು ದಿನಗಳೊಳಗಾಗಿ ರಿಜಿಸ್ಟ್ರಾರ್ ಮತ್ತು ಹಣಕಾಸು ಬ್ಯಾಂಕ್ ಅಥವಾ ಕ್ರೆಡಿಟ್ ಏಜೆನ್ಸಿಗೆ ಕಳುಹಿಸಿಕೊಡತಕ್ಕುದು.][3]

[2][**30. ಸಮಿತಿಯ ರದ್ದಿಯಾತಿ:-** (1) ರಿಜಿಸ್ಟ್ರಾರನು,-

(ಎ) ಸಹಕಾರ ಸಂಘದ ಸಮಿತಿಯು, ಈ ಅಧಿನಿಯಮ ಅಥವಾ ನಿಯಮಗಳು ಅಥವಾ ಉಪವಿಧಿಗಳ ಮೂಲಕ ಅದಕ್ಕೆ ವಿಧಿಸಿದ ಕರ್ತವ್ಯಗಳ ನಿರ್ವಹಣೆಯಲ್ಲಿ ಮತ್ತೆ ಮತ್ತೆ ತಪ್ಪು ಮಾಡುತ್ತಿದೆ ಅಥವಾ ಅವುಗಳನ್ನು ಉಪೇಕ್ಷಿಸುತ್ತಿದೆ ಅಥವಾ ಸಹಕಾರ ಸಂಘದ ಅಥವಾ ಅದರ ಸದಸ್ಯರ ಹಿತಾಸಕ್ತಿಗಳಿಗೆ ಬಾಧಕವಾಗುವ ಯಾವುದೇ ಕಾರ್ಯವನ್ನು ಎಸಗಿದೆ ಅಥವಾ ಅನ್ಯಥಾ ಸರಿಯಾಗಿ ಕಾರ್ಯನಿರ್ವಹಿಸುತ್ತಿಲ್ಲವೆಂದು;

(ಬಿ) ಸಹಕಾರ ಸಂಘವು, ಈ ಅಧಿನಿಯಮ, ನಿಯಮಗಳು ಅಥವಾ ಉಪವಿಧಿಗಳ ಉಪಬಂಧಗಳು ಅಥವಾ ರಾಜ್ಯ ಸರ್ಕಾರವು ಅಥವಾ ರಿಜಿಸ್ಟ್ರಾರನು [3][30ಬಿ ಪ್ರಕರಣದ ಮೇರೆಗೆ ಹೊರಡಿಸಿದ ನಿರ್ದೇಶನವನ್ನೂ ಒಳಗೊಂಡಂತೆ][3] ಯಾವುದೇ ಆದೇಶ ಅಥವಾ ನಿರ್ದೇಶನಕ್ಕೆ ಅನುಸಾರವಾಗಿ ಕಾರ್ಯನಿರ್ವಹಿಸುತ್ತಿಲ್ಲ ವೆಂದು ಅಭಿಪ್ರಾಯಪಟ್ಟರೆ, ರಿಜಿಸ್ಟ್ರಾರನು, ಆ ಸಮಿತಿಗೆ ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ತಿಳಿಸಲು ಅವಕಾಶ ನೀಡಿದ ತರುವಾಯ ಲಿಖಿತ ಆದೇಶದ ಮೂಲಕ ಸದರಿ ಸಮಿತಿಯನ್ನು ತೆಗೆದುಹಾಕಬಹುದು ಮತ್ತು ರಿಜಿಸ್ಟ್ರಾರನು ನಿರ್ದಿಷ್ಟಪಡಿಸಬಹುದಾದ [4][ಆರು ತಿಂಗಳಿಗೆ][4] ಮೀರದಂಥ ಅವಧಿಗಾಗಿ ಸಂಘದ ವ್ಯವಹಾರವನ್ನು ನಿರ್ವಹಿಸಲು ಒಬ್ಬ ಆಡಳಿತಗಾರನನ್ನು ನೇಮಿಸಬಹುದು. [1][ರಿಜಿಸ್ಟ್ರಾರರು, [5][XXXX][5] ಬರಹದಲ್ಲಿ ಕಾರಣಗಳನ್ನು ದಾಖಲು ಮಾಡಿ ಅಂಥ ನೇಮಕಾತಿಯ ಅವಧಿಯನ್ನು ಒಮ್ಮೆಗೆ ಆರು ತಿಂಗಳುಗಳ ಮತ್ತಷ್ಟು ಅವಧಿಗೆ ವಿಸ್ತರಿಸಬಹುದು ಮತ್ತು ಯಾವುದೇ ಸಂದರ್ಭದಲ್ಲೂ ಅಂಥ ವಿಸ್ತರಣೆಯು ಸರಾಸರಿ ಒಂದು ವರ್ಷವನ್ನು ಮೀರತಕ್ಕುದಲ್ಲ.][1]

(2) ಹಾಗೆ ನೇಮಕಗೊಂಡ ಆಡಳಿತಗಾರನು ರಿಜಿಸ್ಟ್ರಾರನ ನಿಯಂತ್ರಣಕ್ಕೆ ಮತ್ತು ಅವನು ಕಾಲಕಾಲಕ್ಕೆ ನೀಡಬಹುದಾದಂಥ ಸೂಚನೆಗಳಿಗೆ ಒಳಪಟ್ಟು, ಸಮಿತಿಯ ಅಥವಾ ಸಹಕಾರ ಸಂಘದ ಯಾರೇ [4][ಪದಾಧಿಕಾರಿಯ][4] ಎಲ್ಲ ಅಥವಾ ಯಾವುವೇ ಪ್ರಕಾರ್ಯಗಳನ್ನು ನಿರ್ವಹಿಸತಕ್ಕುದು ಮತ್ತು ಅವನು ಸಂಘದ ಹಿತಾಸಕ್ತಿಯಲ್ಲಿ ಅವಶ್ಯವೆಂದು ಪರಿಗಣಿಸಬಹುದಾದಂಥ ಕ್ರಮವನ್ನು ಕೈಗೊಳ್ಳತಕ್ಕುದು.

1. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಪ್ರತಿಯೋಜಿಸಲಾಗಿದೆ.
2. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಸೇರಿಸಲಾಗಿದೆ.
4. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಬಿಟ್ಟುಬಿಡಲಾಗಿದೆ.

(3) ಆಡಳಿತಗಾರನು, ತನ್ನ ಪದಾವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ, ಈ ಅಧಿನಿಯಮ, ನಿಯಮಗಳು ಮತ್ತು ಸಹಕಾರ ಸಂಘದ ಉಪವಿಧಿಗಳಿಗೆ ಅನುಸಾರವಾಗಿ ಚುನಾವಣೆಯನ್ನು ನಡೆಸಿದ ತರುವಾಯ ಹೊಸ ಸಮಿತಿಯನ್ನು ರಚಿಸಲು ವ್ಯವಸ್ಥೆ ಮಾಡತಕ್ಕುದು:

[1][ಪರಂತು, ಅಂಥ ಚುನಾವಣೆಯಲ್ಲಿ (1)ನೇ ಉಪ ಪ್ರಕರಣದ ಮೇರೆಗೆ ತೆಗೆದು ಹಾಕಲಾದ ಯಾವೊಬ್ಬ ಸದಸ್ಯನು, ಈ ಅಧಿನಿಯಮ, ನಿಯಮ ಅಥವಾ ಉಪ ವಿಧಿಗಳಲ್ಲಿ ಏನೇ ಅಡಕವಾಗಿದ್ದಾಗ್ಯೂ, ಸದರಿ ಉಪಪ್ರಕರಣದ ಮೇರೆಗೆ ಸಮಿತಿಯ ರದ್ದಿಯಾತಿಯ ದಿನಾಂಕದಿಂದ ನಾಲ್ಕು ವರ್ಷಗಳ ಅವಧಿಗಾಗಿ ಸಮಿತಿಯ ಒಬ್ಬ ಸದಸ್ಯನಾಗಿ ಚುನಾಯಿತನಾಗಲು ಅರ್ಹನಾಗಿರತಕ್ಕುದಲ್ಲ.][1]

[2][xxx][2]

(4) ಸಹಕಾರ ಸಂಘದ ಸಂಬಂಧದಲ್ಲಿ (1)ನೇ ಉಪಪ್ರಕರಣದ ಮೇರೆಗೆ ಯಾವುದೇ ಕ್ರಮವನ್ನು ಕೈಗೊಳ್ಳುವುದಕ್ಕೆ ಮುಂಚೆ, ರಿಜಿಸ್ಟ್ರಾರನು, ಅದು ಯಾವ ಹಣಕಾಸು ಬ್ಯಾಂಕುಗಳಿಗೆ ಋಣಿಯಾಗಿದೆಯೋ ಅವುಗಳೊಂದಿಗೆ ಸಮಾಲೋಚಿಸತಕ್ಕುದಲ್ಲ.

(5) ಈ ಅಧಿನಿಯಮದಲ್ಲಿ ಏನೇ ಇದ್ದರೂ ರಿಜಿಸ್ಟ್ರಾರನು, ಸಹಕಾರ ಬ್ಯಾಂಕಿನ ಸಂಬಂಧದಲ್ಲಿ, ಸಾರ್ವಜನಿಕ ಹಿತಾಸಕ್ತಿಯಲ್ಲಿ ಅಥವಾ ಸಹಕಾರ ಬ್ಯಾಂಕಿನ ವ್ಯವಹಾರವನ್ನು ಠೇವಣಿದಾರರ ಹಿತಾಸಕ್ತಿಗೆ ಬಾಧಕವಾಗದ ರೀತಿಯಲ್ಲಿ ನಡೆಸಲು ಅಥವಾ ಆ ಸಹಕಾರ ಬ್ಯಾಂಕಿನ ಸರಿಯಾದ ವ್ಯವಸ್ಥಾಪನೆಯನ್ನು ಸುನಿಶ್ಚಿತಗೊಳಿಸಲು ಆ ಸಹಕಾರ ಬ್ಯಾಂಕಿನ ಸಮಿತಿಯನ್ನು ತೆಗೆದುಹಾಕಬೇಕೆಂದು ಭಾರತದ ರಿಸರ್ವ್ ಬ್ಯಾಂಕು ಲಿಖಿತದಲ್ಲಿ ಅಗತ್ಯಪಡಿಸಿದರೆ ಲಿಖಿತ ಆದೇಶದ ಮೂಲಕ ಅದನ್ನು ಹಾಗೆ ತೆಗೆದುಹಾಕತಕ್ಕುದು ಮತ್ತು ಭಾರತೀಯ ರಿಸರ್ವ್ ಬ್ಯಾಂಕು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದ [2][xxx][2] ಅವಧಿಗಾಗಿ ಸಹಕಾರ ಬ್ಯಾಂಕಿನ ವ್ಯವಹಾರಗಳ ವ್ಯವಸ್ಥಾಪನೆಗೆ ಆಡಳಿತಗಾರನನ್ನು ನೇಮಿಸತಕ್ಕುದು.][2]

[2][30ಎ. xxx ][2]

[3][**30ಬಿ. ಸಾರ್ವಜನಿಕ ಹಿತದೃಷ್ಟಿಯಿಂದ ನಿರ್ದೇಶನ ನೀಡಲು ಅಧಿಕಾರ:-** (1) ಸಾರ್ವಜನಿಕ ಹಿತದೃಷ್ಟಿಯಿಂದ ಅಥವಾ ರಾಜ್ಯ ಸರ್ಕಾರವು ಅನುಮೋದಿಸಿದ ಅಥವಾ ಕೈಗೊಂಡ ಸಹಕಾರ ಮತ್ತು ಇತರ ಅಭಿವೃದ್ಧಿ ಕಾರ್ಯಕ್ರಮಗಳು ಸೂಕ್ತ ರೀತಿಯಲ್ಲಿ ಕಾರ್ಯರೂಪಕ್ಕೆ ಬರುವುದನ್ನು ಸುನಿಶ್ಚಿತಗೊಳಿಸುವ ಉದ್ದೇಶಕ್ಕಾಗಿ ಅಥವಾ ಸಾಮಾನ್ಯವಾಗಿ ಸಹಕಾರ ಸಂಘಗಳ ವ್ಯವಹಾರಗಳ ಸೂಕ್ತ ನಿರ್ವಹಣೆಯನ್ನು ಸುನಿಶ್ಚಿತಗೊಳಿಸುವ ಸಲುವಾಗಿ ಅಥವಾ ಅದರ ಸದಸ್ಯರ ಅಥವಾ ಠೇವಣಿದಾರರ ಅಥವಾ ಅದಕ್ಕೆ ಸಾಲ ಕೊಡುವವರ ಹಿತಾಸಕ್ತಿಗಳಿಗೆ ಬಾಧಕವಾಗುವ ರೀತಿಯಲ್ಲಿ ಸಹಕಾರ ಸಂಘದ ವ್ಯವಹಾರಗಳು ನಡೆಯುವುದನ್ನು ತಡೆಯುವುದಕ್ಕಾಗಿ ಅಥವಾ ವಿಶೇಷವಾಗಿ, ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳಿಗೆ ಸೇರಿದ ಸದಸ್ಯರುಗಳ ಹಿತಾಸಕ್ತಿಯನ್ನು ಸಂರಕ್ಷಿಸುವುದಕ್ಕಾಗಿ ಮತ್ತು ಸಹಕಾರ ಸಂಘಗಳ ಅಡಿಯಲ್ಲಿಯ ಸೇವೆಗಳಲ್ಲಿ ಅಂಥ ಜಾತಿಗಳು, ಬುಡಕಟ್ಟುಗಳು ಅಥವಾ ವರ್ಗಗಳಿಗೆ ಸೇರಿದ ವ್ಯಕ್ತಿಗಳಿಗೆ ಮೀಸಲಾತಿಯನ್ನು ಖಚಿತಪಡಿಸುವುದಕ್ಕಾಗಿ, ಸಾಮಾನ್ಯವಾಗಿ ಸಹಕಾರ ಸಂಘಗಳ ಯಾವುದೇ ವರ್ಗಕ್ಕೆ ಅಥವಾ ವಿಶೇಷವಾಗಿ ಯಾವುದೇ ಸಹಕಾರ ಸಂಘಕ್ಕೆ ಅಥವಾ ಸಂಘಗಳಿಗೆ ನಿರ್ದೇಶನಗಳನ್ನು ನೀಡುವುದು ಅವಶ್ಯಕವೆಂದು ರಾಜ್ಯ ಸರ್ಕಾರಕ್ಕೆ ಮನವರಿಕೆಯಾದರೆ, ಅದು ಕಾಲಕಾಲಕ್ಕೆ ನಿರ್ದೇಶನವನ್ನು ನೀಡಬಹುದು ಮತ್ತು ಅಂಥ ಎಲ್ಲ ಸಹಕಾರ ಸಂಘಗಳು ಅಥವಾ ಸಂಬಂಧಪಟ್ಟ ಸಹಕಾರ ಸಂಘವು ಅಂಥ ನಿರ್ದೇಶನಗಳನ್ನು ಪಾಲಿಸಲು ಬದ್ಧವಾಗಿರತಕ್ಕುದು.

(2) ರಾಜ್ಯ ಸರ್ಕಾರವು, (1)ನೇ ಉಪ ಪ್ರಕರಣದ ಅಡಿಯಲ್ಲಿ ನೀಡಿದ ಯಾವುದೇ ನಿರ್ದೇಶನಗಳನ್ನು ಮಾರ್ಪಾಡು ಮಾಡಬಹುದು ಅಥವಾ ರದ್ದುಪಡಿಸಬಹುದು ಮತ್ತು ಅಂಥ ನಿರ್ದೇಶನಗಳನ್ನು ಮಾರ್ಪಾಟು ಮಾಡುವಲ್ಲಿ ಅಥವಾ ರದ್ದುಪಡಿಸುವಲ್ಲಿ, ಅದು, ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಷರತ್ತುಗಳನ್ನು ವಿಧಿಸಬಹುದು.

(3) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂತೆ, ಅಂಥ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು ರಿಜಿಸ್ಟ್ರಾರ್ ಅವರಿಗೆ ಈ ಪ್ರಕರಣದ ಅಡಿಯಲ್ಲಿ ತನ್ನ ಅಧಿಕಾರಗಳನ್ನು ಪ್ರತ್ಯಾಯೋಜಿಸಬಹುದು.][3]

[4][**31. [5][ರಿಜಿಸ್ಟ್ರಾರ್‌ನಿಂದ][5] ವಿಶೇಷಾಧಿಕಾರಿಯ ನೇಮಕಾತಿ:-** (1) ಅನರ್ಹತೆ, ರಾಜೀನಾಮೆ ಅಥವಾ ಮರಣ ಅಥವಾ ಸದಸ್ಯನನ್ನು ತೆಗೆದುಹಾಕುವಿಕೆ ಅಥವಾ ಯಾವುದೇ ಇತರ ಕಾರಣದಿಂದ ಕೋರಂ ಆಗಲು ಸಮಿತಿಯ ಸದಸ್ಯರುಗಳ ಸಂಖ್ಯೆಯು ಅಗತ್ಯಕ್ಕಿಂತ ಕಡಿಮೆಯಾದ ಕಾರಣದಿಂದ ಒಂದು ಸಹಕಾರ ಸಂಘವು, ಅಧಿನಿಯಮದ ಉಪಬಂಧಗಳು, ನಿಯಮಗಳು ಅಥವಾ ಉಪ ವಿಧಿಗಳಿಗನುಸಾರವಾಗಿ ಕಾರ್ಯನಿರ್ವಹಿಸುತ್ತಿಲ್ಲವೆಂದು ರಿಜಿಸ್ಟ್ರಾರರು ಅಭಿಪ್ರಾಯಪಟ್ಟಲ್ಲಿ, ಅವರು, ಈ ಅಧಿನಿಯಮ, ನಿಯಮ, ನಿಯಮಗಳು ಅಥವಾ ಉಪವಿಧಿಗಳಲ್ಲಿ ಏನೇ ಒಳಗೊಂಡಿದ್ದರೂ, ಆದೇಶದ ಮೂಲಕ, ಅಂತಹ ಸಹಕಾರ ಸಂಘಕ್ಕೆ ಆರು ತಿಂಗಳಿಗಿಂತ ಹೆಚ್ಚಿಲ್ಲದಂಥ ಅವಧಿಗೆ ಒಬ್ಬ ವಿಶೇಷಾಧಿಕಾರಿಯನ್ನು ನೇಮಕ ಮಾಡಬಹುದು. [2][ರಿಜಿಸ್ಟ್ರಾರನು, [6][xxxx][6] ಬರಹದಲ್ಲಿ ಕಾರಣಗಳನ್ನು ಮಾಡಿ ಅಂಥ

1. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಸೇರಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
3. 2000ದ ಅಧಿನಿಯಮ ಸಂಖ್ಯೆ 13ರ ಮೂಲಕ 26.2.2000 ದಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
5. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಸೇರಿಸಲಾಗಿದೆ.
6. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಬಿಟ್ಟುಬಿಡಲಾಗಿದೆ.

ನೇಮಕಾತಿಯ ಅವಧಿಯನ್ನು ಒಮ್ಮೆಗೆ ಆರು ತಿಂಗಳುಗಳ ಹೆಚ್ಚಿನ ಅವಧಿಗೆ ವಿಸ್ತರಿಸಬಹುದು. ಮತ್ತು ಯಾವುದೇ ಸಂದರ್ಭದಲ್ಲೂ ಅಂಥ ವಿಸ್ತರಣೆಯ ಸರಾಸರಿ ಒಂದು ವರ್ಷವನ್ನು ಮೀರತಕ್ಕದ್ದಲ್ಲ.

(2) (1)ನೇ ಉಪ-ಪ್ರಕರಣದ ಮೇರೆಗೆ ಆದೇಶವನ್ನು ಮಾಡುವುದಕ್ಕೂ ಮೊದಲು, ರಿಜಿಸ್ಟ್ರಾರನು ಅಂಥ ಆದೇಶದ ಮೂಲಕ ಬಾಧಿತವಾಗುವ ಯಾವುದೇ ಸಹಕಾರ ಸಂಘಕ್ಕೆ ಅಥವಾ ವ್ಯಕ್ತಿಗೆ ಯಾವುದಾದರೂ ಆಕ್ಷೇಪಣೆ ಇದ್ದರೆ ಅದನ್ನು ತಿಳಿಸುವ ಅವಕಾಶವನ್ನು ನೀಡುವ ಅವಶ್ಯಕತೆ ಇರತಕ್ಕುದಲ್ಲ.

(3) (1)ನೇ ಉಪ-ಪ್ರಕರಣದ ಮೇರೆಗೆ ಹೊರಡಿಸಲಾದ ಆದೇಶದ ತರುವಾಯ:-

(ಎ) ಸಹಕಾರ ಸಂಘದ ಸಮಿತಿಯ ಸದಸ್ಯರು ಇದ್ದಲ್ಲಿ, ತಮ್ಮ ಪದಗಳನ್ನು ಖಾಲಿ ಮಾಡತಕ್ಕುದು ಮತ್ತು ಅವರು ಪದಗಳನ್ನು ಖಾಲಿ ಮಾಡಿರುವುದಾಗಿ ಭಾವಿಸತಕ್ಕುದು; ಮತ್ತು

(ಬಿ) ವಿಶೇಷಾಧಿಕಾರಿಯು ಸಹಕಾರ ಸಂಘದ ವ್ಯವಹಾರಗಳ ಪ್ರಭಾರವನ್ನು ವಹಿಸಿಕೊಂಡಿರುವುದಾಗಿ ಭಾವಿಸತಕ್ಕುದು.

(4) ವಿಶೇಷಾಧಿಕಾರಿಯು, ರಿಜಿಸ್ಟ್ರಾರರ ನಿಯಂತ್ರಣಕ್ಕೆ ಒಳಪಟ್ಟು, ಸಹಕಾರ ಸಂಘದ ಸಮಿತಿಯ ಅಥವಾ ಸಹಕಾರ ಸಂಘದ ಯಾರೇ ಪದಾಧಿಕಾರಿಯ ಎಲ್ಲ ಅಧಿಕಾರಗಳನ್ನು ಚಲಾಯಿಸತಕ್ಕುದು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸತಕ್ಕುದು ಮತ್ತು ಸಹಕಾರ ಸಂಘದ ಹಿತದೃಷ್ಟಿಯಿಂದ ಅಗತ್ಯವಾಗಬಹುದಾದಂಥ ಎಲ್ಲ ಕ್ರಮಗಳನ್ನು ಕೈಗೊಳ್ಳತಕ್ಕುದು.

(5) ವಿಶೇಷಾಧಿಕಾರಿಯು, ತನ್ನ ಅಧಿಕಾರಾವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ಸಂಘದ ಹೊಸ ಸಮಿತಿಯ ರಚನೆಗೆ ಅದರ ಉಪವಿಧಿಗಳಿಗನುಸಾರವಾಗಿ ವ್ಯವಸ್ಥೆ ಮಾಡತಕ್ಕುದು.

**31ಎ. ಸಹಕಾರ ಸಂಘಗಳ ದಾಖಲೆಗಳು ಮತ್ತು ಸ್ವತ್ತುಗಳ ಸ್ವಾಧೀನತೆಯನ್ನು ಒಪ್ಪಿಸುವುದು:-** (1) ಒಂದು ಹೊಸ ಸಮಿತಿ ಚುನಾಯಿತಗೊಂಡಿದ್ದರೆ ಅಥವಾ ರಿಜಿಸ್ಟ್ರಾರನಿಂದ ಆಡಳಿತಾಧಿಕಾರಿಯು ಅಥವಾ ವಿಶೇಷಾಧಿಕಾರಿಯು ನೇಮಕಗೊಂಡಿದ್ದರೆ ಅಥವಾ ಸಹಕಾರ ಸಂಘವನ್ನು ಪರಿಸಮಾಪನೆಗೊಳಿಸುವ ಆದೇಶ ಮಾಡಿದ್ದು ಈ ಅಧಿನಿಯಮದ ಮೇರೆಗೆ ಒಬ್ಬ ಪರಿಸಮಾಪಕನು ನೇಮಕಗೊಂಡಿದ್ದರೆ ಮತ್ತು ಅಂಥ ಹೊಸ ಸಮಿತಿ, ಆಡಳಿತಾಧಿಕಾರಿ ಅಥವಾ ವಿಶೇಷಾಧಿಕಾರಿ ಅಥವಾ ಪರಿಸಮಾಪಕನಿಗೆ, ಅಂಥ ಹಿಂದಿನ ಸಮಿತಿಯು ಅಥವಾ ರದ್ದುಗೊಳಿಸಿದ ಸಮಿತಿಯು ಅಥವಾ ಯಾವುದನ್ನು ವಹಿಸಿಕೊಳ್ಳುವಂತೆ ಅಥವಾ ಪರಿಸಮಾಪನಗೊಳಿಸುವಂತೆ ಆದೇಶಿಸಲಾಗಿದೆಯೋ ಆ ಯಾವುದೇ ಸಂಘದ ಸಮಿತಿಯು ಅಥವಾ ಸಂಘದ ಸ್ವತ್ತುಗಳನ್ನು ಮತ್ತು ದಾಖಲೆಗಳ್ನು ತನ್ನ ಸ್ವಾಧೀನದಲ್ಲಿಟ್ಟುಕೊಳ್ಳಲು ಹಕ್ಕಿಲ್ಲದ ಯಾರೇ ವ್ಯಕ್ತಿಯು, ಸಹಕಾರ ಸಂಘದ ಪುಸ್ತಕಗಳು, ಲೆಕ್ಕಗಳು, ದಾಖಲೆಗಳು, ಠೇವಣಿಗಳು, ನಗದು ಮತ್ತು ಇತರ ಸ್ವತ್ತುಗಳು, ಚರಾಸ್ತಿಗಳು ಅಥವಾ ಸ್ಥಿರಾಸ್ತಿಗಳನ್ನು (ಈ ಪ್ರಕರಣದಲ್ಲಿ ಸಂಘದ ದಾಖಲೆಗಳು ಮತ್ತು ಸ್ವತ್ತಗಳು ಎಂದು ಉಲ್ಲೇಖಿಸಲಾಗಿದೆ) ಸ್ವಾಧೀನಕ್ಕೆ ತೆಗೆದುಕೊಳ್ಳುವುದನ್ನು ಪ್ರತಿರೋಧಿಸಿದ್ದರೆ ಅಥವಾ ತಡೆದರೆ, ರಿಜಿಸ್ಟ್ರಾರನು ಹೊಸ ಸಮಿತಿಯಿಂದ ಅಥವಾ ಆಡಳಿತಾಧಿಕಾರಿಯಿಂದ ಅಥವಾ ವಿಶೇಷಾಧಿಕಾರಿಯಿಂದ ಅಥವಾ ಪರಿಸಮಾಪಕದಿಂದ ಸ್ವೀಕರಿಸಿದ ಅರ್ಜಿಯ ಮೇಲೆ, ತಮಗೆ ಮನದಟ್ಟಾದರೆ, ನಿಯಮಿಸಲಾದ ನಮೂನೆಯಲ್ಲಿ ಕಾರಣಗಳನ್ನು ವಿವರಿಸಿ, ಸಹಕಾರ ಸಂಘಗಳ ಹಿರಿಯ ಇನ್ಸ್‌ಪೆಕ್ಟರ್ ಸ್ಥಾನದಿಂದ ಕಡಿಮೆಯಿಲ್ಲದ ದರ್ಜೆಯ ತನ್ನ ಯಾರೇ ಅಧೀನ ಅಧಿಕಾರಿಯನ್ನು ಸಹಕಾರ ಸಂಘಗಳ ಅಂಥ ದಾಖಲೆಗಳನ್ನು ಮತ್ತು ಸ್ವತ್ತುಗಳನ್ನು ಇಟ್ಟಿರುವ ಯಾವುದೇ ಆವರಣವನ್ನು ಅಥವಾ ಸ್ಥಳವನ್ನು ಪ್ರವೇಶಿಸಲು, ಶೋಧಿಸಲು ಅಥವಾ ಮುರಿದು ತೆಗೆಯಲು ಮತ್ತು ಸಹಕಾರ ಸಂಘದ ಯಾವುದೇ ಅಂಥ ದಾಖಲೆಗಳನ್ನು ಮತ್ತು ಸ್ವತ್ತುಗಳನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಲು ಅಧಿಕಾರ ನೀಡತಕ್ಕುದು ಮತ್ತು ಅವುಗಳನ್ನು ಹೊಸ ಸಮಿತಿಗೆ, ಆಡಳಿತಾಧಿಕಾರಿಗೆ ಅಥವಾ ವಿಶೇಷಾಧಿಕಾರಿಗೆ ಅಥವಾ ಪರಿಸಮಾಪಕನಿಗೆ ಒಪ್ಪಿಸುವಂತೆ ಮಾಡತಕ್ಕುದು.

(2) (1)ನೇ ಉಪನಿಯಮದ ಮೇರೆಗಿನ ವ್ಯರಹರಣೆಗಳ ಉದ್ದೇಶಕ್ಕಾಗಿ ಮೇಲೆ ಹೇಳಿದ ಅಧಿಕಾರ ನೀಡಿಕೆಯು ಅದ ಸಂಬಂಧಪಟ್ಟ ದಾಖಲೆಗಳು ಮತ್ತು ಸ್ವತ್ತುಗಳು ಸಹಕಾರ ಸಂಘಕ್ಕೆ ಸೇರಿದ್ದು ಎಂಬುದಕ್ಕೆ ನಿರ್ಣಾಯಕ ಸಾಕ್ಷ್ಯವಾಗಿರತಕ್ಕುದು.

(3) ಶೋಧನೆಗಳಿಗೆ ಮತ್ತು ಸ್ವಾಧೀನಕ್ಕೆ ತೆಗೆದುಕೊಳ್ಳುವುದಕ್ಕೆ ಸಂಬಂಧಪಟ್ಟ 1973ರ ದಂಡ ಪ್ರಕ್ರಿಯಾ ಸಂಹಿತೆಯ 100, 101 ಮತ್ತು 102ನೇ ಪ್ರಕರಣದ ಉಪಬಂಧಗಳು ಈ ಪ್ರಕರಣದ ಮೇರೆಗಿನ ಶೋಧನೆಗೆ ಮತ್ತು ಸ್ವಾಧೀನಕ್ಕೆ ತೆಗೆದುಕೊಳ್ಳುವುದಕ್ಕೆ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕುದು.

(4) ಈ ಅಧಿನಿಯಮದ ಮೇರೆಗಿನ ತಪಾಸಣೆ, ವಿಚಾರಣೆ ಅಥವಾ ಲೆಕ್ಕ ಪರಿಶೋಧನೆಯ ಉದ್ದೇಶಕ್ಕಾಗಿ ಅಥವಾ ಮುಖ್ಯ ಕಾರ್ಯನಿರ್ವಾಹಕನು ಅಥವಾ ಯಾರೇ ಇತರ ನೌಕರನು ಹುದ್ದೆಯ ಪ್ರಭಾರವನ್ನು ವಹಿಸಿಕೊಳ್ಳುವುದಕ್ಕಾಗಿ ಸಹಕಾರ ಸಂಘದ ಅಗತ್ಯ ದಾಖಲೆಗಳನ್ನು ಮತ್ತು ಸ್ವತ್ತುಗಳನ್ನು ದೊರೆಯುವಂತೆ ಮಾಡದಿದ್ದರೆ (1), (2) ಮತ್ತು (3)ನೇ ಉಪ-ಪ್ರಕರಣಗಳ ಉಪಬಂಧಗಳು, ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕುದು.][4]

## ಅಧ್ಯಾಯ-V

### ಸಹಕಾರ ಸಂಘಗಳ ವಿಶೇಷಾಧಿಕಾರಗಳು

**32. ಕೆಲವು ಸ್ವತ್ತುಗಳ ಮೇಲೆ ಸಹಕಾರ ಸಂಘದ ಪ್ರಥಮ ಭಾರ:-** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಅದರ ಭೂ ಕಂದಾಯದ ಅಥವಾ ಭೂ ಕಂದಾಯದಂತೆ ವಸೂಲೀಯವಾದ ಯಾವುದೇ ಹಣದ ಸಂಬಂಧದಲ್ಲಿ ಸರ್ಕಾರದ ಯಾವುದೇ ಆದ್ಯ ಕ್ಲೇಮಿಗೊಳಪಟ್ಟು, ಯಾರೇ ಸದಸ್ಯನಿಂದ ಅಥವಾ ಹಿಂದಿನ ಸದಸ್ಯನಿಂದ ಅಥವಾ ಮೃತ ಸದಸ್ಯನಿಂದ ಸಹಕಾರ ಸಂಘಕ್ಕೆ ಸಲ್ಲಬೇಕಾಗಿರುವ ಯಾವುದೇ ಋಣ ಅಥವಾ ಬಾಕಿ ಉಳಿದ ತಗಾದೆಗೆ ಸಂಬಂಧಿಸಿದಂತೆ ಸಂದರ್ಭಾನುಸಾರ ಅಂಥ ಸದಸ್ಯನಿಗೆ ಅಥವಾ ಹಿಂದಿನ ಸದಸ್ಯನಿಗೆ ಸೇರಿದ ಅಥವಾ ಮೃತ ಸದಸ್ಯನ ಎಸ್ಟೇಟಿನ ಭಾಗವಾಗಿರುವ ಬೆಳೆಗಳು ಮತ್ತು ಇತರ ಕೃಷಿ ಉತ್ಪನ್ನಗಳು, ದನಗಳು, ದನಗಳ ಮೇವು, ಕೃಷಿ ಅಥವಾ ಕೈಗಾರಿಕೆಯ ಉಪಕರಣಗಳು ಅಥವಾ ಯಂತ್ರ ಸಾಮಗ್ರಿಗಳು, ತಯಾರಿಕೆಯ ಕಚ್ಚಾ ಸಾಮಗ್ರಿಗಳು ಮತ್ತು ಅಂಥ ಕಚ್ಚಾ ಸಾಮಗ್ರಿಯಿಂದ ತಯಾರಿಸಲಾದ ಉತ್ಪಾದನೆಗಳು

- ಇವುಗಳ ಮೇಲೆ ಪ್ರಥಮ ಭಾರವಾಗಿರತಕ್ಕುದು.

(2) ಭಾರವನ್ನು ಹೊಂದಿರುವ ಸಹಕಾರ ಸಂಘದ ಲಿಖಿತ ಪೂರ್ವಾನುಮತಿಯನ್ನು ಪಡೆದ ಹೊರತು ಯಾರೇ ವ್ಯಕ್ತಿಯು, (1)ನೇ ಉಪಕರಣದ ಮೇರೆಗೆ ಭಾರಕ್ಕೆ ಒಳಪಟ್ಟಿರುವ ಸ್ವತ್ತನ್ನು ವರ್ಗಾಯಿಸತಕ್ಕುದಲ್ಲ.

(3) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, (2)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ಮಾಡಿದ ಸ್ವತ್ತಿನ ಯಾವುದೇ ವರ್ಗಾವಣೆಯು ಶೂನ್ಯವಾಗತಕ್ಕುದು.

(4) (1)ನೇ ಉಪಪ್ರಕರಣದ ಮೇರೆಗೆ ಸೃಜಿಸಲಾದ ಭಾರವು, ಸಂಘವು ಮಂಜೂರು ಮಾಡಿದ ಸಾಲದ ತರುವಾಯ [1][ಕರ್ನಾಟಕ ಭೂ ಸುಧಾರಣಾ ಸಾಲಗಳ ಅಧಿನಿಯಮ, 1963 ಅಥವಾ ಕರ್ನಾಟಕ ಕೃಷಿಕರ ಸಾಲಗಳ ಅಧಿನಿಯಮ, 1963 ಇದರ ಮೇರೆಗೆ ಮಂಜೂರು ಮಾಡಿದ ಸಾಲದಿಂದ ಉದ್ಭವಿಸಿದ ಸರ್ಕಾರದ ಯಾವುದೇ ಕ್ಲೇಮಿಗೆ ಲಭ್ಯವಾಗತಕ್ಕುದು.

**33. ಕೆಲವು ಸಹಕಾರ ಸಂಘಗಳಿಂದ ಸಾಲ ಪಡೆದ ಸದಸ್ಯರ ಒಡೆತನದಲ್ಲಿರುವ ಅಥವಾ ಸದಸ್ಯರು ಗೇಣಿದಾರರಾಗಿ ಧಾರಣ ಮಾಡಿರುವ ಭೂಮಿಗಳ ಮೇಲಣ ಭಾರ:-** (1) ಈ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಅಧಿನಿಯಮದಲ್ಲಿ ಏನೇ ಇದ್ದರೂ,-

(i) ತಾನು ಸದಸ್ಯನಾಗಿರುವ ಸಂಘಕ್ಕೆ ಸಾಲಕ್ಕಾಗಿ ಅರ್ಜಿ ಸಲ್ಲಿಸುವ ಯಾರೇ ವ್ಯಕ್ತಿಯು, ಅವನು ಯಾವುದೇ ಭೂಮಿಯ ಒಡೆತನ ಹೊಂದಿದ್ದರೆ ಅಥವಾ ಗೇಣಿದಾರನಾಗಿ ಯಾವುದೇ ಭೂಮಿಯನ್ನು ಧಾರಣ ಮಾಡಿದ್ದರೆ, ನಿಯಮಿಸಲಾದ ನಮೂನೆಯಲ್ಲಿ ಒಂದು ಘೋಷಣೆಯನ್ನು ಮಾಡತಕ್ಕುದು. ಅಂಥ ಘೋಷಣೆಯು, ಸಾಲದ ಅರ್ಜಿಗೆ ಅನುಸಾರವಾಗಿ ಸಂಘವು ಸದಸ್ಯನಿಗೆ ಕೊಡಬಹುದಾದ ಸಾಲದ ಸಂದಾಯದ ಬಗ್ಗೆ ಮತ್ತು ಸದಸ್ಯನಿಗೆ ಅಗತ್ಯವಾದ, ಸಂಘವು ನಿರ್ಧರಿಸಬಹುದಾದಂಥ ಗರಿಷ್ಠ ಮಿತಿಗೆ ಒಳಪಟ್ಟು ಅಂಥ ಸದಸ್ಯನಾಗಿರುವ ಅವನಿಗೆ ಸಂಘವು ನೀಡಬಹುದಾದ ಮುಂದಿನ ಎಲ್ಲಾ ಮುಂಗಡಗಳ ಬಗ್ಗೆ, ಆ ಸಾಲ ಮತ್ತು ಮುಂಗಡಗಳ ಅಂಥ ಮೊಬಲಗಿನ ಮೇಲಣ ಬಡ್ಡಿಯೊಂದಿಗೆ, ಅರ್ಜಿದಾರನು ಆ ಮೂಲಕ ಮತ್ತು ಅದರಲ್ಲಿ ನಿರ್ದಿಷ್ಟಪಡಿಸಿದ ತಾನು ಒಡೆತನ ಹೊಂದಿರುವ ಭೂಮಿಯ ಮೇಲೆ ಅಥವಾ ಗೇಣಿದಾರನಾಗಿ ತಾನು ಹೊಂದಿರುವ ಭೂಮಿಯಲ್ಲಿನ ಅವನ ಹಿತಾಸಕ್ತಿಯ ಮೇಲೆ ಭಾರವನ್ನು ಸೃಜಿಸುವುದಾಗಿ ತಿಳಿಸತಕ್ಕುದು;

(ii) (i)ನೇ ಖಂಡದ ಮೇರೆಗೆ ಮಾಡಿದ ಘೋಷಣೆಯನ್ನು ಯಾವ ಸಹಕಾರ ಸಂಘದ ಪರವಾಗಿ ಅಂಥ ಭಾರವನ್ನು ಸೃಜಿಸಲಾಗಿದೆಯೋ ಅದರ ಸಮ್ಮತಿಯಿಂದ ಸದಸ್ಯನು ಯಾವುದೇ ಸಮಯದಲ್ಲಿ ವ್ಯತ್ಯಾಸಗೊಳಿಸಬಹುದು;

(iii) ಯಾರೇ ಸದಸ್ಯನು, (1)ನೇ ಖಂಡದ ಮೇರೆಗೆ ಮಾಡಿದ ಅಥವಾ (ii)ನೇ ಖಂಡದ ಮೇರೆಗೆ ವ್ಯತ್ಯಾಸಗೊಳಿಸಿದ ಘೋಷಣೆಯಲ್ಲಿ ನಿರ್ದಿಷ್ಟಪಡಿಸಿದ ಇಡೀ ಭೂಮಿಯನ್ನು ಅಥವಾ ಆ ಭೂಮಿಯ ಯಾವುದೇ ಭಾಗವನ್ನು ಅಥವಾ ಅದರಲ್ಲಿ ಅವನ ಹಿತಾಸಕ್ತಿಯನ್ನು ಸದಸ್ಯನು ತೆಗೆದುಕೊಂಡ ಸಾಲದ ಇಡೀ ಮೊಬಲಗನ್ನು ಅದರ ಮೇಲಣ ಬಡ್ಡಿಯೊಂದಿಗೆ ಪೂರ್ಣವಾಗಿ ಸಂದಾಯಮಾಡುವವರೆಗೆ ಪರಭಾರೆ ಮಾಡತಕ್ಕುದಲ್ಲ:

ಪರಂತು, ಅಂಥ ಯಾವುದೇ ಭೂಮಿಯಲ್ಲಿನ ಬೆಳೆಯನ್ನು ಸಂಘದ ಲಿಖಿತ ಪೂರ್ವಾನುಮತಿಯನ್ನು ಪಡೆದು ಪರಭಾರೆ ಮಾಡಬಹುದು:

---

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

[1][ಮತ್ತೂ ಪರಂತು, ಸದಸ್ಯನು ಅಂಥ ಭೂಮಿಯನ್ನು ಅಥವಾ ಅದರ ಯಾವುದೇ ಭಾಗವನ್ನು ರಾಜ್ಯ ಸರ್ಕಾರದ ಅಥವಾ [2][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][2] ಹೆಸರಿಗೆ ಅಡಮಾನ ಮಾಡುವುದು ಕಾನೂನು ಸಮ್ಮತವಾಗಿರತಕ್ಕುದು:

ಮತ್ತೂ ಅಲ್ಲದೆ, ಸದಸ್ಯನೊಬ್ಬನು, ಸಾಲ ತೆಗೆದುಕೊಂಡ ಮೊಬಲಗಿನ ಒಂದು ಭಾಗವನ್ನು ಸಂದಾಯ ಮಾಡಿದ್ದರೆ, ಸಹಕಾರ ಸಂಘವು ತಾನು ಋಣಿಯಾಗಿರಬಹುದಾದ ಹಣಕಾಸು ನೀಡಿಕೆ ಬ್ಯಾಂಕಿನ ಅನುಮೋದನೆಯೊಂದಿಗೆ, ಸದಸ್ಯನ ಅರ್ಜಿಯ ಮೇಲೆ, (i)ನೇ ಖಂಡದ ಮೇರೆಗೆ ಮಾಡಲಾದ ಅಥವಾ (ii)ನೇ ಖಂಡದ ಮೇರೆಗೆ ವ್ಯತ್ಯಾಸಗೊಳಿಸಿದ ಘೋಷಣೆಯ ಮೂಲಕ ಸೃಜಿಸಿದ ಭಾರದಿಂದ, ಅದು ಸೂಕ್ತವೆಂದು ಭಾವಿಸಬಹುದಾದಂತೆ ಆ ಘೋಷಣೆಯಲ್ಲಿ ನಿರ್ದಿಷ್ಟಪಡಿಸಿದ ಭೂಮಿಯ ಅಂಥ ಭಾಗವನ್ನು ಅಥವಾ ಭೂಮಿಯಲ್ಲಿನ ಹಿತಾಸಕ್ತಿಯನ್ನು, ಸದಸ್ಯನಿಂದ ಬಾಕಿ ಇರುವ ಸಾಲದ ಮೊಬಲಗಿನ ಶಿಲ್ಕಿನ ಬಗ್ಗೆ ಭದ್ರತೆಗಾಗಿ ತಕ್ಕ ಗಮನ ನೀಡಿ ಮುಕ್ತಗೊಳಿಸಬಹುದು;][1]

(iv) (iii)ನೇ ಖಂಡದ ಉಪಬಂಧಗಳನ್ನು ಉಲ್ಲಂಘಿಸಿ ಮಾಡಲಾದ ಯಾವುದೇ ಪರಭಾರೆಯು ಶೂನ್ಯವಾಗತಕ್ಕುದು;

(v) ಭೂಕಂದಾಯದ ಅಥವಾ ಭೂಕಂದಾಯದಂತೆ ವಸೂಲೀಯವಾದ ಯಾವುದೇ ಹಣಕ್ಕೆ ಸಂಬಂಧಿಸಿದಂತೆ ಸರ್ಕಾರಕ್ಕಿರುವ ಆದ್ಯ ಕ್ಲೇಮಿಗೆ ಮತ್ತು ಸಂಘವು ಸಾಲ ಮಂಜೂರು ಮಾಡಿದ ದಿನಾಂಕಕ್ಕೆ ಮುಂಚೆ ಭೂಮಿಯನ್ನು ಅಥವಾ ಅದರಲ್ಲಿರುವ ಹಿತಾಸಕ್ತಿಯನ್ನು ಯಾವ ವ್ಯಕ್ತಿಗೆ ಪರಭಾರೆ ಮಾಡಿ, ಅದನ್ನು ಯುಕ್ತವಾಗಿ ನೋಂದಾಯಿಸಲಾಗಿದೆಯೋ ಆ ಯಾರೇ ವ್ಯಕ್ತಿಯ ಆದ್ಯ ಕ್ಲೇಮಿಗೆ ಒಳಪಟ್ಟು, ಸಾಲದ ಸಂಬಂಧದಲ್ಲಿ ಅವನಿಂದ ಬಾಕಿಯಿರುವ ಮೊಬಲಗಿಗೆ ಮತ್ತು ಅಷ್ಟರಮಟ್ಟಿಗೆ (i)ನೇ ಖಂಡದ ಮೇರೆಗೆ ಮಾಡಿದ ಅಥವಾ (ii)ನೇ ಖಂಡದ ಮೇರೆಗೆ ವ್ಯತ್ಯಾಸಗೊಳಿಸಿದ ಘೋಷಣೆಯಲ್ಲಿ ನಿರ್ದಿಷ್ಟಪಡಿಸಿರುವ ಭೂಮಿ ಅಥವಾ ಭೂಮಿಯಲ್ಲಿನ ಹಿತಾಸಕ್ತಿಯ ಮೇಲೆ, ಆ ಸಂಘವು ಮೊದಲ ಭಾರವನ್ನು ಹೊಂದಿರತಕ್ಕುದು.

(2) [1][ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರಲ್ಲಿ (1964ರ ಕರ್ನಾಟಕ ಅಧಿನಿಯಮ 12)][1] ಏನೇ ಇದ್ದರೂ,-

(i) ಸದರಿ ಅಧಿನಿಯಮದ ಮೇರೆಗೆ ಇಟ್ಟಿರುವ ಹಕ್ಕುಗಳ ದಾಖಲಾತಿಯು, (1)ನೇ ಉಪಪ್ರಕರಣದ ಮೇರೆಗೆ ಸೃಜಿಸಿದ ಭೂಮಿಯ ಅಥವಾ ಭೂಮಿಯಲ್ಲಿನ ಹಿತಾಸಕ್ತಿಯ ಮೇಲಣ ಪ್ರತಿಯೊಂದು ಭಾರದ ವಿವರಗಳನ್ನು ಸಹ ಒಳಗೊಂಡಿರತಕ್ಕುದು;

(ii) (1)ನೇ ಉಪಪ್ರಕರಣದ ಮೇರೆಗೆ ಯಾವ ಸಂಘದ ಹೆಸರಿಗೆ ಭಾರವನ್ನು ಸೃಜಿಸಲಾಗಿದೆಯೋ ಆ ಸಹಕಾರ ಸಂಘವು ಭಾರದ ವಿವರಗಳನ್ನು ಮತ್ತು ಸಾಲ ಚುಕ್ತಾ ಆದಾಗ ಆ ಭಾರವು ಕೊನೆಗೊಂಡ ವಿಷಯವನ್ನು ಡೆಪ್ಯುಟಿ ಕಮೀಷನರನಿಗೆ ಅಥವಾ ನಿಯಮಿಸಲಾದ ಅಧಿಕಾರಿಗೆ ತಿಳಿಸತಕ್ಕುದು ಮತ್ತು ಅವನು ಹಕ್ಕುಗಳ ದಾಖಲಾತಿಯಲ್ಲಿ ಅವಶ್ಯಕ ನಮೂದುಗಳನ್ನು ಮಾಡಿಸತಕ್ಕುದು;

(iii) (i)ನೇ ಮತ್ತು (ii)ನೇ ಖಂಡಗಳ ಉದ್ದೇಶಗಳನ್ನು ನೆರವೇರಿಸಲು ರಾಜ್ಯಸರ್ಕಾರವು ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

ವಿವರಣೆ: ಈ ಪ್ರಕರಣದ ಉದ್ದೇಶಕ್ಕಾಗಿ ,-

(1) 'ಭೂಮಿ' ಎಂದರೆ [1][(ಕರ್ನಾಟಕ ಭೂಕಂದಾಯ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ 12)][1] ಇದು ಅನ್ವಯವಾಗುವ ಭೂಮಿ; ಮತ್ತು

(2) 'ಸಹಕಾರ ಸಂಘ' ಎಂದರೆ ಯಾವ ಸಹಕಾರ ಸಂಘದ ಬಹುತೇಕ ಸದಸ್ಯರು ಕೃಷಿಕರಾಗಿದ್ದು, ಅದು,-

(ಎ) ತನ್ನ ಸದಸ್ಯರಿಗೆ ಸಾಲ ದೊರಕಿಸುವುದೇ ಪ್ರಾಥಮಿಕ ಉದ್ದೇಶವಾಗಿರುವ ಪತ್ತಿನ ಸಂಘವಾಗಿರುವ; ಅಥವಾ

(ಬಿ) ರಾಜ್ಯ ಸರ್ಕಾರವು ಈ ಬಗ್ಗೆ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ನಿರ್ದಿಷ್ಟಪಡಿಸಿದ ಇತರ ಯಾವುದೇ ವರ್ಗದ ಸಂಘವಾಗಿರುವ

- ಸಹಕಾರ ಸಂಘ.

**34. ಕೆಲವು ಸಂದರ್ಭಗಳಲ್ಲಿ ಸಂಘದ ಕ್ಲೇಮನ್ನು ವೇತನದಿಂದ ಕಳೆದುಕೊಳ್ಳುವುದು:-** ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಸಹಕಾರ ಸಂಘದ ಸದಸ್ಯನು, ತನ್ನ ನಿಯೋಜಕನು ತನಗೆ ಸಂದಾಯ ಮಾಡಬೇಕಾದ ಸಂಬಳ ಅಥವಾ

1. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಮಜೂರಿಯಿಂದ, ಒಪ್ಪಂದ ಪತ್ರದಲ್ಲಿ ನಿರ್ದಿಷ್ಟಪಡಿಸಬಹುದಾದ ಮೊಬಲಗನ್ನು ಕಳೆದುಕೊಳ್ಳಲು ಮತ್ತು ಹಾಗೆ ಕಳೆದುಕೊಂಡ ಮೊಬಲಗನ್ನು ಆ ಸದಸ್ಯನಿಂದ ಸಂಘಕ್ಕೆ ಸಲ್ಲಬೇಕಾದ ಯಾವುದೇ ಋಣ ಅಥವಾ ಇತರ ತಗಾದೆಯ ತೀರಿಕೆಯಲ್ಲಿ ಸಂಘಕ್ಕೆ ಸಂದಾಯಮಾಡಲು ಸಕ್ಷಮನಾಗಿರುತ್ತಾನೆಂದು ಸಂಘಕ್ಕೆ ಒಂದು ಒಪ್ಪಂದ ಪತ್ರವನ್ನು ಬರೆದುಕೊಡಬಹುದು.

(2) ಅಂಥ ಒಪ್ಪಂದಪತ್ರವನ್ನು ಬರೆದುಕೊಟ್ಟ ತರುವಾಯ ನಿಯೋಜಕನು, ಸಹಕಾರ ಸಂಘವು ಒಪ್ಪಂದಕ್ಕೆ ಅನುಸಾರವಾಗಿ ಕಳೆತಗಳನ್ನು ಮಾಡಬೇಕೆಂದು ಮತ್ತು ಹಾಗೆ ಕಳೆದ ಮೊಬಲಗನ್ನು, ಅದನ್ನು ಕಳೆದ ದಿನಾಂಕದಿಂದ ಹದಿನಾಲ್ಕು ದಿನಗಳೊಳಗೆ ಸಂಘಕ್ಕೆ ಸಂದಾಯಮಾಡಬೇಕೆಂದು ಲಿಖಿತ ಕೋರಿಕೆಯ ಮೂಲಕ ಅಗತ್ಯಪಡಿಸಿದರೆ ಮತ್ತು ಅಂಥ ಋಣ ಅಥವಾ ತಗಾದೆ ಅಥವಾ ಅದರ ಯಾವುದೇ ಭಾಗವು ಸಂದಾಯವಾಗದೆ ಉಳಿದಿರುವವರೆಗೆ, ಹಾಗೆ ಮಾಡಬಹುದು.

(3) ಈ ಪ್ರಕರಣದಲ್ಲಿರುವುದು ಯಾವುದೂ, ಸಂವಿಧಾನದ 366ನೇ ಅನುಚ್ಛೇದದಲ್ಲಿ ಪರಿಭಾಷಿಸಿರುವಂತೆ ರೈಲ್ವೆಯಲ್ಲಿ , ಗಣಿಗಳಲ್ಲಿ ಮತ್ತು ತೈಲ ಕ್ಷೇತ್ರಗಳಲ್ಲಿ ನಿಯೋಜಿತರಾದ ವ್ಯಕ್ತಿಗಳಿಗೆ ಅನ್ವಯವಾಗತಕ್ಕುದಲ್ಲ.

**35. ಸಹಕಾರ ಸಂಘದ ಷೇರುಗಳ ಅಥವಾ ಬಂಡವಾಳದಲ್ಲಿ ಸದಸ್ಯರ ಹಿತಾಸಕ್ತಿಯ ಸಂಬಂಧದಲ್ಲಿ ಭಾರ ಮತ್ತು ವಜಾವಟ್ಟು:-** ಸಹಕಾರ ಸಂಘಕ್ಕೆ ಸಲ್ಲಬೇಕಾಗಿರುವ ಋಣದ ಅಥವಾ ಬಾಕಿ ತಗಾದೆಯ ಸಂಬಂಧದಲ್ಲಿ, ಸದಸ್ಯನ ಅಥವಾ ಹಿಂದಿನ ಸದಸ್ಯನ ಷೇರು, ಅಥವಾ ಬಂಡವಾಳದಲ್ಲಿನ ಹಿತಾಸಕ್ತಿಯ ಮೇಲೆ ಅಥವಾ ಠೇವಣಿಯ ಮೇಲೆ ಅಥವಾ ಸದಸ್ಯನಿಗೆ ಅಥವಾ ಹಿಂದಿನ ಸದಸ್ಯನಿಗೆ ಸಂದಾಯಮಾಡಬೇಕಾದ ಲಾಭಾಂಶ, ಬೋನಸ್ಸು ಅಥವಾ ಲಾಭಗಳ ಮೇಲೆ ಸಹಕಾರ ಸಂಘವು ಭಾರವನ್ನು ಹೊಂದಿರತಕ್ಕುದು ಮತ್ತು ಅಂಥ ಯಾವುದೇ ಋಣ ಅಥವಾ ಬಾಕಿ ತಗಾದೆಯ ಸಂದಾಯದ ಬಗ್ಗೆ ಸದಸ್ಯನ ಲೆಕ್ಕಕ್ಕೆ ಜಮೆ ಮಾಡಿದ ಅಥವಾ ಸಂದಾಯಮಾಡಬೇಕಾದ ಯಾವುದೇ ಮೊತ್ತದಿಂದ ವಜಾವಟ್ಟು ಮಾಡಿಕೊಳ್ಳಬಹುದು:

ಪರಂತು, ಸಹಕಾರ ಸಂಘವು ಯಾವ ಹಣಕಾಸು ನೀಡಿಕೆ ಬ್ಯಾಂಕಿಗೆ ಸಂಯೋಜಿತವಾಗಿದೆಯೋ ಆ ಹಣಕಾಸು ನೀಡಿಕೆ ಬ್ಯಾಂಕು, ಆ ಹಣಕಾಸು ನೀಡಿಕೆ ಬ್ಯಾಂಕಿನಲ್ಲಿ ಸಂಘವು ಮೀಸಲು ನಿಧಿಯಾಗಿ ಇಟ್ಟ ಯಾವುದೇ ಮೊತ್ತದ ಮೇಲೆ, ಆ ಬ್ಯಾಂಕು ಸಂಘದ ಏಕೈಕ ಲೇಣೇದಾರ ಬ್ಯಾಂಕು ಆಗಿರದಿದ್ದರೆ ಭಾರವನ್ನು ಹೊಂದಿರತಕ್ಕುದಲ್ಲ ಅಥವಾ ಅಂಥ ಸಂಘದಿಂದ ಬಾಕಿ ಇರುವ ಯಾವುದೇ ಋಣದ ಬಗ್ಗೆ ಸಂಘದ ಲೆಕ್ಕಕ್ಕೆ ಜಮೆ ಮಾಡಿದ ಅಥವಾ ಸಂದಾಯಮಾಡಬೇಕಾದ ಯಾವುದೇ ಮೊತ್ತದಿಂದ ವಜಾವಟ್ಟು ಮಾಡಿಕೊಳ್ಳಲು ಹಕ್ಕು ಹೊಂದಿರತಕ್ಕುದಲ್ಲ.

**36. ಷೇರುಗಳು ಅಥವಾ ಹಿತಾಸಕ್ತಿಗಳು ಜಪ್ತಿಗೆ ಒಳಪಡತಕ್ಕುದಲ್ಲ:-** 35ನೆಯ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಸಹಕಾರ ಸಂಘದ ಬಂಡವಾಳದಲ್ಲಿರುವ ಸದಸ್ಯನ ಷೇರು ಅಥವಾ ಹಿತಾಸಕ್ತಿಯು, ಅಂಥ ಸದಸ್ಯನು ಅಥವಾ ಹಿಂದಿನ ಸದಸ್ಯನು ಮಾಡಿರುವ ಯಾವುದೇ ಋಣ ಅಥವಾ ಹೊಣೆಯ ಸಂಬಂಧದಲ್ಲಿ ನ್ಯಾಯಾಲಯದ ಯಾವುದೇ ಡಿಕ್ರಿ ಅಥವಾ ಆದೇಶದ ಮೇರೆಗೆ ಜಪ್ತಿಗೆ ಅಥವಾ ಮಾರಾಟಕ್ಕೆ ಒಳಪಡತಕ್ಕುದಲ್ಲ ಮತ್ತು ದಿವಾಳಿಗೆ ಸಂಬಂಧಿಸಿದ ಯಾವುದೇ ಕಾನೂನಿನ ಮೇರೆಗೆ ದಿವಾಳಿ ಆಸ್ತಿಕರು ಅಧಿಕಾರಿ ಅಥವಾ ರಿಸೀವರನು ಅಂಥ ಷೇರು ಅಥವಾ ಹಿತಾಸಕ್ತಿಗೆ ಹಕ್ಕು ಹೊಂದಿರತಕ್ಕುದಲ್ಲ ಅಥವಾ ಅದರ ಮೇಲೆ ಯಾವುದೇ ಕ್ಲೇಮನ್ನು ಹೊಂದಿರತಕ್ಕುದಲ್ಲ.

**37. ಕೆಲವು ತೆರಿಗೆಗಳು, ಸುಂಕಗಳು ಮತ್ತು ಫೀಜುಗಳಿಂದ ವಿನಾಯಿತಿ:-** ರಾಜ್ಯಸರ್ಕಾರವು ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೆ ಮಾಡುವುದು ಅವಶ್ಯಕವೆಂದು ಅಭಿಪ್ರಾಯಪಟ್ಟರೆ, ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ಮತ್ತು ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ ನಿರ್ಬಂಧಗಳು ಮತ್ತು ಷರತ್ತುಗಳಿಗೆ ಒಳಪಟ್ಟು, ಯಾವುದೇ ವರ್ಗದ ಸಹಕಾರ ಸಂಘಗಳ ಸಂಬಂಧದಲ್ಲಿ,-

(ಎ) ತತ್ಕಾಲದಲ್ಲಿ ಜಾರಿಯಲ್ಲಿರುವ [1][ಕರ್ನಾಟಕ][1] ಕೃಷಿ ಆದಾಯ ತೆರಿಗೆ ಅಧಿನಿಯಮ, 1957ರ (1957ರ [1][ಕರ್ನಾಟಕ][1] ಅಧಿನಿಯಮ 22) ಮೇರೆಗೆ ಸಂದಾಯ ಮಾಡಬೇಕಾದ ತೆರಿಗೆ;

[2][(ಬಿ)ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ, 1957 (1957ರ ಕರ್ನಾಟಕ ಅಧಿನಿಯಮ 25)ರ ಮೇರೆಗೆ ಸಂದಾಯ ಮಾಡಬೇಕಾದ ತೆರಿಗೆ; )][2]

(ಸಿ) ತತ್ಕಾಲದಲ್ಲಿ ಜಾರಿಯಲ್ಲಿರುವ [1][ಕರ್ನಾಟಕ][1] ಸ್ಟಾಂಪು ಅಧಿನಿಯಮ, 1957 (1957ರ [1][ಕರ್ನಾಟಕ][1] ಅಧಿನಿಯಮ 34)ರ ಮೇರೆಗೆ ಸಹಕಾರ ಸಂಘವು ಅಥವಾ ಅದರ ಅಧಿಕಾರಿ ಅಥವಾ ಸದಸ್ಯನು ಬರೆದುಕೊಟ್ಟ ಮತ್ತು ಅಂಥ ಸಂಘದ ವ್ಯವಹಾರಕ್ಕೆ ಸಂಬಂಧಿಸಿದ ಯಾವುದೇ ಲಿಖಿತದ ಅಥವಾ ಅಂಥ ಲಿಖಿತಗಳ ಯಾವುದೇ ವರ್ಗದ ಮೇಲೆ, ಅಥವಾ ಈ ಅಧಿನಿಯಮದ ಮೇರೆಗೆ ಮಾಡಿದ ಯಾವುದೇ ಐತೀರ್ಪು ಅಥವಾ ಆದೇಶದ ಸಂಬಂಧದಲ್ಲಿ ವಿಧಿಸಬಹುದಾದ ಸುಂಕಗಳು;

(ಡಿ) ತತ್ಕಾಲದಲ್ಲಿ ಜಾರಿಯಲ್ಲಿರುವ [1][ಕರ್ನಾಟಕ][1] ನ್ಯಾಯಾಲಯ ಫೀಜುಗಳು ಮತ್ತು ದಾವೆಗಳ ಮೌಲ್ಯ ನಿಗದಿ ಅಧಿನಿಯಮ, 1958ರ (1958ರ [1][ಕರ್ನಾಟಕ][1] ಅಧಿನಿಯಮ 16) ಮೇರೆಗೆ ಯಾವುದೇ ದಸ್ತಾವೇಜಿನ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಫೀಜುಗಳು;

(ಇ) ತತ್ಕಾಲದಲ್ಲಿ ಜಾರಿಯಲ್ಲಿರುವ ಭಾರತ ನೋಂದಣಿ ಅಧಿನಿಯಮ, 1908ರ (1908ರ ಕೇಂದ್ರ ಅಧಿನಿಯಮ xvi) ಮೇರೆಗೆ ಸಂದಾಯ ಮಾಡಬೇಕಾದ ಯಾವುದೇ ಫೀಜು

- ಇವುಗಳನ್ನು ಕಡಿಮೆ ಮಾಡಬಹುದು ಅಥವಾ ಇವುಗಳಿಗೆ ವಿನಾಯಿತಿ ನೀಡಬಹುದು.

---

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**38. ಕಡ್ಡಾಯ ನೋಂದಣಿಯಿಂದ ಲಿಖಿತಗಳ ವಿನಾಯಿತಿ:-** ಭಾರತ ನೋಂದಣಿ ಅಧಿನಿಯಮ, 1908ರ (1908ರ ಕೇಂದ್ರ ಅಧಿನಿಯಮ XVI ) 17ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಮತ್ತು (ಸಿ) ಖಂಡದಲ್ಲಿರುವುದು ಯಾವುದೂ-

(ಎ) ಸಹಕಾರ ಸಂಘದ ಆಸ್ತಿಯು ಪೂರ್ಣವಾಗಿ ಅಥವಾ ಭಾಗಶಃ ಸ್ಥಿರ ಸ್ವತ್ತನ್ನೊಳಗೊಂಡಿದ್ದರೂ, ಆ ಸಂಘದ ಷೇರುಗಳಿಗೆ ಸಂಬಂಧಿಸಿದ ಯಾವುದೇ ಲಿಖಿತಕ್ಕೆ;

(ಬಿ) ಸಂಘವು ತನ್ನ ಇಡೀ ಸ್ಥಿರ ಸ್ವತ್ತನ್ನು ಅಥವಾ ಅದರ ಭಾಗವನ್ನು ಅಥವಾ ಅದರಲ್ಲಿನ ಯಾವುದೇ ಹಿತಾಸಕ್ತಿಯನ್ನು ಡಿಬೆಂಚರುಧಾರಕರ ಪ್ರಯೋಜನಕ್ಕಾಗಿ ನ್ಯಾಸವಾಗಿ ನ್ಯಾಸಧಾರಿಗಳಿಗೆ ಅಡಮಾನ ಮಾಡಿದ, ಹಸ್ತಾಂತರಿಸಿದ ಅಥವಾ ಅನ್ಯಥಾ ವರ್ಗಾಯಿಸಿದ ನೋಂದಾಯಿತ ಲಿಖಿತವು ಒದಗಿಸಿದ ಭದ್ರತೆಗೆ ಅದು ಧಾರಕನನ್ನು ಹಕ್ಕುದಾರನನ್ನಾಗಿಸುವಷ್ಟು ಮಟ್ಟಿಗೆ ಹೊರತು, ಅಂಥ ಯಾವುದೇ ಸಂಘವು ಹೊರಡಿಸಿದ ಮತ್ತು ಸ್ಥಿರ ಸ್ವತ್ತಿನಲ್ಲಿ ಯಾವುದೇ ಅಧಿಕಾರ, ಹಕ್ಕು ಅಥವಾ ಹಿತಾಸಕ್ತಿಯನ್ನು ಸೃಜಿಸಿದ, ಘೋಷಿಸದ, ವಹಿಸಿಕೊಡದ, ಮಿತಗೊಳಿಸದ ಅಥವಾ ಅಂತ್ಯಗೊಳಿಸದ ಯಾವುದೇ ಡಿಬೆಂಚರುಗಳಿಗೆ;

(ಸಿ) ಅಂಥ ಯಾವುದೇ ಸಂಘವು ಹೊರಡಿಸಿದ ಯಾವುದೇ ಇತರ ಡಿಬೆಂಚರಿನ ಹಿಂಬರಹಕ್ಕೆ ಅಥವಾ ವರ್ಗಾವಣೆಗೆ

- ಅನ್ವಯವಾಗತಕ್ಕುದಲ್ಲ:

[1][ಪರಂತು, ಲಿಖಿತಗಳ ಕಡ್ಡಾಯ ನೋಂದಣಿ ವಿನಾಯಿತಿಯು, ಈ ಅಧಿನಿಯಮದ ಮೇರೆಗೆ, ನೋಂದಾಯಿತ ಗೃಹನಿರ್ಮಾಣ ಸಹಕಾರ ಸಂಘ ಅಥವಾ ಅದರ ಹೆಸರಿನಲ್ಲಿ ಬರೆದುಕೊಟ್ಟ ಸ್ಥಿರಸ್ವತ್ತಿನ ಹಕ್ಕು ಸ್ವಾಮ್ಯವನ್ನು ಅಥವಾ ಹಿತಾಸಕ್ತಿಯನ್ನು ವರ್ಗಾಯಿಸಲು ಉದ್ದೇಶಿಸಿರುವ ಅಥವಾ ವರ್ಗಾಯಿಸುತ್ತಿರುವ ಲಿಖಿತಗಳಿಗೆ ಅನ್ವಯವಾಗತಕ್ಕುದಲ್ಲ.][1]

**39. ಸಹಕಾರ ಸಂಘಗಳ ಪರವಾಗಿ ಬರೆದುಕೊಡಲಾದ ದಸ್ತಾವೇಜುಗಳ ನೋಂದಣಿ:-** (1) ಭಾರತ ನೋಂದಣಿ ಅಧಿನಿಯಮ, 1908ರಲ್ಲಿ (1908ರ ಕೇಂದ್ರ ಅಧಿನಿಯಮ xvi ) ಏನೇ ಇದ್ದರೂ, ಸಹಕಾರ ಸಂಘದ ಸಮಿತಿಯ ಯಾರೇ ಸದಸ್ಯನು, [2][ಮುಖ್ಯ ಕಾರ್ಯನಿರ್ವಾಹಕನು][2] ಅಥವಾ [2][ಸಹಕಾರ ಸಂಘದ ಇತರ ಪದಾಧಿಕಾರಿಯು][2] ಅಥವಾ ಸಹಕಾರ ಇಲಾಖೆಯ ಯಾರೇ ಅಧಿಕಾರಿಯು, ಸಹಕಾರ ಸಂಘದ ಪರವಾಗಿ ತನ್ನ ಅಧಿಕಾರ ಸ್ಥಾನದಿಂದ ಬರೆದುಕೊಟ್ಟ ಯಾವುದೇ ಲಿಖಿತದ ನೋಂದಣಿಗೆ ಸಂಬಂಧಿಸಿದ ಯಾವುದೇ ವ್ಯವಹರಣೆಯಲ್ಲಿ ಯಾವುದೇ ನೋಂದಣಿ ಕಚೇರಿಯಲ್ಲಿ ಆ ಅಧಿನಿಯಮದ 58ನೇ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಖುದ್ದಾಗಿ ಅಥವಾ ಏಜೆಂಟನ ಮೂಲಕ ಹಾಜರಾಗುವುದು ಅಥವಾ ಸಹಿ ಮಾಡುವುದು ಅವಶ್ಯವಾಗಿರತಕ್ಕುದಲ್ಲ.

(2) ಯಾವುದೇ ಲಿಖಿತವನ್ನು ಹಾಗೆ ಬರೆದುಕೊಟ್ಟಿದ್ದು, ಅದನ್ನು ನೋಂದಣಿಯ ಸಲುವಾಗಿ ಯಾವ ನೋಂದಣಿ ಅಧಿಕಾರಿಗೆ ಹಾಜರುಪಡಿಸಲಾಗಿದೆಯೋ, ಆ ಅಧಿಕಾರಿಯು ಸೂಕ್ತವೆಂದು ಭಾವಿಸಿದರೆ ಅದನ್ನು ಅದಕ್ಕೆ ಸಂಬಂಧಿಸಿದ ಮಾಹಿತಿಗಾಗಿ ಅಂಥ ಸದಸ್ಯನಿಗೆ, ಕಾರ್ಯದರ್ಶಿಗೆ ಅಥವಾ ಅಧಿಕಾರಿಗೆ ಕಳುಹಿಸಬಹುದು ಮತ್ತು ಅದನ್ನು ಬರೆದುಕೊಟ್ಟಿರುವ ಬಗ್ಗೆ ಮನದಟ್ಟು ಮಾಡಿಕೊಂಡ ತರುವಾಯ ಆ ಲಿಖಿತವನ್ನು ನೋಂದಾಯಿಸತಕ್ಕುದು.

## [3][ಅಧ್ಯಾಯ V-ಎ

## ಸಹಕಾರ ಸಂಘಗಳ ಸಮಿತಿಗಳ ಸದಸ್ಯರ ಚುನಾವಣೆ

**39ಎ. ಚುನಾವಣೆಗಳನ್ನು ನಡೆಸುವುದು:-** (1) ಸಹಕಾರ ಸಂಘದ ನೋಂದಣಿಯ ನಂತರ ಅಥವಾ ಯಾವುದೇ ಆಕಸ್ಮಿಕ ಖಾಲಿ ಸ್ಥಾನ ಉಂಟಾದ ನಂತರ ಅದರ ಮೊದಲ ಸಮಿತಿಯ ಸದಸ್ಯರನ್ನು ಹೊರತುಪಡಿಸಿ, ಸಮಿತಿಯ ಸದಸ್ಯರ ಪ್ರತಿಯೊಂದು ಸಾಮಾನ್ಯ ಚುನಾವಣೆಯನ್ನು, ರಿಜಿಸ್ಟ್ರಾರನ ಮೇಲ್ವಿಚಾರಣೆ, ನಿರ್ದೇಶನ ಮತ್ತು ನಿಯಂತ್ರಣಕ್ಕೊಳಪಟ್ಟು ನಡೆಸತಕ್ಕುದು.

(2) ಸಮಿತಿಯ ಸದಸ್ಯರ ಪ್ರತಿಯೊಂದು ಸಾಮಾನ್ಯ ಚುನಾವಣೆಯನ್ನು ಸಮಿತಿಯ ಪದಾವಧಿಯ ಮುಕ್ತಾಯದ ದಿನಾಂಕದ ಮೊದಲು ಹದಿನೈದು ದಿನಗಳ ಒಳಗೆ ನಡೆಸತಕ್ಕುದು. ಅಂತಹ ಸಾಮಾನ್ಯ ಚುನಾವಣೆಯ ದಿನಾಂಕವನ್ನು ಸಮಿತಿಯು ಅಥವಾ ಸಮಿತಿಯು ಇಲ್ಲದಿದ್ದರೆ ಆಡಳಿತಾಧಿಕಾರಿಯು ಅಥವಾ ವಿಶೇಷಾಧಿಕಾರಿಯು ಗೊತ್ತುಪಡಿಸತಕ್ಕುದು.

(3) ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಸಮಿತಿ ಸದಸ್ಯರ ಚುನಾವಣೆಯನ್ನು ನಿಯಮಿಸಬಹುದಾದಂಥ ನಿಯಮಗಳಿಗನುಸಾರವಾಗಿ ರಹಸ್ಯ ಮತದಾನದ ಮೂಲಕ ನಡೆಸತಕ್ಕುದು.

[4][(4) ಅಭಾವ, ಬರ, ಪ್ರವಾಹ, ಅಗ್ನಿ ಅಥವಾ ಯಾವುದೇ ಇತರ ನೈಸರ್ಗಿಕ ವಿಕೋಪಗಳ ಕಾರಣಗಳಿಂದಾಗಿ ಅಥವಾ ಮಳೆಗಾಲದಿಂದಾಗಿ ಅಥವಾ ರಾಜ್ಯ ವಿಧಾನಸಭೆಯ ಅಥವಾ ವಿಧಾನ ಪರಿಷತ್ತಿನ ಅಥವಾ ಲೋಕಸಭೆಯ ಅಥವಾ ಸ್ಥಳೀಯ ಸಂಸ್ಥೆಯ ಯಾವುದೇ ಚುನಾವಣಾ ಕಾರ್ಯಕ್ರಮವು ಯಾವುದೇ ಸಂಘದ ಅಥವಾ ಸಂಘಗಳ ವರ್ಗದ ಚುನಾವಣಾ ಕಾರ್ಯಕ್ರಮಗಳು ಜೊತೆ ಜೊತೆಯಾಗಿ ನಡೆಯುವುದರಿಂದಾಗಿ ಅಥವಾ ಸಾರ್ವಜನಿಕ ಹಿತಾಸಕ್ತಿಯಿಂದಾಗಿ, ಚುನಾವಣೆಗಳು ಮುಂದೂಡಲ್ಪಟ್ಟರೆ, ರಾಜ್ಯ ಸರ್ಕಾರವು

1. 2001ರ ಅಧಿನಿಯಮ ಸಂಖ್ಯೆ 6ರ ಮೂಲಕ 1.4.2001 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ ಅಧ್ಯಾಯ vಎ ಮತ್ತು 39ಎ ದಿಂದ 39ಕೆ ವರೆಗಿನ ಪ್ರಕರಣಗಳನ್ನು 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ. 19ಎ ಪ್ರಕರಣದ (3)ನೇ ಉಪ ಪ್ರಕರಣವನ್ನು ಮಾತ್ರ 27.10.1998 ರಿಂದ ಜಾರಿಗೆ ಕೊಡಲಾಗಿದೆ.
4. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಸೇರಿಸಲಾಗಿದೆ.

ಈ ಅಧಿನಿಯಮ ಅಥವಾ ನಿಯಮ ಅಥವಾ ಉಪವಿಧಿಗಳಲ್ಲಿ ಏನೇ ಒಳಗೊಂಡಿದ್ದರೂ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಒಮ್ಮೆಗೆ ಆರು ತಿಂಗಳುಗಳನ್ನು ಮೀರದ ಅವಧಿಗಾಗಿ ಸಂಘ ಅಥವಾ ಸಂಘಗಳ ವರ್ಗದ ಚುನಾವಣೆಯನ್ನು ಮುಂದೂಡಬಹುದು ಮತ್ತು ಯಾವುದೇ ಸಂದರ್ಭದಲ್ಲೂ ಅದು ಸರಾಸರಿ ಎರಡು ವರ್ಷಗಳನ್ನು ಮೀರಕೂಡದು.][4]

39ಬಿ. **ಚುನಾವಣೆಗಳನ್ನು ನಡೆಸುವುದಕ್ಕಾಗಿ ವೆಚ್ಚ :-** ಚುನಾವಣೆಯ ಸಂಬಂಧದಲ್ಲಿ ಕರ್ತವ್ಯಗಳನ್ನು ನೆರವೇರಿಸಲು ಮತ್ತು ಅಧಿಕಾರಗಳನ್ನು ಚಲಾಯಿಸಲು ನೇಮಕ ಮಾಡಲಾದ ವ್ಯಕ್ತಿಗಳಿಗೆ ಪ್ರಯಾಣ ಭತ್ಯೆಗಳು, ದಿನಭತ್ಯೆಗಳು ಮತ್ತು ಇತರೆ ಗೌರವಧನ ಸಂದಾಯ ಯಾವುದಾದರೂ ಇದ್ದರೆ ಅದೂ ಸೇರಿ ಯಾವುದೇ ಚುನಾವಣೆಯನ್ನು ನಡೆಸುವ ಖರ್ಚು ವೆಚ್ಚಗಳನ್ನು ಸಂಬಂಧಪಟ್ಟ ಸಹಕಾರ ಸಂಘವು ಭರಿಸತಕ್ಕುದು.

39ಸಿ. **ಭ್ರಷ್ಟಾಚಾರಗಳು:-** ಈ ಅಧಿನಿಯಮದ ಉದ್ದೇಶಗಳಿಗಾಗಿ ಈ ಮುಂದಿನವುಗಳನ್ನು ಭ್ರಷ್ಟಾಚಾರಗಳೆಂದು ಭಾವಿಸತಕ್ಕುದು, ಎಂದರೆ:-

(i) ತತ್ಕಾಲದಲ್ಲಿ ಜಾರಿಯಲ್ಲಿರುವ, 1951ರ ಜನತಾ ಪ್ರಾತಿನಿಧ್ಯ ಅಧಿನಿಯಮದ (ಕೇಂದ್ರಾಧಿನಿಯಮ 1951ರ 43)ರ 123ನೇ ಪ್ರಕರಣದ (1)ನೇ ಖಂಡದಲ್ಲಿ ಪರಿಭಾಷಿಸಲಾದಂತೆ "ಲಂಚಗುಳಿತನ";

(ii) ತತ್ಕಾಲದಲ್ಲಿ ಜಾರಿಯಲ್ಲಿರುವ, ಮೇಲಿನ ಪ್ರಕರಣದ (2)ನೇ ಖಂಡದಲ್ಲಿ ಪರಿಭಾಷಿಸಲಾದಂತೆ ಅನುಚಿತ ಪ್ರಭಾವ;

(iii) ಅಭ್ಯರ್ಥಿಯ ಚುನಾವಣೆಯ ಭವಿತವ್ಯವನ್ನು ಅಭಿವೃದ್ಧಿಗೊಳಿಸುವುದಕ್ಕಾಗಿ ಅಥವಾ ಯಾರೇ ಅಭ್ಯರ್ಥಿಯ ಚುನಾವಣೆಯ ಮೇಲೆ ಪ್ರತಿಕೂಲವಾಗಿ ಪ್ರಭಾರ ಬೀರುವುದಕ್ಕಾಗಿ ಯಾರೇ ವ್ಯಕ್ತಿಗೆ, ಆತನ ಧರ್ಮ, ಮೂಲವಂಶ, ಜಾತಿ, ಸಮುದಾಯ ಅಥವಾ ಭಾಷೆಯ ಆಧಾರದ ಮೇಲೆ ಮತದಾನ ಮಾಡಲು ಅಥವಾ ಮತದಾನ ಮಾಡದೆ ಇರಲು ಅಭ್ಯರ್ಥಿಯು ಅಥವಾ ಅವನ ಏಜೆಂಟನು ಅಥವಾ ಅಭ್ಯರ್ಥಿಯ ಅಥವಾ ಚುನಾವಣಾ ಏಜೆಂಟನ ಸಮ್ಮತಿಯಿಂದ ಯಾರೇ ವ್ಯಕ್ತಿಯು ಮಾಡಿಕೊಳ್ಳುವ ಮನವಿ ಅಥವಾ ರಾಷ್ಟ್ರ ಧ್ವಜ ಅಥವಾ ರಾಷ್ಟ್ರೀಯ ಲಾಂಛನಗಳಂಥ ರಾಷ್ಟ್ರೀಯ ಚಿಹ್ನೆಗಳ ಬಳಕೆ ಅಥವಾ ಅವುಗಳತ್ತ ಗಮನ ಸೆಳೆಯುವುದು;

(iv) ಅಭ್ಯರ್ಥಿಯ ಚುನಾವಣೆಯ ಭವಿತವ್ಯವನ್ನು ಅಭಿವೃದ್ಧಿಗೊಳಿಸುವುದಕ್ಕಾಗಿ ಅಥವಾ ಯಾರೇ ಅಭ್ಯರ್ಥಿಯ ಚುನಾವಣೆಯ ಮೇಲೆ ಪ್ರತಿಕೂಲವಾಗಿ ಪ್ರಭಾವ ಬೀರುವುದಕ್ಕಾಗಿ, ಧರ್ಮ, ಮೂಲವಂಶ, ಜಾತಿ, ಸಮುದಾಯ ಅಥವಾ ಭಾಷೆಯ ಆಧಾರಗಳ ಮೇಲೆ ಅಭ್ಯರ್ಥಿಯು ಅಥವಾ ಅವನ ಏಜೆಂಟನು ಅಥವಾ ಅಭ್ಯರ್ಥಿಯ ಅಥವಾ ಅವನ ಚುನಾವಣಾ ಏಜೆಂಟನ ಸಮ್ಮತಿಯಿಂದ ಯಾರೇ ಇತರ ವ್ಯಕ್ತಿಯು, ಭಾರತದ ನಾಗರಿಕರ ಭಿನ್ನಭಿನ್ನ ವರ್ಗಗಳ ನಡುವೆ ಹಗೆತನದ ಅಥವಾ ದ್ವೇಷದ ಭಾವನೆಗಳನ್ನು ಬೆಳೆಸುವುದು ಅಥವಾ ಬೆಳೆಸಲು ಪ್ರಯತ್ನಿಸುವುದು;

(v) ಯಾರೇ ಅಭ್ಯರ್ಥಿಯ ವೈಯಕ್ತಿಕ ಚಾರಿತ್ರ್ಯಕ್ಕೆ ಅಥವಾ ನಡತೆಗೆ ಸಂಬಂಧಪಟ್ಟಂತೆಅಥವಾ ಯಾರೇ ಅಭ್ಯರ್ಥಿಯ ಉಮೇದುವಾರಿಕೆಗೆ ಅಥವಾ ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳುವುದಕ್ಕೆ ಸಂಬಂಧಪಟ್ಟಂತೆ ಸುಳ್ಳಿನ ಅಥವಾ ಸುಳ್ಳೆಂದು ತಾನು ನಂಬುವ ಅಥವಾ ನಿಜವೆಂದು ತಾನು ನಂಬದಿರುವ ಮತ್ತು ಆ ಅಭ್ಯರ್ಥಿಯ ಚುನಾವಣಾ ಭವಿತವ್ಯದ ಮೇಲೆ ಪ್ರತಿಕೂಲ ಪ್ರಭಾವ ಬೀರಲು ಯುಕ್ತವಾಗಿ ಉದ್ದೇಶಿಸಿರುವ ಸಂಗತಿಯ ಯಾವುದೇ ನಿರೂಪಣೆಯನ್ನು ಅಭ್ಯರ್ಥಿಯು ಅಥವಾ ಅವನ ಏಜೆಂಟನು ಅಥವಾ ಅಭ್ಯರ್ಥಿಯ ಅಥವಾ ಅವನ ಚುನಾವಣಾ ಏಜೆಂಟನ ಸಮ್ಮತಿಯಿಂದ ಯಾರೇ ಇತರ ವ್ಯಕ್ತಿಯು ಪ್ರಕಟಿಸುವುದು;

(vi) ಒಬ್ಬ ಅಭ್ಯರ್ಥಿಯು ಅಥವಾ ಅವನ ಏಜೆಂಟನು ಅಥವಾ ಅಭ್ಯರ್ಥಿಯ ಅಥವಾ ಅವನ ಚುನಾವಣಾ ಏಜೆಂಟನ ಸಮ್ಮತಿಯಿಂದ ಯಾರೇ ಇತರ ವ್ಯಕ್ತಿಯು ಈ ಅಧಿನಿಯಮದ ಮೇರೆಗೆ ರಚಿಸಿರುವ ನಿಯಮಗಳ ಅನುಸಾರ ವ್ಯವಸ್ಥೆ ಮಾಡಿದ ಯಾವುದೇ ಮತದಾನ ಕೇಂದ್ರಕ್ಕೆ (ಸ್ವತಃ ಅಭ್ಯರ್ಥಿ, ಅವನ ಕುಟುಂಬದ ಸದಸ್ಯರು ಅಥವಾ ಅವನ ಏಜೆಂಟ್ ಇವರನ್ನು ಹೊರತುಪಡಿಸಿ) ಯಾರೇ ಮತದಾರನನ್ನು ಉಚಿತವಾಗಿ ಕರೆದೊಯ್ಯಲು ಅಥವಾ ಅಲ್ಲಿಂದ ಕರೆತರಲು ಯಾವುದೇ ವಾಹನ ಅಥವಾ ದೋಣಿಯನ್ನು ಹಣ ಸಂದಾಯದ ಮೇಲೆ ಅಥವಾ ಅನ್ಯಥಾ ಬಾಡಿಗೆಗೆ ತೆಗೆದುಕೊಳ್ಳುವುದು ಅಥವಾ ಪಡೆದುಕೊಳ್ಳುವುದು ಅಥವಾ ಅಂಥ ವಾಹನ ಅಥವಾ ದೋಣಿಯನ್ನು ಬಳಸುವುದು:

ಪರಂತು, ಅಂಥ ಯಾವುದೇ ಮತದಾನ ಕೇಂದ್ರಕ್ಕೆ ಅಥವಾ ಮತದಾನಕ್ಕಾಗಿ ನಿಗದಿಪಡಿಸಿರುವ ಸ್ಥಳಕ್ಕೆ ಹೋಗುವುದು ಅಥವಾ ಅಲ್ಲಿಂದ ಬರುವ ಉದ್ದೇಶಕ್ಕಾಗಿ ಯಾರೇ ಮತದಾರನು ತನ್ನ ಸ್ವಂತ ಖರ್ಚಿನಲ್ಲಿ ಯಾವುದೇ ಸಾರ್ವಜನಿಕ ಸಾರಿಗೆ ವಾಹನ ಅಥವಾ ದೋಣಿ ಅಥವಾ ರೈಲುಬೋಗಿಯನ್ನು ಬಳಸುವುದನ್ನು ಭ್ರಷ್ಟಾಚಾರವೆಂದು ಭಾವಿಸತಕ್ಕುದಲ್ಲ;

ವಿವರಣೆ:- ಈ ಖಂಡದಲ್ಲಿ 'ವಾಹನ' ಎಂಬ ಪದಕ್ಕೆ, ರಸ್ತೆ ಸಾರಿಗೆ ಉದ್ದೇಶಕ್ಕಾಗಿ ಬಳಸಿದ ಅಥವಾ ಬಳಸಲು ಸಮರ್ಥವಾಗಿರುವ ಯಾವುದೇ ವಾಹನ ಎಂದು ಅರ್ಥ; ಆ ವಾಹನವು ಯಂತ್ರಚಾಲಿತ ಅಥವಾ ಅನ್ಯಥಾ ಚಾಲಿತವಾದುದಾಗಿರಬಹುದು; ಮತ್ತು ಅದು ಇತರ ವಾಹನಗಳನ್ನು ಎಳೆಯಲು ಅಥವಾ ಅನ್ಯಥಾ ಉಪಯೋಗಿಸುವಂಥದಾಗಿರಬಹುದು;

(vii) ಅಮಲೇರಿಸುವ ಮದ್ಯಗಳು ಸರಬರಾಜಾಗುವ ಯಾವುದೇ ಸಭೆಯನ್ನು ನಡೆಸುವುದು;

(viii) ಚುನಾವಣೆಗೆ ಉಲ್ಲೇಖ ಇರುವ, ಮುದ್ರಕನ ಮತ್ತು ಪ್ರಕಾಶಕನ ಹೆಸರು ಮತ್ತು ವಿಳಾಸ ಇಲ್ಲದಿರುವ ಯಾವುದೇ ಸುತ್ತೋಲೆ, ಜಾಹೀರಾತು ಪತ್ರಗಳು, ಬಿತ್ತಿಪತ್ರಗಳನ್ನು ಹೊರಡಿಸುವುದು;

(ix) ರಾಜ್ಯ ಸರ್ಕಾರವು, ನಿಯಮದ ಮೂಲಕ ಭ್ರಷ್ಟಾಚಾರವೆಂದು ನಿರ್ದಿಷ್ಟ ಪಡಿಸಬಹುದಾದ ಯಾವುದೇ ಇತರ ಆಚರಣೆ.

**39ಡಿ. ಮತದಾನದ ರಹಸ್ಯವನ್ನು ಕಾಪಾಡುವುದು:–** (1) ಚುನಾವಣೆಯಲ್ಲಿ ಮತಗಳನ್ನು ದಾಖಲು ಮಾಡುವುದಕ್ಕೆ ಅಥವಾ ಎಣಿಕೆ ಮಾಡುವುದಕ್ಕೆ ಸಂಬಂಧಿಸಿದ ಯಾವುದೇ ಕರ್ತವ್ಯವನ್ನು ನಿರ್ವಹಿಸುವ ಪ್ರತಿಯೊಬ್ಬ ಅಧಿಕಾರಿ, ಗುಮಾಸ್ತ, ಏಜೆಂಟ್ ಅಥವಾ ಇತರ ವ್ಯಕ್ತಿಯು ಮತದಾನದ ರಹಸ್ಯವನ್ನು ಕಾಪಾಡತಕ್ಕುದು ಮತ್ತು ಹಾಗೆ ಕಾಪಾಡುವಲ್ಲಿ ನೆರವಾಗತಕ್ಕುದು ಮತ್ತು (ಯಾವುದೇ ಕಾನೂನಿನ ಮೂಲಕ ಅಥವಾ ಮೇರೆಗೆ ಅಧಿಕೃತಗೊಳಿಸಲಾದ ಯಾವುದೇ ಉದ್ದೇಶಕ್ಕಾಗಿ ಹೊರತು) ಅಂಥ ರಹಸ್ಯವನ್ನು ಭಂಗಗೊಳಿಸಲು ಉದ್ದೇಶಿಸುವ ಯಾವುದೇ ಮಾಹಿತಿಯನ್ನು ಯಾರೇ ವ್ಯಕ್ತಿಗೆ ತಿಳಿಸತಕ್ಕುದಲ್ಲ.

(2) (1)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು ಅಪರಾಧ ನಿರ್ಣಯವಾದಾಗ ಮೂರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕುದು.

**39ಇ. ಅಧಿಕಾರಿಗಳು, ಮುಂತಾದವರು ಚುನಾವಣೆಗಳಲ್ಲಿ ಅಭ್ಯರ್ಥಿಗಳ ಪರವಾಗಿ ಕಾರ್ಯ ನಿರ್ವಹಿಸಕೂಡದು ಅಥವಾ ಮತದಾನದ ಮೇಲೆ ಪ್ರಭಾರ ಬೀರಕೂಡದು:–** (1) ಚುನಾವಣೆಯಲ್ಲಿ ರಿಟರ್ನಿಂಗ್ ಆಫೀಸರಾಗಿರುವ ಅಥವಾ ಅಸಿಸ್ಟೆಂಟ್ ರಿಟರ್ನಿಂಗ್ ಆಫೀಸರಾಗಿರುವ ಅಥವಾ ಪ್ರಿಸೈಡಿಂಗ್ ಆಫೀಸರಾಗಿರುವ ಅಥವಾ ಪೋಲಿಂಗ್ ಆಫೀಸರಾಗಿರುವ ಯಾರೇ ವ್ಯಕ್ತಿಯು ಅಥವಾ ಚುನಾವಣೆಗೆ ಸಂಬಂಧಿಸಿದ ಯಾವುದೇ ಕರ್ತವ್ಯ ನಿರ್ವಹಿಸಲು ರಿಟರ್ನಿಂಗ್ ಆಫೀಸರಿಂದ ಅಥವಾ ಪ್ರಿಸೈಡಿಂಗ್ ಆಫೀಸರಿಂದ ನೇಮಕಗೊಂಡಿರುವ ಅಧಿಕಾರಿಯು ಅಥವಾ ಗುಮಾಸ್ತನು ಚುನಾವಣೆ ನಡೆಸುವಲ್ಲಿ ಅಥವಾ ಅದರ ನಿರ್ವಹಣೆಯಲ್ಲಿ ಅಭ್ಯರ್ಥಿಯ ಚುನಾವಣೆಯ ಭವಿತವ್ಯವನ್ನು ಅಭಿವೃದ್ಧಿಪಡಿಸುವುದಕ್ಕಾಗಿ (ಮತ ನೀಡುವುದರ ಹೊರತಾಗಿ) ಯಾವುದೇ ಕಾರ್ಯವನ್ನು ಮಾಡತಕ್ಕುದಲ್ಲ.

(2) ಮೇಲೆ ಹೇಳಲಾದಂಥ ಯಾರೇ ವ್ಯಕ್ತಿಯು, ಮತ್ತು ಪೊಲೀಸ್ ಪಡೆದ ಯಾರೇ ಸದಸ್ಯನು -

(ಎ) ಚುನಾವಣೆಯಲ್ಲಿ ತನ್ನ ಮತವನ್ನು ನೀಡುವಂತೆ ಯಾರೇ ವ್ಯಕ್ತಿಯನ್ನು ಪ್ರೇರೇಪಿಸಲು; ಅಥವಾ

(ಬಿ) ಚುನಾವಣೆಯಲ್ಲಿ ತನ್ನ ಮತವನ್ನು ನೀಡದಿರುವಂತೆ ಯಾರೇ ವ್ಯಕ್ತಿಯನ್ನು ವಿಮುಖಗೊಳಿಸಲು; ಅಥವಾ

(ಸಿ) ಚುನಾವಣೆಯಲ್ಲಿ ಯಾವುದೇ ರೀತಿಯಲ್ಲಿ ಯಾರೇ ವ್ಯಕ್ತಿಯನ್ನು ವಿಮುಖಗೊಳಿಸಲು

- ಪ್ರಯತ್ನಿಸತಕ್ಕುದಲ್ಲ.

(3) (1)ನೇ ಉಪಪ್ರಕರಣದ ಅಥವಾ (2)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು, ಅಪರಾಧ ನಿರ್ಣಯವಾದ ತರುವಾಯ ಆರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕುದು.

(4) (3)ನೇ ಉಪಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವು ಸಂಜ್ಞೇಯರಾಗಿರತಕ್ಕುದು.

**39ಎಫ್. ಮತದಾನ ಕೇಂದ್ರಗಳಲ್ಲಿ ಅಥವಾ ಅವುಗಳ ಸಮೀಪದಲ್ಲಿ ಮತಕೋರಿಕೆಯ ನಿಷೇಧ:–** (1) ಯಾವುದೇ ಮತದಾನ ಕೇಂದ್ರದಲ್ಲಿ ಮತದಾನ ನಡೆಯುವ ದಿನಾಂಕದಂದು ಅಥವಾ ದಿನಾಂಕಗಳಂದು ಯಾರೇ ವ್ಯಕ್ತಿಯು ಮತದಾನ ಕೇಂದ್ರದೊಳಗೆ ಅಥವಾ ಮತದಾನ ಕೇಂದ್ರದ ಒಂದು ನೂರು ಮೀಟರ್ ಅಂತರದೊಳಗಿನ ಯಾವುದೇ ಸಾರ್ವಜನಿಕ ಅಥವಾ ಖಾಸಗೀ ಸ್ಥಳದಲ್ಲಿ ಈ ಕೆಳಕಂಡ ಯಾವುದೇ ಕಾರ್ಯಗಳನ್ನು ಮಾಡತಕ್ಕುದಲ್ಲ, ಎಂದರೆ:-

(ಎ) ಮತಗಳಿಗಾಗಿ ಬೇಡುವುದು; ಅಥವಾ

(ಬಿ) ಯಾರೇ ಮತದಾರನ ಮತವನ್ನು ಯಾಚಿಸುವುದು; ಅಥವಾ

(ಸಿ) ಯಾರೇ ನಿರ್ದಿಷ್ಟ ಅಭ್ಯರ್ಥಿಗೆ ಮತ ನೀಡದಂತೆ ಯಾರೇ ಮತದಾರನನ್ನು ಮನವೊಲಿಸುವುದು; ಅಥವಾ

(ಡಿ) ಚುನಾವಣೆಯಲ್ಲಿ ಮತ ನೀಡದಂತೆ ಯಾರೇ ಮತದಾರನನ್ನು ಮನವೊಲಿಸುವುದು; ಅಥವಾ

(ಇ) ಚುನಾವಣೆಗೆ ಸಂಬಂಧಿಸಿದ (ಅಧಿಕೃತ ನೋಟೀಸಿನ ಹೊರತು) ಯಾವುದೇ ನೋಟೀಸು ಅಥವಾ ಚಿಹ್ನೆಯನ್ನು ಪ್ರದರ್ಶಿಸುವುದು.

(2) (1)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾರೇ ವ್ಯಕ್ತಿಯು ಅಪರಾಧ ನಿರ್ಣಯವಾದಾಗ ಇನ್ನೂರೈವತ್ತು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕುದು.

(3) (2)ನೇ ಉಪಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವು ಸಂಜ್ಞೇಯವಾಗಿರತಕ್ಕುದು.

**39ಜಿ. ಮತದಾನ ಕೇಂದ್ರಗಳಲ್ಲಿ ಅಥವಾ ಅವುಗಳ ಸಮೀಪದಲ್ಲಿನ ಅವ್ಯವಸ್ಥಿತ ವರ್ತನೆಗೆ ದಂಡ:-** (1) ಯಾವುದೇ ಮತದಾನ ಕೇಂದ್ರದಲ್ಲಿ ಮತದಾನ ನಡೆಯುವ ದಿನಾಂಕ ಅಥವಾ ದಿನಾಂಕಗಳ ಯಾರೇ ವ್ಯಕ್ತಿಯು,-

(ಎ) ಮತದಾನ ಕೇಂದ್ರದೊಳಗೆ ಅಥವಾ ಅದರ ಪ್ರವೇಶ ಸ್ಥಳದಲ್ಲಿ ಅಥವಾ ಅದರ ಆಸುಪಾಸಿನ ಯಾವುದೇ ಸಾರ್ವಜನಿಕ ಅಥವಾ ಖಾಸಗಿ ಸ್ಥಳದಲ್ಲಿ ಮಾನವ ಧ್ವನಿಯನ್ನು ವರ್ಧಿಸುವುದಕ್ಕಾಗಿ ಅಥವಾ ಪುನರುಚ್ಚರಿಸುವುದಕ್ಕಾಗಿ ಮೆಗಾಫೋನ್ ಅಥವಾ ಧ್ವನಿವರ್ಧಕದಂತಹ ಯಾವುದೇ ಸಲಕರಣೆಯನ್ನು ಬಳಸತಕ್ಕುದಲ್ಲ ಅಥವಾ ನಡೆಸತಕ್ಕುದಲ್ಲ; ಅಥವಾ

(ಬಿ) ಮತದಾನ ಮಾಡಲು ಮತದಾನ ಕೇಂದ್ರಕ್ಕೆ ಭೇಟಿ ನೀಡುವ ಯಾರೇ ವ್ಯಕ್ತಿಗೆ ಕಿರುಕುಳ ಉಂಟು ಮಾಡುವಂತೆ ಅಥವಾ ಮತದಾನ ಕೇಂದ್ರದಲ್ಲಿ ಕರ್ತವ್ಯ ನಿರತರಾಗಿರುವ ಅಧಿಕಾರಿಗಳ ಮತ್ತು ಇತರ ವ್ಯಕ್ತಿಗಳ ಕೆಲಸಕ್ಕೆ ಅಡ್ಡಿಯುಂಟಾಗುವಂತೆ, ಮತದಾನ ಕೇಂದ್ರದೊಳಗೆ ಅಥವಾ ಅದರ ಪ್ರವೇಶ ಸ್ಥಳದಲ್ಲಿ ಅಥವಾ ಅದರ ಆಸುಪಾಸಿನ ಯಾವುದೇ ಸಾರ್ವಜನಿಕ ಅಥವಾ ಖಾಸಗಿ ಸ್ಥಳದಲ್ಲಿ ಕೂಗತಕ್ಕುದಲ್ಲ ಅಥವಾ ಅನ್ಯಥಾ ಅವ್ಯವಸ್ಥಿತ ರೀತಿಯಲ್ಲಿ ವರ್ತಿಸತಕ್ಕುದಲ್ಲ.

(2) (1)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಅಥವಾ ಅಂಥ ಉಲ್ಲಂಘನೆಗೆ ಉದ್ದೇಶಪೂರ್ವಕವಾಗಿ ಸಹಾಯ ಮಾಡುವ ಅಥವಾ ಅದನ್ನು ದುಷ್ಪ್ರೇರಣೆ ಮಾಡುವ ಯಾರೇ ವ್ಯಕ್ತಿಯು, ಅಪರಾಧ ನಿರ್ಣಯದ ತರುವಾಯ, ಮೂರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕುದು.

(3) ಯಾರೇ ವ್ಯಕ್ತಿಯು ಈ ಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವನ್ನು ಮಾಡುತ್ತಿದ್ದಾನೆ ಅಥವಾ ಮಾಡಿದ್ದಾನೆ ಎಂದು ಮತದಾನ ಕೇಂದ್ರದ ಪ್ರಿಸೈಡಿಂಗ್ ಆಫೀಸರನಿಗೆ ನಂಬಲು ಕಾರಣ ಇದ್ದರೆ ಅಂಥ ವ್ಯಕ್ತಿಯನ್ನು ದಸ್ತಗಿರಿ ಮಾಡಲು ಅವನು ಯಾರೇ ಪೊಲೀಸ್ ಅಧಿಕಾರಿಗೆ ನಿರ್ದೇಶಿಸಬಹುದು ಮತ್ತು ಅನಂತರ ಪೊಲೀಸ್ ಅಧಿಕಾರಿಯು ಅವನನ್ನು ದಸ್ತಗಿರಿ ಮಾಡತಕ್ಕುದು.

(4) ಯಾರೇ ಪೊಲೀಸ್ ಅಧಿಕಾರಿಯು (1)ನೇ ಉಪಪ್ರಕರಣದ ಉಪಬಂಧಗಳ ಯಾವುದೇ ಉಲ್ಲಂಘನೆಯನ್ನು ತಡೆಗಟ್ಟುವುದಕ್ಕಾಗಿ ಯುಕ್ತವಾಗಿ ಅವಶ್ಯವೆನಿಸಬಹುದಾದಂಥ ಕ್ರಮಗಳನ್ನು ಕೈಗೊಳ್ಳಬಹುದು ಮತ್ತು ಅಂಥ ಬಲವನ್ನು ಉಪಯೋಗಿಸಬಹುದು ಮತ್ತು ಅಂಥ ಉಲ್ಲಂಘನೆಗಾಗಿ ಬಳಸಿದ ಯಾವುದೇ ಸಲಕರಣೆಯನ್ನು ವಶಕ್ಕೆ ತೆಗೆದುಕೊಳ್ಳಬಹುದು.

**39ಎಚ್. ಮತದಾನ ಕೇಂದ್ರದಲ್ಲಿ ದುರ್ನಡತೆಗಾಗಿ ದಂಡ:-** (1) ಯಾವುದೇ ಮತದಾನ ಕೇಂದ್ರದಲ್ಲಿ ಮತದಾನಕ್ಕೆ ನಿಗದಿಪಡಿಸಲಾದ ಸಮಯದಲ್ಲಿ ಸ್ವತಃ ದುರ್ವರ್ತಿಸುವ ಅಥವಾ ಪ್ರಿಸೈಡಿಂಗ್ ಆಫೀಸರ್‌ರ ಕಾನೂನು ಸಮ್ಮತ ನಿರ್ದೇಶನಗಳನ್ನು ಪಾಲಿಸಲು ತಪ್ಪುವ ಯಾರೇ ವ್ಯಕ್ತಿಯನ್ನು ಪ್ರಿಸೈಡಿಂಗ್ ಆಫೀಸರ್‌ರು ಅಥವಾ ಕರ್ತವ್ಯನಿರತ ಯಾರೇ ಪೊಲೀಸ್ ಅಧಿಕಾರಿಯು ಅಥವಾ ಈ ಬಗ್ಗೆ ಅಂಥ ಪ್ರಿಸೈಡಿಂಗ್ ಆಫೀಸರ್‌ರು ಅಧಿಕೃತಗೊಳಿಸಿದ ಯಾರೇ ವ್ಯಕ್ತಿಯು ಮತದಾನ ಕೇಂದ್ರದಿಂದ ಹೊರಹಾಕಬಹುದು.

(2) (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು, ಮತದಾನ ಕೇಂದ್ರದಲ್ಲಿ ಮತದಾನ ಮಾಡಲು ಅನ್ಯಥಾ ಹಕ್ಕುಳ್ಳ ಯಾರೇ ಮತದಾರನು ಆ ಕೇಂದ್ರದಲ್ಲಿ ಮತದಾನ ಮಾಡುವ ಅವಕಾಶವು ತಪ್ಪುವ ಹಾಗೆ ಚಲಾಯಿಸತಕ್ಕುದಲ್ಲ.

(3) ಒಂದು ಮತದಾನ ಕೇಂದ್ರದಿಂದ ಹಾಗೆ ಹೊರಹಾಕಲಾದ ಯಾರೇ ವ್ಯಕ್ತಿಯು, ಪ್ರಿಸೈಡಿಂಗ್ ಆಫೀಸರ್‌ರ ಅನುಮತಿ ಇಲ್ಲದೆ ಮತದಾನ ಕೇಂದ್ರವನ್ನು ಪುನಃ ಪ್ರವೇಶಿಸಿದರೆ, ಅವನು ಅಪರಾಧ ನಿರ್ಣಯವಾದ ಮೇಲೆ, ಮೂರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕುದು.

(4) (3)ನೇ ಉಪಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವು ಸಂಜ್ಞೇಯವಾಗಿರತಕ್ಕುದು.

**39ಐ. ಚುನಾವಣೆಗೆ ಸಂಬಂಧಿಸಿದಂತೆ ಪದೀಯ ಕರ್ತವ್ಯದ ಉಲ್ಲಂಘನೆಗಳು:-** (1) ಈ ಪ್ರಕರಣವು ಅನ್ವಯವಾಗುವ ಯಾರೇ ವ್ಯಕ್ತಿಯು ಯುಕ್ತ ಕಾರಣವಿಲ್ಲದೆ ತನ್ನ ಪದೀಯ ಕರ್ತವ್ಯದ ಉಲ್ಲಂಘನೆಯಾಗುವ ಯಾವುದೇ ಕಾರ್ಯದ ಅಥವಾ ಲೋಪದ ತಪ್ಪಿತಸ್ಥನಾಗಿದ್ದರೆ, ಅವನು ಅಪರಾಧ ನಿರ್ಣಯವಾದ ಮೇಲೆ ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕುದು.

(2) (1)ನೇ ಉಪಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವು ಸಂಜ್ಞೇಯವಾಗಿರತಕ್ಕುದು.

(3) ಮೇಲೆ ಹೇಳಿರುವ ಯಾವುದೇ ಅಂಥ ಕೃತ್ಯಕ್ಕೆ ಅಥವಾ ಲೋಪಕ್ಕೆ ಸಂಬಂಧಪಟ್ಟಂತೆ ಹಾನಿ ಪರಿಹಾರಕ್ಕಾಗಿ ಯಾರೇ ಅಂಥ ವ್ಯಕ್ತಿಯ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡಲು ಅವಕಾಶವಿರತಕ್ಕುದಲ್ಲ.

(4) ಈ ಪ್ರಕರಣವು ಅನ್ವಯವಾಗುವ ವ್ಯಕ್ತಿಗಳೆಂದರೆ, ರಿಟರ್ನಿಂಗ್ ಆಫೀಸರ್‌ಗಳು, ಅಸಿಸ್ಟೆಂಟ್ ರಿಟರ್ನಿಂಗ್ ಆಫೀಸರ್‌ಗಳು, ಪ್ರಿಸೈಡಿಂಗ್ ಆಫೀಸರ್‌ಗಳು, ಪೋಲಿಂಗ್ ಆಫೀಸರ್‌ಗಳು ಮತ್ತು ನಾಮನಿರ್ದೇಶನ ಪತ್ರಗಳ ಸ್ವೀಕಾರಕ್ಕೆ ಅಥವಾ ಉಮೇದುವಾರಿಕೆಯ ಹಿಂತೆಗೆದುಕೊಳ್ಳುವುದಕ್ಕೆ ಅಥವಾ ಚುನಾವಣೆಯಲ್ಲಿ ಮತಗಳನ್ನು ದಾಖಲು ಮಾಡುವುದಕ್ಕೆ ಅಥವಾ ಎಣಿಕೆ ಮಾಡುವುದಕ್ಕೆ ಸಂಬಂಧಿಸಿದಂತೆ ಯಾವುದೇ ಕರ್ತವ್ಯವನ್ನು ನೆರವೇರಿಸಲು ನೇಮಕಗೊಂಡಿರುವ ಯಾರೇ ಇತರ ವ್ಯಕ್ತಿ; ಮತ್ತು "ಪದೀಯ ಕರ್ತವ್ಯ" ಎಂಬ ಪದಾವಳಿಯನ್ನು ಈ ಪ್ರಕರಣದ ಉದ್ದೇಶಗಳಿಗಾಗಿ ತದನುಸಾರವಾಗಿ ಅರ್ಥೈಸತಕ್ಕುದು, ಆದರೆ ಅದು ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಅನ್ಯಥಾ ವಿಧಿಸಲಾದ ಕರ್ತವ್ಯಗಳನ್ನು ಒಳಗೊಂಡಿರತಕ್ಕುದಲ್ಲ.

**39ಜೆ. ಮತದಾನ ಕೇಂದ್ರದಿಂದ ಮತಪತ್ರಗಳನ್ನು ಸ್ಥಳಾಂತರಿಸುವುದು ಅಪರಾಧ:-** (1) ಯಾವುದೇ ಚುನಾವಣೆಯಲ್ಲಿ ಮತದಾನ ಕೇಂದ್ರದಿಂದ ಮತಪತ್ರವನ್ನು ಅನಧಿಕೃತವಾಗಿ ತೆಗೆದುಕೊಂಡು ಹೋಗುವ ಅಥವಾ ತೆಗೆದುಕೊಂಡು ಹೋಗಲು ಪ್ರಯತ್ನಿಸುವ ಅಥವಾ ಯಾವುದೇ ಅಂಥ ಕಾರ್ಯವನ್ನು ಮಾಡುವುದಕ್ಕೆ ಉದ್ದೇಶಪೂರ್ವಕವಾಗಿ ಸಹಾಯ ಮಾಡುವ ಅಥವಾ ಅದಕ್ಕೆ ದುಷ್ಪ್ರೇರಣೆ ಮಾಡುವ ಯಾರೇ ವ್ಯಕ್ತಿಯು ಆ ಅಪರಾಧ ನಿರ್ಣಯವಾದ ಮೇಲೆ ಒಂದು ವರ್ಷದ ಅವಧಿಯವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಐದು ನೂರು ರೂಪಾಯಿಗಳ ವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕುದು.

(2) ಮತದಾನ ಕೇಂದ್ರದ ಪ್ರಿಸೈಡಿಂಗ್ ಆಫೀಸರ್‌ರಿಗೆ (1)ನೇ ಉಪಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವನ್ನು ಯಾರೇ ವ್ಯಕ್ತಿಯು ಮಾಡುತ್ತಿದ್ದಾನೆಂದು ಅಥವಾ ಮಾಡಿದ್ದಾನೆಂದು ನಂಬಲು ಕಾರಣ ಇದ್ದರೆ, ಅಂಥ ಅಧಿಕಾರಿಯು, ಅಂಥ ವ್ಯಕ್ತಿಯು ಆ ಮತದಾನ ಕೇಂದ್ರವನ್ನು ಬಿಡುವ ಮೊದಲು ಅಂಥ ವ್ಯಕ್ತಿಯನ್ನು ದಸ್ತಗಿರಿ ಮಾಡಬಹುದು ಅಥವಾ ದಸ್ತಗಿರಿ ಮಾಡುವಂತೆ ಪೊಲೀಸ್ ಅಧಿಕಾರಿಗೆ ನಿರ್ದೇಶಿಸಬಹುದು ಮತ್ತು ಅಂಥ ವ್ಯಕ್ತಿಯನ್ನು ಶೋಧಿಸಬಹುದು ಅಥವಾ ಅವನನ್ನು ಪೊಲೀಸ್ ಅಧಿಕಾರಿಯು ಶೋಧನೆ ಮಾಡುವಂತೆ ಮಾಡಬಹುದು:

ಪರಂತು, ಮಹಿಳೆಯನ್ನು ಶೋಧನೆ ಮಾಡುವ ಅಗತ್ಯವಿದ್ದರೆ, ಮತ್ತೊಬ್ಬ ಮಹಿಳೆಯಿಂದ ಶೋಧನೆಯನ್ನು ಕಟ್ಟುನಿಟ್ಟಾಗಿ ಸಭ್ಯತೆಯಿಂದ ಮಾಡಿಸತಕ್ಕುದು.

(3) ಶೋಧನೆಯ ಬಳಿಕ ದಸ್ತಗಿರಿಯಾದ ವ್ಯಕ್ತಿಯ ಬಳಿ ಕಂಡುಬಂದ ಯಾವುದೇ ಮತಪತ್ರವನ್ನು, ಪ್ರಿಸೈಡಿಂಗ್ ಆಫೀಸರ್‌ರು ಪೊಲೀಸ್ ಅಧಿಕಾರಿಗೆ ಸುರಕ್ಷಿತ ಅಭಿರಕ್ಷೆಗಾಗಿ ಒಪ್ಪಿಸತಕ್ಕುದು ಅಥವಾ ಪೊಲೀಸ್ ಅಧಿಕಾರಿಯು ಶೋಧನೆಯನ್ನು ಮಾಡಿದ್ದರೆ ಅದನ್ನು ಅಂಥ ಅಧಿಕಾರಿಯು ಸುರಕ್ಷಿತ ಅಭಿರಕ್ಷೆಯಲ್ಲಿ ಇಟ್ಟುಕೊಳ್ಳತಕ್ಕುದು.

(4) (1)ನೇ ಉಪಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವು ಸಂಜ್ಞೇಯವಾಗಿರತಕ್ಕುದು.

**39ಕೆ. ಇತರ ಅಪರಾಧಗಳು ಮತ್ತು ಅವುಗಳಿಗಾಗಿ ದಂಡಗಳು:-** (1) ಯಾವುದೇ ಚುನಾವಣೆಯಲ್ಲಿ ವ್ಯಕ್ತಿಯು,-

(ಎ) ಯಾವುದೇ ನಾಮಪತ್ರವನ್ನು ಮೋಸದಿಂದ ವಿರೂಪಗೊಳಿಸಿದರೆ ಅಥವಾ ಮೋಸದಿಂದ ನಾಶಪಡಿಸಿದರೆ; ಅಥವಾ

(ಬಿ) ರಿಟರ್ನಿಂಗ್ ಆಫೀಸರ್‌ರ ಅಧಿಕಾರದ ಪ್ರಕಾರ ಅಥವಾ ಮೇರೆಗೆ ಅಂಟಿಸಲಾದ ಯಾವುದೇ ಪಟ್ಟಿ, ನೋಟೀಸು ಅಥವಾ ಇತರ ದಸ್ತಾವೇಜನ್ನು ಮೋಸದಿಂದ ವಿರೂಪಗೊಳಿಸಿದರೆ, ನಾಶಪಡಿಸಿದರೆ ಅಥವಾ ತೆಗೆದುಹಾಕಿದರೆ; ಅಥವಾ

(ಸಿ) ಯಾವುದೇ ಮತಪತ್ರವನ್ನು, ಅಥವಾ ಯಾವುದೇ ಮತಪತ್ರದ ಮೇಲಿನ ಅಧಿಕೃತ ಚಿಹ್ನೆಯನ್ನು ಮೋಸದಿಂದ ಸ್ವರೂಪಗೊಳಿಸಿದರೆ ಅಥವಾ ನಾಶಪಡಿಸಿದರೆ; ಅಥವಾ

(ಡಿ) ಯುಕ್ತ ಅಧಿಕಾರವಿಲ್ಲದೆ ಯಾವುದೇ ಮತಪತ್ರವನ್ನು ಯಾರೇ ವ್ಯಕ್ತಿಗೆ ಸರಬರಾಜು ಮಾಡಿದರೆ ಅಥವಾ ಯಾವುದೇ ಮತಪತ್ರವನ್ನು ಸ್ವಾಧೀನದಲ್ಲಿಟ್ಟುಕೊಂಡಿದ್ದರೆ; ಅಥವಾ

(ಇ) ಮತ ಪೆಟ್ಟಿಗೆಯೊಳಕ್ಕೆ ಹಾಕಲು ಕಾನೂನಿನ ಮೂಲಕ ಅಧಿಕೃತನಾಗಿರುವ ಮತಪತ್ರವನ್ನು ಹೊರತುಪಡಿಸಿ ಇತರ ಯಾವುದೇ ವಸ್ತುವನ್ನು ಯಾವುದೇ ಮತಪೆಟ್ಟಿಗೆಯಲ್ಲಿ ಮೋಸದಿಂದ ಹಾಕಿದರೆ; ಅಥವಾ

(ಎಫ್) ಚುನಾವಣಾ ಉದ್ದೇಶಗಳಿಗಾಗಿ, ಆಗ ಬಳಕೆಯಲ್ಲಿರುವ ಯಾವುದೇ ಮತಪೆಟ್ಟಿಗೆಯನ್ನು ಮತಪತ್ರಗಳನ್ನು ಯುಕ್ತ ಅಧಿಕಾರವಿಲ್ಲದೆ ನಾಶಪಡಿಸಿದರೆ, ತೆಗೆದುಕೊಂಡರೆ, ತೆರೆದರೆ ಅಥವಾ ಅನ್ಯಥಾ ಅವುಗಳಲ್ಲಿ ಹಸ್ತಕ್ಷೇಪ ಮಾಡಿದರೆ; ಅಥವಾ

(ಜಿ) ಸಂದರ್ಭಾನುಸಾರ ಮೋಸದಿಂದ ಅಥವಾ ಯುಕ್ತ ಅಧಿಕಾರವಿಲ್ಲದೆ ಮೇಲೆ ಹೇಳಿದ ಯಾವುದೇ ಕೃತ್ಯಗಳನ್ನು ಮಾಡಲು ಪ್ರಯತ್ನಿಸಿದರೆ ಅಥವಾ ಯಾವುದೇ ಅಂಥ ಕೃತ್ಯಗಳನ್ನು ಮಾಡಲು ಉದ್ದೇಶಪೂರ್ವಕವಾಗಿ ಸಹಾಯ ಮಾಡಿದರೆ ಅಥವಾ ದುಷ್ಪ್ರೇರಿಸಿದರೆ

- ಅವನು ಚುನಾವಣಾ ಅಪರಾಧದ ತಪ್ಪಿತಸ್ಥನಾಗತಕ್ಕುದು.

(2) ಈ ಪ್ರಕರಣದ ಮೇರೆಗಿನ ಚುನಾವಣಾ ಅಪರಾಧದ ತಪ್ಪಿತಸ್ಥನಾದ ಯಾರೇ ವ್ಯಕ್ತಿಯು,-

(ಎ) ಮತನಾದ ಕೇಂದ್ರದಲ್ಲಿ ರಿಟರ್ನಿಂಗ್ ಆಫೀಸರಾಗಿದ್ದರೆ, ಅಥವಾ ಅಸಿಸ್ಟೆಂಟ್ ರಿಟರ್ನಿಂಗ್ ಆಫೀಸರಾಗಿದ್ದರೆ ಅಥವಾ ಪ್ರಿಸೈಡಿಂಗ್ ಆಫೀಸರಾಗಿದ್ದರೆ ಅಥವಾ ಚುನಾವಣೆಗೆ ಸಂಬಂಧಿಸಿದ ಪದೀಯ ಕರ್ತವ್ಯದ ಮೇಲೆ ನಿಯೋಜಿತನಾಗಿರುವ ಯಾವುದೇ ಇತರ ಅಧಿಕಾರಿ ಅಥವಾ ಗುಮಾಸ್ತನಾಗಿದ್ದರೆ, ಅವನು ಅಪರಾಧ ನಿರ್ಣಯವಾದ ಮೇಲೆ ಎರಡು ವರ್ಷಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕುದು;

(ಬಿ) ಯಾರೇ ಇತರ ವ್ಯಕ್ತಿಯಾಗಿದ್ದರೆ, ಅವನು ಅಪರಾಧ ನಿರ್ಣಯವಾದ ಮೇಲೆ ಆರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕುದು.

(3) ಈ ಪ್ರಕರಣದ ಉದ್ದೇಶಗಳಿಗಾಗಿ ಮತಗಳ ಎಣಿಕೆಯೂ ಸೇರಿದಂತೆ ಚುನಾವಣೆ ನಡೆಸುವುದರಲ್ಲಿ ಅಥವಾ ಚುನಾವಣೆಯ ಒಂದು ಭಾಗವನ್ನು ನಡೆಸುವುದರಲ್ಲಿ ಭಾಗವಹಿಸುವುದು ಒಬ್ಬ ವ್ಯಕ್ತಿಯ ಕರ್ತವ್ಯವಾಗಿದ್ದರೆ, ಅವನು ಪದೀಯ ಕರ್ತವ್ಯದ ಮೇಲಿರುವನೆಂದು ಅಥವಾ ಅಂಥ ಚುನಾವಣೆಗೆ ಸಂಬಂಧಿಸಿದಂತೆ ಬಳಸಿದ್ದ ಮತಪತ್ರಗಳು ಮತ್ತು ಇತರ ದಸ್ತಾವೇಜುಗಳಿಗೆ ಚುನಾವಣೆಯ ತರುವಾಯ ಜವಾಬ್ದಾರನಾಗಿರುವನೆಂದು ಭಾವಿಸತಕ್ಕುದು, ಆದರೆ "ಪದೀಯ ಕರ್ತವ್ಯ" ಎಂಬ ಪದಾವಳಿಯು ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಅನ್ಯಥಾ ವಿಧಿಸಲಾದ ಯಾವುದೇ ಕರ್ತವ್ಯವನ್ನು ಒಳಗೊಂಡಿರತಕ್ಕುದಲ್ಲ.

(4) (2)ನೇ ಉಪಪ್ರಕರಣದ ಮೇರೆಗೆ ದಂಡನೀಯವಾದ ಒಂದು ಅಪರಾಧವು ಸಂಜ್ಞೇಯವಾಗಿರತಕ್ಕುದು.][3]

## ಅಧ್ಯಾಯ-VI
## ಸಹಕಾರ ಸಂಘಗಳಿಗೆ ರಾಜ್ಯದ ನೆರವು

**40. ಸಹಕಾರ ಚಳುವಳಿಯ ಪ್ರವರ್ಧನೆ:-** ರಾಜ್ಯದಲ್ಲಿ ಸಹಕಾರಿ ಕೃಷಿಗೆ ಉತ್ತೇಜನವೂ ಸೇರಿ ಸಹಕಾರ ಚಳುವಳಿಯನ್ನು ಉತ್ತೇಜಿಸುವುದು ಮತ್ತು ಪ್ರವರ್ಧಿಸುವುದು ಮತ್ತು ಈ ದಿಸೆಯಲ್ಲಿ ಅವಶ್ಯವಾಗಬಹುದಾದಂಥ ಕ್ರಮಗಳನ್ನು ಕೈಕೊಳ್ಳುವುದು ರಾಜ್ಯ ಸರ್ಕಾರದ ಕರ್ತವ್ಯವಾಗಿರತಕ್ಕುದು.

**41. ಸಹಕಾರ ಸಂಘಗಳಲ್ಲಿ ರಾಜ್ಯ ಸರ್ಕಾರದ ಪ್ರತ್ಯಕ್ಷ ಪಾಲುಗಾರಿಕೆ:-** (1) ಪರಿಮಿತ ಹೊಣೆಗಾರಿಕೆಯೊಂದಿಗೆ ಸಹಕಾರ ಸಂಘದ ಷೇರು ಬಂಡವಾಳಕ್ಕೆ ರಾಜ್ಯಸರ್ಕಾರವು ಪ್ರತ್ಯಕ್ಷವಾಗಿ ವಂತಿಗೆ ನೀಡಬಹುದು.

(2) ತದ್ವಿರುದ್ಧವಾದ ಯಾವುದೇ ಒಪ್ಪಂದ ಇದ್ದರೂ, ಅಂಥ ಯಾವುದೇ ಸಹಕಾರ ಸಂಘದ ಯಾರೇ ಇತರ ಷೇರುದಾರರಿಗೆ ಆ ಸಂಘದ ಷೇರುಗಳ ಮೇಲೆ ಸಂದಾಯವಾಗತಕ್ಕ ಲಾಭಾಂಶದ ದರಕ್ಕಿಂತ ಹೆಚ್ಚಿನ ದರದ ಲಾಭಾಂಶಕ್ಕೆ ರಾಜ್ಯಸರ್ಕಾರವು ಹಕ್ಕುಳ್ಳದ್ದಾಗಿರತಕ್ಕುದಲ್ಲ.

**42. ಸಹಕಾರ ಸಂಘಗಳಲ್ಲಿ ರಾಜ್ಯಸರ್ಕಾರದ ಪರೋಕ್ಷ ಪಾಲುಗಾರಿಕೆ:-** ರಾಜ್ಯ ಸರ್ಕಾರವು, ಕಾನೂನಿನ ಮೂಲಕ ಧನವಿನಿಯೋಗಕ್ಕೆ ಒಳಪಟ್ಟು, ಪರಿಮಿತ ಹೊಣೆಗಾರಿಕೆಯೊಂದಿಗೆ ಇತರ ಸಹಕಾರ ಸಂಘಗಳಲ್ಲಿ ಷೇರುಗಳನ್ನು ಖರೀದಿಸಲು (ಈ ಅಧ್ಯಾಯದಲ್ಲಿ ಇನ್ನು ಮುಂದೆ ಅಪೆಕ್ಸ್ ಸಂಘವೆಂದು ಉಲ್ಲೇಖಿಸಲಾಗುವ) ಸಹಕಾರ ಸಂಘಕ್ಕೆ ಒದಗಿಸಬಹುದು.

**43. ಮುಖ್ಯ ರಾಜ್ಯ ಪಾಲುಗಾರಿಕೆ ನಿಧಿ:-** (1) 42ನೇ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರವು ಹಣ ಒದಗಿಸಿದ ಅಪೆಕ್ಸ್ ಸಂಘವು, ಅಂಥ ಹಣದಿಂದ 'ಮುಖ್ಯ ರಾಜ್ಯ ಪಾಲುಗಾರಿಕೆ ನಿಧಿ' ಎಂದು ಕರೆಯಲಾಗುವ ಒಂದು ನಿಧಿಯನ್ನು ಸ್ಥಾಪಿಸತಕ್ಕುದು.

(2) ಅಪೆಕ್ಸ್ ಸಂಘವು, ಮುಖ್ಯ ರಾಜ್ಯಪಾಲುಗಾರಿಕೆ ನಿಧಿಯನ್ನು -

(ಎ) ಪರಿಮಿತ ಹೊಣೆಗಾರಿಕೆಯ ಇತರ ಸಹಕಾರ ಸಂಘಗಳಲ್ಲಿ ಪ್ರತ್ಯಕ್ಷವಾಗಿ ಷೇರುಗಳನ್ನು ಕೊಳ್ಳುವ;

(ಬಿ) (ಈ ಅಧ್ಯಾಯದಲ್ಲಿ ಇನ್ನು ಮುಂದೆ ಕೇಂದ್ರ ಸಂಘವೆಂದು ಉಲ್ಲೇಖಿಸಿರುವ) ಸಹಕಾರ ಸಂಘಕ್ಕೆ ಪರಿಮಿತ ಹೊಣೆಗಾರಿಕೆಯ (ಈ ಅಧ್ಯಾಯದಲ್ಲಿ ಇನ್ನು ಮುಂದೆ ಪ್ರಾಥಮಿಕ ಸಂಘಗಳೆಂದು ಉಲ್ಲೇಖಿಸಿರುವ) ಸಹಕಾರ ಸಂಘಗಳಲ್ಲಿ ಷೇರುಗಳನ್ನು ಖರೀದಿಸಲು ಹಣವನ್ನು ಒದಗಿಸುವ;

(ಸಿ) ಈ ಅಧ್ಯಾಯದ ಉಪಬಂಧಗಳಿಗೆ ಅನುಸಾರವಾಗಿ ರಾಜ್ಯಸರ್ಕಾರಕ್ಕೆ ಸಂದಾಯಗಳನ್ನು ಮಾಡುವ

- ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕುದೇ ಹೊರತು ಇತರ ಉದ್ದೇಶಕ್ಕಾಗಿ ಅಲ್ಲ.

**44. ರಾಜ್ಯ ಪಾಲುಗಾರಿಕೆ ಉಪನಿಧಿ:-** (1) ರಾಜ್ಯ ಅಪೆಕ್ಸ್ ಸಂಘವು ಮುಖ್ಯ ರಾಜ್ಯ ಪಾಲುಗಾರಿಕೆ ನಿಧಿಯಿಂದ ಹಣ ಒದಗಿಸಿದ ಕೇಂದ್ರ ಸಂಘವು ಅಂಥ ಹಣದಿಂದ 'ರಾಜ್ಯ ಪಾಲುಗಾರಿಕೆ ಉಪನಿಧಿ' ಎಂದು ಕರೆಯಲಾಗುವ ಒಂದು ನಿಧಿಯನ್ನು ಸ್ಥಾಪಿಸತಕ್ಕುದು.

(2) ಕೇಂದ್ರ ಸಂಘವು ರಾಜ್ಯ ಪಾಲುಗಾರಿಕೆ ಉಪನಿಧಿಯನ್ನು-

(ಎ) ಪ್ರಾಥಮಿಕ ಸಂಘಗಳಲ್ಲಿ ಷೇರುಗಳನ್ನು ಖರೀದಿಸುವ;

(ಬಿ) ಈ ಅಧ್ಯಾಯದ ಉಪಬಂಧಗಳಿಗನುಸಾರವಾಗಿ ಅಪೆಕ್ಸ್ ಸಂಘಕ್ಕೆ ಸಂದಾಯಗಳನ್ನು ಮಾಡುವ

- ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕುದೇ ಹೊರತು ಇತರ ಉದ್ದೇಶಕ್ಕಾಗಿ ಅಲ್ಲ.

**45. ಷೇರುಗಳನ್ನು ಖರೀದಿಸಲು ರಾಜ್ಯ ಸರ್ಕಾರದ ಅನುಮೋದನೆ:-** ರಾಜ್ಯ ಸರ್ಕಾರದ ಲಿಖಿತಪೂರ್ವಾನುಮೋದನೆ ಪಡೆದ ಹೊರತು, ಮುಖ್ಯ ರಾಜ್ಯ ಪಾಲುಗಾರಿಕೆ ನಿಧಿಯ ಅಥವಾ ರಾಜ್ಯ ಪಾಲುಗಾರಿಕೆಯ ಉಪನಿಧಿಯ ಹಣದಿಂದ ಯಾವುದೇ ಷೇರುಗಳನ್ನು ಸಹಕಾರ ಸಂಘದಲ್ಲಿ ಖರೀದಿಸತಕ್ಕುದಲ್ಲ.

**46. ಕೆಲವು ಷೇರುಗಳ ಸಂಬಂಧದಲ್ಲಿ ಹೊಣೆಗಾರಿಕೆಯನ್ನು ಪರಿಮಿತಗೊಳಿಸುವುದು:-** ಸಹಕಾರ ಸಂಘದಲ್ಲಿ -

(ಎ) ರಾಜ್ಯಸರ್ಕಾರವು; ಅಥವಾ

(ಬಿ) ಸಂದರ್ಭಾನುಸಾರ ಮುಖ್ಯ ರಾಜ್ಯ ಪಾಲುಗಾರಿಕೆ ನಿಧಿಯಿಂದ ಅಥವಾ 'ರಾಜ್ಯ ಪಾಲುಗಾರಿಕೆ ಉಪನಿಧಿ'ಯಿಂದ ಅಪೆಕ್ಸ್ ಸಂಘವು ಅಥವಾ ಕೇಂದ್ರ ಸಂಘವು

- ಯಾವುದೇ ಷೇರುಗಳನ್ನು ಖರೀದಿಸಿರುವಲ್ಲಿ, ಆ ಸರ್ಕಾರ ಸಂಘವನ್ನು ಸಮಾಪ್ತಿಗೊಳಿಸುವ ಸಂದರ್ಭದಲ್ಲಿ ಅಂಥ ಷೇರುಗಳಿಗೆ ಸಂಬಂಧಿಸಿದ ಹೊಣೆಗಾರಿಕೆಯನ್ನು, ಅಂಥ ಷೇರುಗಳಿಗೆ ಸಂಬಂಧಿಸಿ ಸಂದಾಯಮಾಡಿದ ಮೊಬಲಗಿಗೆ ಪರಿಮಿತಗೊಳಿಸತಕ್ಕುದು.

47. **ಲಾಭಾಂಶದ ಮೊಬಲಗಿನ ಮೇಲೆ ನಿರ್ಬಂಧ:-** ಮುಖ್ಯ ರಾಜ್ಯ ಪಾಲುಗಾರಿಕೆ ನಿಧಿಯ ಹಣದಿಂದ ಇತರ ಸಹಕಾರ ಸಂಘಗಳಲ್ಲಿ ಷೇರುಗಳನ್ನು ಖರೀದಿಸಿದ ಅಪೆಕ್ಸ್ ಸಂಘವು ಮತ್ತು 'ರಾಜ್ಯ ಪಾಲುಗಾರಿಕೆ ಉಪನಿಧಿ'ಯ ಹಣದಿಂದ ಪ್ರಾಥಮಿಕ ಸಂಘಗಳಲ್ಲಿ ಷೇರುಗಳನ್ನು ಖರೀದಿಸಿದ ಕೇಂದ್ರ ಸಂಘವು, ಸದರಿ ಷೇರುಗಳ ಮೇಲೆ, ಸಂಬಂಧಪಟ್ಟ ಸಂಘವು ಘೋಷಿಸಿದಂಥ ಮತ್ತು ಆ ಸಂಘದ ಇತರ ಷೇರುದಾರರಿಗೆ ಸಂದಾಯವಾಗುವಂಥ ಲಾಭಾಂಶಕ್ಕೆ ಮಾತ್ರ ಹಕ್ಕುಳ್ಳದ್ದಾಗಿರತಕ್ಕುದು.

48. **ಅಪೆಕ್ಸ್ ಮತ್ತು ಕೇಂದ್ರ ಸಂಘಗಳಿಗೆ ನಷ್ಟಭರ್ತಿ:-** (1) ರಾಜ್ಯ ಪಾಲುಗಾರಿಕೆ ಮುಖ್ಯ ನಿಧಿಯಿಂದ ಯಾವ ಸಹಕಾರ ಸಂಘದಲ್ಲಿ ಷೇರುಗಳನ್ನು ಕೊಳ್ಳಲಾಗಿದೆಯೋ ಆ ಸಹಕಾರ ಸಂಘವನ್ನು ಸಮಾಪ್ತಗೊಳಿಸಿದರೆ ಅಥವಾ ವಿಸರ್ಜಿಸಿದರೆ, ಷೇರುಗಳನ್ನು ಖರೀದಿಸಿದ ಅಪೆಕ್ಸ್ ಸಂಘದ ವಿರುದ್ಧ ಅಂಥ ಖರೀದಿಯಿಂದ ಉದ್ಭವಿಸುವ ಯಾವುದೇ ನಷ್ಟಕ್ಕೆ ಸಂಬಂಧಿಸಿ ರಾಜ್ಯ ಸರ್ಕಾರವು ಯಾವುದೇ ಕ್ಲೇಮು ಮಾಡತಕ್ಕುದಲ್ಲ. ಆದರೆ, ಸಂದರ್ಭಾನುಸಾರ, ಸಮಾಪನ ವ್ಯವಹರಣೆಗಳಲ್ಲಿ ಅಥವಾ ವಿಸರ್ಜನೆಯ ತರುವಾಯ ಅಪೆಕ್ಸ್ ಸಂಘವು ಸ್ವೀಕರಿಸಿದ ಯಾವುದೇ ಹಣಕ್ಕೆ ರಾಜ್ಯಸರ್ಕಾರವು ಹಕ್ಕುಳ್ಳದ್ದಾಗಿರತಕ್ಕುದು.

(2) 'ರಾಜ್ಯಪಾಲುಗಾರಿಕೆ ಉಪನಿಧಿ'ಯಿಂದ ಯಾವ ಸಹಕಾರ ಸಂಘದಲ್ಲಿ ಷೇರುಗಳನ್ನು ಖರೀದಿಸಲಾಗಿದೆಯೋ ಆ ಸಹಕಾರ ಸಂಘವನ್ನು ಸಮಾಪನಗೊಳಿಸಿದರೆ ಅಥವಾ ವಿಸರ್ಜಿಸಿದರೆ ಷೇರುಗಳನ್ನು ಖರೀದಿಸಿದ ಕೇಂದ್ರ ಸಂಘದ ವಿರುದ್ಧ ಅಂಥ ಖರೀದಿಯಿಂದ ಉದ್ಭವಿಸುವ ಯಾವುದೇ ನಷ್ಟಕ್ಕೆ ಸಂಬಂಧಿಸಿ ರಾಜ್ಯ ಸರ್ಕಾರವು ಅಥವಾ ಅಪೆಕ್ಸ್ ಸಂಘವು ಯಾವುದೇ ಕ್ಲೇಮು ಮಾಡತಕ್ಕುದಲ್ಲ. ಆದರೆ ಸಂದರ್ಭಾನುಸಾರ ಸಮಾಪನ ವ್ಯವಹರಣೆಗಳಲ್ಲಿ ಅಥವಾ ವಿಸರ್ಜನೆಯ ತರುವಾಯ ಕೇಂದ್ರ ಸಂಘವು ಸ್ವೀಕರಿಸಿದ ಯಾವುದೇ ಹಣಕ್ಕೆ ಅಪೆಕ್ಸ್ ಸಂಘವು ಹಕ್ಕುಳ್ಳದ್ದಾಗಿರತಕ್ಕುದು ಮತ್ತು ಅಂಥ ಹಣವನ್ನು ಮುಖ್ಯ ರಾಜ್ಯಪಾಲುಗಾರಿಕೆ ನಿಧಿಗೆ ಜಮೆಮಾಡತಕ್ಕುದು.

49. **ಷೇರು ಬಂಡವಾಳ ಮತ್ತು ಲಾಭಾಂಶ ಮೊದಲಾದವುಗಳ ವಿಲೆ:-** (1) ಮುಖ್ಯ ರಾಜ್ಯ ಪಾಲುಗಾರಿಕೆ ನಿಧಿಯ ಹಣದಿಂದ ಖರೀದಿಸಿದ ಇತರ ಸಹಕಾರ ಸಂಘಗಳ ಷೇರುಗಳ ಸಂಬಂಧದಲ್ಲಿ ಅಂಥ ಷೇರುಗಳ ವಿಮೋಚನೆಯ ತರುವಾಯ ಅಥವಾ ಲಾಭಾಂಶ ರೂಪದಲ್ಲಿ ಅಥವಾ ಅನ್ಯಥಾ ಅಪೆಕ್ಸ್ ಸಂಘವು ಸ್ವೀಕರಿಸಿದ ಎಲ್ಲಾ ಹಣವನ್ನು ಮೊದಲು ಆ ನಿಧಿಗೆ ಜಮೆ ಮಾಡತಕ್ಕುದು.

(2) 'ರಾಜ್ಯ ಪಾಲುಗಾರಿಕೆ ಉಪನಿಧಿ'ಯ ಹಣದಿಂದ ಖರೀದಿಸಿದ ಪ್ರಾಥಮಿಕ ಸಂಘಗಳ ಷೇರುಗಳ ಸಂಬಂಧದಲ್ಲಿ, ಅಂಥ ಷೇರುಗಳ ವಿಮೋಚನೆಯ ತರುವಾಯ ಅಥವಾ ಲಾಭಾಂಶದ ರೂಪದಲ್ಲಿ ಅಥವಾ ಅನ್ಯಥಾ ಕೇಂದ್ರ ಸಂಘವು ಸ್ವೀಕರಿಸಿದ ಎಲ್ಲಾ ಹಣವನ್ನು ಮೊದಲು ಆ ನಿಧಿಗೆ ಜಮೆ ಮಾಡತಕ್ಕುದು ಮತ್ತು ಆ ತರುವಾಯ ಅದನ್ನು ಅಪೆಕ್ಸ್ ಸಂಘಕ್ಕೆ ವರ್ಗಾಯಿಸತಕ್ಕುದು, ಆ ಸಂಘವು ಅದನ್ನು ಮುಖ್ಯ ರಾಜ್ಯ ಪಾಲುಗಾರಿಕೆ ನಿಧಿಗೆ ಜಮೆ ಮಾಡತಕ್ಕುದು.

(3) (1)ನೇ ಉಪಪ್ರಕರಣ ಮತ್ತು (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಎಲ್ಲಾ ಹಣವನ್ನು ಮತ್ತು ಲಾಭಾಂಶಗಳನ್ನು, ಷೇರು, ಸಂದರ್ಭಾನುಸಾರ, ಅಪೆಕ್ಸ್ ಸಂಘದ ಅಥವಾ ಕೇಂದ್ರ ಸಂಘದ ಹೆಸರಿನಲ್ಲಿ ಇದ್ದರೂ, ರಾಜ್ಯಸರ್ಕಾರಕ್ಕೆ ಸಂದಾಯ ಮಾಡತಕ್ಕುದು.

(4) (3)ನೇ ಉಪಪ್ರಕರಣದಲ್ಲಿ ಉಪಬಂಧಿಸಿರುವುದನ್ನು ಉಳಿದು, ರಾಜ್ಯಸರ್ಕಾರವು 42ನೇ ಪ್ರಕರಣದ ಮೇರೆಗೆ ಅಪೆಕ್ಸ್ ಸಂಘಕ್ಕೆ ಒದಗಿಸಿದ ಹಣದ ಮೇಲೆ ಅದು ಯಾವುದೇ ಇತರ ಪ್ರತಿಫಲಕ್ಕೆ ಹಕ್ಕು ಹೊಂದಿರತಕ್ಕುದಲ್ಲ.

50. **ಅಪೆಕ್ಸ್ ಅಥವಾ ಕೇಂದ್ರ ಸಂಘದ ಸಮಾಪನದ ತರುವಾಯ 'ಮುಖ್ಯ ರಾಜ್ಯ ಪಾಲುಗಾರಿಕೆ ನಿಧಿ'ಯ ಮತ್ತು 'ರಾಜ್ಯ ಪಾಲುಗಾರಿಕೆ ಉಪನಿಧಿ'ಯ ವಿಲೆ:-** (1) 'ಮುಖ್ಯ ರಾಜ್ಯ ಪಾಲುಗಾರಿಕೆ ನಿಧಿ'ಯನ್ನು ಸ್ಥಾಪಿಸಿದ ಅಪೆಕ್ಸ್ ಸಂಘವನ್ನು ಸಮಾಪನಗೊಳಿಸಿದರೆ ಅಥವಾ ವಿಸರ್ಜಿಸಿದರೆ, ಆ ನಿಧಿಯಲ್ಲಿ ಜಮೆ ಆಗಿರುವ ಅಥವಾ ಅದಕ್ಕೆ ಸಂದಾಯವಾಗತಕ್ಕ ಎಲ್ಲಾ ಹಣಗಳನ್ನು ರಾಜ್ಯಸರ್ಕಾರಕ್ಕೆ ಸಂದಾಯಮಾಡತಕ್ಕುದು.

(2) 'ರಾಜ್ಯ ಪಾಲುಗಾರಿಕೆ ಉಪನಿಧಿ'ಯನ್ನು ಸ್ಥಾಪಿಸಿದ ಕೇಂದ್ರ ಸಂಘವನ್ನು ಸಮಾಪನಗೊಳಿಸಿದರೆ ಅಥವಾ ವಿಸರ್ಜಿಸಿದರೆ, ಆ ನಿಧಿಯಲ್ಲಿ ಜಮೆ ಆಗಿರುವ ಅಥವಾ ಅದಕ್ಕೆ ಸಂದಾಯವಾಗತಕ್ಕ ಎಲ್ಲಾ ಹಣಗಳನ್ನು, ಅದು 43ನೇ ಪ್ರಕರಣದ (2)ನೇ ಉಪಪ್ರಕರಣದ (ಬಿ) ಖಂಡದ ಮೇರೆಗೆ ಯಾವ 'ಮುಖ್ಯ ಪಾಲುಗಾರಿಕೆ ನಿಧಿ'ಯಿಂದ ಹಣವನ್ನು ಪಡೆಯಿತೋ ಆ ನಿಧಿಗೆ ಸಂದಾಯ ಮಾಡತಕ್ಕುದು ಮತ್ತು ಜಮೆ ಮಾಡತಕ್ಕುದು.

51. **ಮುಖ್ಯ ರಾಜ್ಯಪಾಲುಗಾರಿಕೆ ನಿಧಿಯು ಮತ್ತು ರಾಜ್ಯ ಪಾಲುಗಾರಿಕೆ ಉಪನಿಧಿಯು ಆಸ್ತಿಗಳ ಭಾಗವಾಗದಿರುವುದು:-** 'ಮುಖ್ಯ ರಾಜ್ಯಪಾಲುಗಾರಿಕೆ ನಿಧಿ'ಗೆ ಅಥವಾ 'ರಾಜ್ಯ ಪಾಲುಗಾರಿಕೆ ಉಪನಿಧಿಗೆ' ಜಮೆ ಆಗಿರುವ ಯಾವುದೇ ಮೊಬಲಗು, ಸಂದರ್ಭಾನುಸಾರ, ಅಪೆಕ್ಸ್ ಸಂಘದ ಅಥವಾ ಕೇಂದ್ರ ಸಂಘದ ಆಸ್ತಿಯ ಭಾಗವಾಗಿರತಕ್ಕುದಲ್ಲ.

52. **ರಾಜ್ಯ ಸರ್ಕಾರ ಮತ್ತು ಅಪೆಕ್ಸ್ ಸಂಘಗಳು ಮಾಡಿಕೊಳ್ಳುವ ಒಪ್ಪಂದ:-** ಈ ಅಧ್ಯಾಯದ ಹಿಂದೆ ಹೇಳಿದ ಉಪಬಂಧಗಳಿಗೆ ಒಳಪಟ್ಟು,-

(ಎ) 44ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಅಪೆಕ್ಸ್ ಸಂಘಕ್ಕೆ ಹಣವನ್ನು ಒದಗಿಸುವ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ನಿರೂಪಿಸುತ್ತಾ ರಾಜ್ಯ ಸರ್ಕಾರವು ಅಪೆಕ್ಸ್ ಸಂಘದೊಡನೆ ಒಪ್ಪಂದ ಮಾಡಿಕೊಳ್ಳಬಹುದು;

(ಬಿ) 43ನೇ ಪ್ರಕರಣದ (2)ನೇ ಪ್ರಕರಣದ (ಬಿ) ಖಂಡದಲ್ಲಿ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ 'ಮುಖ್ಯ ರಾಜ್ಯ ಪಾಲುಗಾರಿಕೆ ನಿಧಿ'ಯಿಂದ ಕೇಂದ್ರ ಸಂಘಕ್ಕೆ ಹಣವನ್ನು ಒದಗಿಸುವ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ನಿರೂಪಿಸುತ್ತಾ ಅಪೆಕ್ಸ್ ಸಂಘವು ರಾಜ್ಯ ಸರ್ಕಾರದ ಪೂರ್ವಾನುಮೋದನೆ ಪಡೆದು ಆ ಸಂಘದೊಡನೆ ಒಪ್ಪಂದ ಮಾಡಿಕೊಳ್ಳಬಹುದು.

53. **ಸಹಕಾರ ಸಂಘಗಳಿಗೆ ನೀಡಲಾಗುವ ರಾಜ್ಯ ನೆರವಿನ ಇತರ ಪ್ರಕಾರಗಳು:-** ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ರಾಜ್ಯ ಸರ್ಕಾರವು,- (ಎ) ಸಹಕಾರ ಸಂಘಗಳಿಗೆ ಸಾಲಗಳನ್ನು ಅಥವಾ ಮುಂಗಡಗಳನ್ನು ಕೊಡಬಹುದು;

(ಬಿ) ಸಹಕಾರ ಸಂಘವು ಹೊರಡಿಸಿದ ಡಿಬೆಂಚರುಗಳ ಅಸಲಿನ ಮರುಸಂದಾಯದ ಮತ್ತು ಅದರ ಮೇಲಣ ಬಡ್ಡಿಯ ಸಂದಾಯದ ಬಗ್ಗೆ ಖಾತರಿ ಕೊಡಬಹುದು;

(ಸಿ) ಸಹಕಾರ ಸಂಘದ ಷೇರು ಬಂಡವಾಳದ ಮರು ಸಂದಾಯ ಮತ್ತು ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದ ದರಗಳಲ್ಲಿ ಅದರ ಮೇಲಣ ಲಾಭಾಂಶಗಳ ಸಂದಾಯದ ಬಗ್ಗೆ ಖಾತರಿ ಕೊಡಬಹುದು;

(ಡಿ) ಸಹಕಾರ ಸಂಘಕ್ಕೆ ನೀಡಲಾದ ಸಾಲಗಳು ಮತ್ತು ಮುಂಗಡಗಳ ಅಸಲಿನ ಮರುಸಂದಾಯದ ಮತ್ತು ಅವುಗಳ ಮೇಲಣ ಬಡ್ಡಿಯ ಸಂದಾಯದ ಬಗ್ಗೆ ಖಾತರಿ ಕೊಡಬಹುದು; ಮತ್ತು

(ಇ) ಯಾವುದೇ ಸಹಕಾರ ಸಂಘಕ್ಕೆ ಸಹಾಯಧನವೂ ಸೇರಿ ಯಾವುದೇ ಇತರ ಪ್ರಕಾರದ ಹಣಕಾಸು ನೆರವನ್ನು ಕೊಡಬಹುದು.

[1][**53ಎ. ಕೆಲವೊಂದು ಸಂದರ್ಭಗಳಲ್ಲಿ ರಾಜ್ಯಸರ್ಕಾರವು ಸಮಿತಿಯ ಸದಸ್ಯರನ್ನು ನಾಮನಿರ್ದೇಶನ ಮಾಡುವುದು:-** (1) 29ನೇ ಪ್ರಕರಣದಲ್ಲಿ ಏನೇ ಇದ್ದರೂ, ರಾಜ್ಯ ಸರ್ಕಾರವು, ಸಹಕಾರ ಸಂಘದ ಷೇರು ಬಂಡವಾಳಕ್ಕೆ -

(i) ಒಟ್ಟು ಷೇರು ಬಂಡವಾಳದ ಶೇಕಡಾ ಐವತ್ತಕ್ಕೆ, ಅಥವಾ

(ii) ಐದು ಲಕ್ಷ ರೂಪಾಯಿಗಳಿಗೆ

- ಕಡಿಮೆ ಇಲ್ಲದಷ್ಟು ಷೇರು ಬಂಡವಾಳ ವಂತಿಗೆ ನೀಡಿದರೆ, ರಾಜ್ಯ ಸರ್ಕಾರವು, ಸಹಕಾರ ಸಂಘದ ಸಮಿತಿಯ ಸದಸ್ಯರ ಒಟ್ಟು ಸಂಖ್ಯೆಯ ಮೂರನೇ ಒಂದು ಭಾಗದಷ್ಟು ಸದಸ್ಯರನ್ನು ತನ್ನ ಪ್ರತಿನಿಧಿಗಳಾಗಿ ನಾಮ ನಿರ್ದೇಶನ ಮಾಡಲು ಅಧಿಕಾರ ಹೊಂದಿರತಕ್ಕುದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ಸಹಕಾರ ಸಂಘದ ಸಮಿತಿಯ ಒಬ್ಬ ಸದಸ್ಯನಾಗಿ ನಾಮನಿರ್ದೇಶಿತನಾದ ವ್ಯಕ್ತಿಯು (ಇಲ್ಲಿ ಇನ್ನು ಮುಂದೆ, ಈ ಪ್ರಕರಣದಲ್ಲಿ ನಾಮನಿರ್ದೇಶಿತ ಸದಸ್ಯನೆಂದು ಉಲ್ಲೇಖಿಸಲಾಗಿದೆ), ರಾಜ್ಯ ಸರ್ಕಾರದ ಇಷ್ಟ ಪರ್ಯಂತ ಅಂಥ ಸದಸ್ಯನಾಗಿ ಪದಧಾರಣ ಮಾಡತಕ್ಕುದು.

(3) (2)ನೇ ಉಪ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ನಾಮನಿರ್ದೇಶಿತ ಸದಸ್ಯನು, ರಾಜ್ಯ ಸರ್ಕಾರವು ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಅವಧಿಗೆ ಅಂಥ ಸದಸ್ಯನಾಗಿ ಪದಧಾರಣ ಮಾಡತಕ್ಕುದು.

(4) (1)ನೇ ಉಪಪ್ರಕರಣದ ಅಡಿಯಲ್ಲಿ ಸಮಿತಿಯ ಸದಸ್ಯನಾಗಿ ರಾಜ್ಯಸರ್ಕಾರದ ಒಬ್ಬ ಅಧಿಕಾರಿಯನ್ನು ನಾಮನಿರ್ದೇಶಿಸಿದಲ್ಲಿ ಅಂಥ ಅಧಿಕಾರಿಯನ್ನು ಅವನ ಪದದ ಬಲದಿಂದಾಗಿ ನಾಮನಿರ್ದೇಶಿಸಬಹುದು ಮತ್ತು ಅಂಥ ಯಾವುದೇ ನಾಮನಿರ್ದೇಶನವನ್ನು ಮಾಡಿದಾಗ, ಅಂಥ ಅಧಿಕಾರಿಯು ಸಮಿತಿಯ ಯಾವುದೇ ಸಭೆಗೆ ಖುದ್ದಾಗಿ ಹಾಜರಾಗಲು ಸಾಧ್ಯವಾಗದಿದ್ದಲ್ಲಿ, ತನ್ನ ಪ್ರತಿನಿಧಿಯಾಗಿ ಅಧೀನ ಅಧಿಕಾರಿಯನ್ನು ಸಭೆಗೆ ಪ್ರತಿನಿಯೋಜಿಸಬಹುದು ಮತ್ತು ಅಂಥ ಅಧೀನ ಅಧಿಕಾರಿಯನ್ನು ಅಂಥ ಸಭೆಯ ಉದ್ದೇಶಗಳಿಗಾಗಿ ರಾಜ್ಯಸರ್ಕಾರದ ಪ್ರತಿನಿಧಿಯಾಗಿರುವ ನಾಮನಿರ್ದೇಶಿತನಾದ ವ್ಯಕ್ತಿಯೆಂದು ಭಾವಿಸತಕ್ಕುದು.

(5) ಈ ಅಧಿನಿಯಮದಲ್ಲಿ ಏನೇ ಇದ್ದರೂ, ಈ ಅಧಿನಿಯಮದ ಅಡಿಯಲ್ಲಿ ಹಾಗೆ ನಾಮನಿರ್ದೇಶಿತನಾದ ವ್ಯಕ್ತಿಯು 29 ಎಫ್ ಪ್ರಕರಣದ ಅಡಿಯಲ್ಲಿ ಪದಾಧಿಕಾರಿಗಳ ಚುನಾವಣೆಯ ಉದ್ದೇಶಕ್ಕಾಗಿ ಕರೆಯುವ ಸಹಕಾರ ಸಂಘದ ಯಾವುದೇ ಸಭೆಯಲ್ಲಿ ಮತಚಲಾಯಿಸುವ ಹಕ್ಕನ್ನು ಹೊಂದಿರತಕ್ಕುದಲ್ಲ ಅಥವಾ ಸಂಘದ ಪದಾಧಿಕಾರಿಯಾಗುವ ಹಕ್ಕನ್ನು ಹೊಂದಿರತಕ್ಕುದಲ್ಲ.][1]

54. **ನೆರವುನೀಡಲಾದ ಸಂಘದ ನಿಯಂತ್ರಣ:-** ಎರಡು ಲಕ್ಷ ರೂಪಾಯಿಗಳಿಗಿಂತ ಕಡಿಮೆಯಿಲ್ಲದ ಮೊಬಲಗಿನ ರಾಜ್ಯ ನೆರವನ್ನು ಯಾವುದೇ ಸಹಕಾರ ಸಂಘಕ್ಕೆ ಕೊಟ್ಟಿರುವಲ್ಲಿ, ರಾಜ್ಯದ ಹಿತಾಸಕ್ತಿಯ ರಕ್ಷಣೆಗಾಗಿ ಸಾಕಷ್ಟಾಗುವುದೆಂದು ರಾಜ್ಯ ಸರ್ಕಾರವು ಅಭಿಪ್ರಾಯಪಡುವಂಥ ನಿಯಂತ್ರಣವನ್ನು ಅಂಥ ಸಂಘದ ವ್ಯವಹಾರಗಳ ನಿರ್ವಹಣೆಯ ಮೇಲೆ ಚಲಾಯಿಸಲು ಅಧಿಕಾರವನ್ನು ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ಸಾರ್ವಜನಿಕ ಹಿತದೃಷ್ಟಿಯಿಂದ ತೆಗೆದುಕೊಳ್ಳುವುದು ಅಗತ್ಯವೆಂದು ರಾಜ್ಯಸರ್ಕಾರಕ್ಕೆ ಮನದಟ್ಟಾದರೆ ಅದು ಹಾಗೆ ಮಾಡಬಹುದು.

55. **ಈ ಅಧ್ಯಾಯದ ಉಪಬಂಧಗಳು ಇತರ ಕಾನೂನುಗಳ ಮೇಲೆ ಅಧ್ಯಾರೋಹಿಯಾಗಿರುವುದು:-** ಈ ಅಧ್ಯಾಯದ 42ರಿಂದ 54ರ ವರೆಗಿನ ಪ್ರಕರಣಗಳ ಉಪಬಂಧಗಳು, ಈ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಅವುಗಳಿಗೆ ಅಸಂಗತವಾಗಿರುವುದು ಏನೇ ಇದ್ದರೂ, ಪರಿಣಾಮಕಾರಿಯಾಗತಕ್ಕುದು.

---

1. 2000ದ ಅಧಿನಿಯಮ ಸಂಖ್ಯೆ 13ರ ಮೂಲಕ 26.2.2000 ದಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## ಅಧ್ಯಾಯ-VII

## ಸಹಕಾರ ಸಂಘಗಳ ಸ್ವತ್ತುಗಳು ಮತ್ತು ನಿಧಿಗಳು

**56. ನಿಧಿಗಳನ್ನು ವಿಭಾಗಿಸದಿರುವುದು:-** ಸಹಕಾರ ಸಂಘದ ನಿವ್ವಳ ಲಾಭಗಳನ್ನುಳಿದು ಅದರ ನಿಧಿಗಳ ಯಾವುದೇ ಭಾಗವನ್ನು ಬೋನಸ್ಸು ಅಥವಾ ಲಾಭಾಂಶದ ರೂಪದಲ್ಲಿ ಸಂದಾಯಮಾಡತಕ್ಕುದಲ್ಲ ಅಥವಾ ಅನ್ಯಥಾ ಅದರ ಸದಸ್ಯರಿಗೆ ಹಂಚಿಕೊಡತಕ್ಕುದಲ್ಲ:

ಪರಂತು, ಯಾರೇ ಸದಸ್ಯನಿಗೆ, ಸಹಕಾರ ಸಂಘಕ್ಕೆ ಅವನು ಸಲ್ಲಿಸಿದ ಯಾವುವೇ ಸೇವೆಗಳಿಗಾಗಿ ಉಪವಿಧಿಗಳ ಮೂಲಕ ಗೊತ್ತುಪಡಿಸಬಹುದಾದಂಥ ಪರಿಶ್ರಮಧನ, ಭತ್ಯಗಳು ಅಥವಾ ಗೌರವಧನವನ್ನು ಸಂದಾಯಮಾಡಬಹುದು:

[1][ಮತ್ತೂ ಪರಂತು, ಯಾರೇ ಸದಸ್ಯನಿಗೆ ಸಮಿತಿಗಳ ಸಭೆಗಳಿಗೆ ಹಾಜರಾದ ಬಗ್ಗೆ ಅಥವಾ ಸದಸ್ಯನಾಗಿ ಇತರ ಯಾವುದೇ ಪ್ರಕಾರ್ಯಗಳನ್ನು ನಿರ್ವಹಿಸಿದ ಬಗ್ಗೆ ಆ ಉದ್ದೇಶಕ್ಕಾಗಿ ನಿಯಮಿಸಲಾದ ಗರಿಷ್ಠ ದರಕ್ಕಿಂತ ಹೆಚ್ಚಿನ ದರದಲ್ಲಿ ಪ್ರಯಾಣಭತ್ಯ, ದಿನಭತ್ಯ ಅಥವಾ ಅಂಥ ಇತರ ಭತ್ಯಗಳನ್ನು ಅಥವಾ ಫೀಜುಗಳನ್ನು ಸಂದಾಯ ಮಾಡತಕ್ಕುದಲ್ಲ ಮತ್ತು ಸಹಕಾರ ಸಂಘಗಳ ವಿವಿಧ ವರ್ಗಗಳಿಗಾಗಿ ಅಥವಾ ವಿವಿಧ ಉದ್ದೇಶಗಳಿಗಾಗಿ ವಿವಿಧ ದರಗಳನ್ನು ನಿಯಮಿಸಬಹುದು.][1]

**57. ನಿವ್ವಳ ಲಾಭಗಳು ಮತ್ತು ಅವುಗಳ ವಿಲೆ:-** (1) ಸಹಕಾರ ಸಂಘಗಳ ನಿವ್ವಳ ಲಾಭಗಳನ್ನು ನಿಯಮಿಸಬಹುದಾದಂಥ ನಿಯಮಗಳಿಗನುಸಾರವಾಗಿ ನಿರ್ಧರಿಸತಕ್ಕುದು ಮತ್ತು ಸಹಕಾರ ಸಂಘಗಳ ವಿವಿಧ ವರ್ಗಗಳಿಗಾಗಿ ವಿವಿಧ ನಿಯಮಗಳನ್ನು ರಚಿಸಬಹುದು.

(2) ಸಹಕಾರ ಸಂಘವು, ಯಾವುದೇ ವರ್ಷದ ತನ್ನ ನಿವ್ವಳ ಲಾಭಗಳ ಪೈಕಿ ಆ ಲಾಭಗಳ ಶೇಕಡಾ ಇಪ್ಪತ್ತೈದಕ್ಕಿಂತ ಕಡಿಮೆಯಿಲ್ಲದ ಮೊಬಲಗನ್ನು ವಿಧಿಸಲು ನಿಧಿಗೆ ವರ್ಗಾಯಿಸತಕ್ಕುದು.

[2][(2ಎ) ಸಹಕಾರ ಸಂಘವು, ತನ್ನ ನಿವ್ವಳ ಲಾಭದ ಶಿಲ್ಕಿನಿಂದ ಶೇಕಡಾ ಎರಡರಷ್ಟನ್ನು ಕರ್ನಾಟಕ ರಾಜ್ಯ ಸಹಕಾರಿ ಒಕ್ಕೂಟ ನಿಯಮಿತ, ಬೆಂಗಳೂರು ಇವರ ಆಡಳಿತದಲ್ಲಿರುವ ಸಹಕಾರ ಶಿಕ್ಷಣ ನಿಧಿಗೆ ವಂತಿಗೆ ನೀಡತಕ್ಕುದು.

(2ಬಿ) ಸಹಕಾರ ಶಿಕ್ಷಣ ನಿಧಿಗೆ ವಂತಿಗೆ ಕೊಡಲು ವಿಫಲವಾದ ಯಾವ ಸಹಕಾರ ಸಂಘವೂ ತನ್ನ ಸದಸ್ಯರುಗಳಿಗೆ ಲಾಭಾಂಶವನ್ನು ಸಂದಾಯ ಮಾಡತಕ್ಕುದಲ್ಲ.][2]

(3) ನಿವ್ವಳ ಲಾಭಗಳ ಶಿಲ್ಕನ್ನು [3][xxx][3] ಈ ಕೆಳಕಂಡ ಎಲ್ಲ ಉದ್ದೇಶಗಳಿಗೆ ಅಥವಾ ಅವುಗಳಲ್ಲಿ ಯಾವೊಂದಕ್ಕೆ ಉಪಯೋಗಿಸಬಹುದು, ಎಂದರೆ:-

[4][(ಎ) xxxx

(ಬಿ) xxxx ][4]

(ಸಿ) ಸದಸ್ಯರಿಗೆ ಅವರು ಸಂಘದೊಡನೆ ಮಾಡಿದ ವ್ಯವಹಾರದ ಮೊಬಲಗಿನ ಅಥವಾ ಪ್ರಮಾಣದ ಮೇಲೆ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಿದಷ್ಟು ಮತ್ತು ಅಂಥ ರೀತಿಯಲ್ಲಿ ಬೋನಸ್ಸಿನ ಸಂದಾಯ:

ಪರಂತು, ಪತ್ತಿನ ಸಂಘದ ಸದಸ್ಯರಿಗೆ ಯಾವುದೇ ಬೋನಸ್ಸನ್ನು ಸಂದಾಯ ಮಡತಕ್ಕುದಲ್ಲ;

(ಡಿ) ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದ ವಿಶೇಷ ರಚನೆ ಮತ್ತು ಅವುಗಳಿಗೆ ವಂತಿಗೆಗಳು;

(ಇ) ಧರ್ಮಾರ್ಥ ದತ್ತಿಗಳ ಅಧಿನಿಯಮ, 1890ರ (1890ರ ಕೇಂದ್ರ ಅಧಿನಿಯಮ VI) 2ನೇ ಪ್ರಕರಣದಲ್ಲಿ ಪರಿಭಾಷಿಸಿದಂಥ ಯಾವುದೇ ಧರ್ಮಾರ್ಥ ಉದ್ದೇಶಕ್ಕಾಗಿ ನಿವ್ವಳ ಲಾಭಗಳ ಶೇಕಡಾ ಹತ್ತಕ್ಕೆ ಮೀರದ ಮೊಬಲಗುಗಳ ದೇಣಿಗೆ; ಮತ್ತು

(ಎಫ್) ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಿದಷ್ಟು ಮತ್ತು ಅಂಥ ರೀತಿಯಲ್ಲಿ ಸಂಘದ ನೌಕರರಿಗೆ ಬೋನಸ್ಸಿನ ಸಂದಾಯ:

ಪರಂತು, ಯಾವುದೇ ವರ್ಷದಲ್ಲಿ ಯಾರೇ ನೌಕರನಿಗೆ ಸಂದಾಯಮಾಡತಕ್ಕ ಬೋನಸ್ಸು ಎರಡು ತಿಂಗಳ ವೇತನವನ್ನು ಮೀರತಕ್ಕುದಲ್ಲ.

[5][(4) ಸಹಕಾರ ಸಂಘವು, (2), (2ಎ) ಮತ್ತು (3)ನೇ ಉಪ-ಪ್ರಕರಣಗಳಲ್ಲಿ ಮತ್ತು ಸಂಘದ ಉಪ ವಿಧಿಗಳಲ್ಲಿ ಉಪಬಂಧಿಸಿದಂತೆ ಮುರುಗಡೆ ಮಾಡಿದ ನಂತರ ಲಭ್ಯವಿರುವ ನಿವ್ವಳ ಲಾಭಗಳ ಶಿಲ್ಕಿನಿಂದ ಲಾಭಾಂಶಗಳನ್ನು ತನ್ನ ಸದಸ್ಯರಿಗೆ ಸಂದಾಯ ಮಾಡತಕ್ಕುದು.][5]

**58. ನಿಧಿಗಳ ಹೂಡಿಕೆ:-** ಸಹಕಾರ ಸಂಘವು ತನ್ನ ನಿಧಿಗಳನ್ನು -

(ಎ) ಸರ್ಕಾರಿ ಉಳಿತಾಯ ಖಾತೆಯಲ್ಲಿ; ಅಥವಾ

(ಬಿ) ಭಾರತ ನ್ಯಾಸಗಳ ಅಧಿನಿಯಮ, 1882ರ (1882ರ ಕೇಂದ್ರ ಅಧಿನಿಯಮ -II) 20ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಭದ್ರತಾ ಪತ್ರಗಳಲ್ಲಿ; ಅಥವಾ

---

1. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಪ್ರತಿಯೋಜಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
4. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
5. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಸಿ) ಇತರ ಯಾವುದೇ ಸಹಕಾರ ಸಂಘದ ಷೇರುಗಳಲ್ಲಿ ಅಥವಾ ಭದ್ರತಾ ಪತ್ರಗಳಲ್ಲಿ; ಅಥವಾ

[1][(ಡಿ)ಯಾವುದೇ ಸಹಕಾರ ಬ್ಯಾಂಕಿನಲ್ಲಿ; ಅಥವಾ

(ಇ) ರಿಜಿಸ್ಟ್ರಾರನಿಂದ ಅನುಮೋದಿತವಾದ ಯಾವುದೇ ಷೆಡ್ಯೂಲ್ಡ್ ಬ್ಯಾಂಕ್‌ನಲ್ಲಿ:

ಪರಂತು, ಸಹಕಾರ ಬ್ಯಾಂಕು ಅದರ ನಿಯತ ವ್ಯವಹಾರದ ನಿರ್ವಹಣೆಗಾಗಿ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನಲ್ಲಿ ಚಾಲ್ತಿ ಖಾತೆಯನ್ನು ತೆರೆಯಲು ಅಂಥ ಯಾವ ಅನುಮೋದನೆಯ ಅಗತ್ಯ ಇರತಕ್ಕುದಲ್ಲ.][1]

59. **ಸಾಲಗಳ ಮೇಲೆ ನಿರ್ಬಂಧಗಳು:-** [2][(1)][2] ಸಹಕಾರ ಸಂಘವು, ನಿಯಮಿಸಬಹುದಾದಷ್ಟರ ಅಥವಾ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಷ್ಟರ ಮಟ್ಟಿಗೆ ಮತ್ತು ಅಂಥ ಷರತ್ತುಗಳಿಗೊಳಪಟ್ಟು ಮಾತ್ರವೇ ಠೇವಣಿಗಳನ್ನು ಮತ್ತು ಸಾಲಗಳನ್ನು ಸ್ವೀಕರಿಸತಕ್ಕುದು.

[3][(2) (1)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ, ರಿಜಿಸ್ಟ್ರಾರನು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಸಹಕಾರ ಸಂಘಗಳು ಅಥವಾ ಸಹಕಾರ ಸಂಘಗಳ ವರ್ಗವು ಅಂಥ ಆದೇಶದಲ್ಲಿ ನಿಯಮಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು ಪತ್ತಿನ ಏಜೆನ್ಸಿಯಿಂದ ಸಾಲಪಡೆಯಲು ಅಧಿಕಾರವನ್ನು ಹೊಂದಿರತಕ್ಕುದು.][3]

60. **ಸಾಲಗಳ ಮೇಲೆ ನಿರ್ಬಂಧಗಳು:-** (1) ಸಹಕಾರ ಸಂಘವು ಸದಸ್ಯನನ್ನು ಹೊರತುಪಡಿಸಿ ಯಾರೇ ವ್ಯಕ್ತಿಗೆ ಸಾಲ ಕೊಡತಕ್ಕುದಲ್ಲ:

ಪರಂತು, ರಿಜಿಸ್ಟ್ರಾರನ ಸಾಮಾನ್ಯ ಅಥವಾ ವಿಶೇಷ ಮಂಜೂರಾತಿ ಪಡೆದು, ಸಹಕಾರ ಸಂಘವು ಇತರ ಸಹಕಾರ ಸಂಘಕ್ಕೆ ಸಾಲಗಳನ್ನು ಕೊಡಬಹುದು.

(2) (1)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ, ಸಹಕಾರ ಸಂಘವು ಠೇವಣಿದಾರನಿಗೆ ಅವನ ಠೇವಣಿಯ ಭದ್ರತೆಯ ಮೇಲೆ ಸಾಲ ಕೊಡಬಹುದು.

61. **ಸದಸ್ಯರಲ್ಲದ ಇತರರೊಡನೆ ನಡೆಸುವ ಇತರ ವ್ಯವಹಾರಗಳ ಮೇಲೆ ನಿರ್ಬಂಧ:-** 59ನೇ ಮತ್ತು 60ನೇ ಪ್ರಕರಣಗಳಲ್ಲಿ ಉಪಬಂಧಿಸಿರುವುದನ್ನುಳಿದು, ಸದಸ್ಯರಲ್ಲದ ಇತರ ವ್ಯಕ್ತಿಗಳೊಡನೆ ಸಹಕಾರ ಸಂಘವು ನಡೆಸುವ ವ್ಯವಹಾರಗಳು, ನಿಯಮಿಸಬಹುದಾದ ನಿರ್ಬಂಧಗಳು, ಯಾವುದಾದರೂ ಇದ್ದರೆ, ಅವುಗಳಿಗೆ ಒಳಪಟ್ಟಿರತಕ್ಕುದು.

62. **ಭವಿಷ್ಯ ನಿಧಿ:-** (1) ಸಹಕಾರ ಸಂಘವು ತನ್ನ ನೌಕರರ ಪ್ರಯೋಜನಕ್ಕಾಗಿ ವಂತಿಗೆ ಭವಿಷ್ಯ ನಿಧಿಯನ್ನು ಸ್ಥಾಪಿಸಬಹುದು, ಅದಕ್ಕೆ ಸಂಘದ ಉಪವಿಧಿಗಳಿಗನುಸಾರವಾಗಿ ನೌಕರರು ಮತ್ತು ಸಂಘವು ನೀಡಿದ ಎಲ್ಲ ವಂತಿಗೆಗಳನ್ನು ಜಮೆ ಮಾಡತಕ್ಕುದು.

(2) (1)ನೇ ಉಪಪ್ರಕರಣದ ಮೇರೆಗೆ ಸಹಕಾರ ಸಂಘವು ಸ್ಥಾಪಿಸಿದ ವಂತಿಗೆ ಭವಿಷ್ಯ ನಿಧಿಯನ್ನು -

(ಎ) ಸಂಘದ ವ್ಯವಹಾರದಲ್ಲಿ ಉಪಯೋಗಿಸತಕ್ಕುದಲ್ಲ;

(ಬಿ) ಅದು ಸಂಘದ ಆಸ್ತಿಯ ಭಾಗವಾಗಿರತಕ್ಕುದಲ್ಲ; ಮತ್ತು

(ಸಿ) ಯಾವುದೇ ನ್ಯಾಯಾಲಯದ ಅಥವಾ ಇತರ ಪ್ರಾಧಿಕಾರದ ಜಪ್ತಿಗೆ ಗುರಿಯಾಗತಕ್ಕುದಲ್ಲ ಅಥವಾ ಯಾವುದೇ ಇತರ ಆದೇಶಿಕೆಗೆ ಒಳಪಡತಕ್ಕುದಲ್ಲ.

## ಅಧ್ಯಾಯ -VIII

### ಲೆಕ್ಕ ಪರಿಶೋಧನೆ, ವಿಚಾರಣೆ, ಪರಿಶೀಲನೆ ಮತ್ತು ಅಧಿಭಾರ

63. **ಲೆಕ್ಕ ಪರಿಶೋಧನೆ:-** [4][(1) ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನು, ಪ್ರತಿಯೊಂದು ಸಹಕಾರ ಸಂಘದ ಲೆಕ್ಕಪತ್ರಗಳನ್ನು ಪ್ರತಿವರ್ಷ ಕಡೇಪಕ್ಷ ಒಂದು ಬಾರಿಯಾದರೂ ಪರಿಶೋಧನೆ ಮಾಡತಕ್ಕುದು ಅಥವಾ ಈ ಬಗ್ಗೆ ವಿಶೇಷ ಅಥವಾ ಸಾಮಾನ್ಯ ಲಿಖಿತ ಆದೇಶದ ಮೂಲಕ ಅವನು ಅಧಿಕೃತಗೊಳಿಸಿರುವ ವ್ಯಕ್ತಿಯಿಂದ ಲೆಕ್ಕಪರಿಶೋಧನೆ ಮಾಡಿಸತಕ್ಕುದು.][4]

(2) (1)ನೇ ಉಪಪ್ರಕರಣದ ಮೇರೆಗಿನ ಲೆಕ್ಕ ಪರಿಶೋಧನೆಯು, ಅವಧಿಮೀರಿದ ಋಣಗಳು ಯಾವುದಾದರೂ ಇದ್ದರೆ, ಅವುಗಳ ಪರೀಕ್ಷೆ, ನಗದು ಶಿಲ್ಕಿನ ಮತ್ತು ಭದ್ರತಾ ಪತ್ರಗಳ ಪರಿಶೀಲನೆ, ಆಸ್ತಿಗಳ ಮತ್ತು ಹೊಣೆಗಳ ಮೌಲ್ಯ ನಿಗದಿ ಮತ್ತು ಸಂಘದ ಕಾರ್ಯನಿರ್ವಹಣೆಯ ಮತ್ತು ನಿಯಮಿಸಲಾದ ಇತರ ವಿವರಗಳ ಪರೀಕ್ಷೆ ಇವುಗಳನ್ನು ಒಳಗೊಂಡಿರತಕ್ಕುದು.

(3) [5][ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನು][5] ಅಥವಾ [4][ಅಧಿಕೃತಗೊಂಡ ವ್ಯಕ್ತಿಗೆ][4] ಸಂಘಕ್ಕೆ ಸೇರಿದ ಮತ್ತು ಅದರ ಅಭಿರಕ್ಷೆಯಲ್ಲಿರುವ ಎಲ್ಲಾ ಪುಸ್ತಕಗಳನ್ನು, ಲೆಕ್ಕಪತ್ರಗಳನ್ನು, ದಸ್ತಾವೇಜುಗಳನ್ನು, ಕಾಗದಪತ್ರಗಳನ್ನು, ಭದ್ರತಾ ಪತ್ರಗಳನ್ನು, ನಗದು

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1975ರ ಅಧಿನಿಯಮ ಸಂಖ್ಯೆ 2ರ ಮೂಲಕ 17.7.1975 ರಿಂದ ಜಾರಿಗೆ ಬರುವಂತೆ ಪುನರ್ ಸಂಖ್ಯೆ ಕೊಡಲಾಗಿದೆ.
3. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಪ್ರತಿಯೋಜಿಸಲಾಗಿದೆ.
4. 2001ರ ಅಧಿನಿಯಮ ಸಮಖ್ಯೆ 24ರ ಮೂಲಕ ಪ್ರತಿಯೋಜಿಸಲಾಗಿದೆ.
5. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಹಣವನ್ನು ಮತ್ತು ಇತರ ಸ್ವತ್ತುಗಳನ್ನು ಎಲ್ಲಾ ಕಾಲಗಳಲ್ಲಿ ಪರಿಶೀಲಿಸುವ ಅವಕಾಶವಿರತಕ್ಕುದು ಮತ್ತು ಅವನು ಅಂಥ ಯಾವುವೇ ಪುಸ್ತಕಗಳನ್ನು, ಲೆಕ್ಕಪತ್ರಗಳನ್ನು, ನಗದು ಹಣವನ್ನು ಅಥವಾ ಇತರ ಸ್ವತ್ತುಗಳನ್ನು ಸ್ವಾಧೀನದಲ್ಲಿ ಇಟ್ಟುಕೊಂಡಿರುವ ಅಥವಾ ಅವುಗಳ ಅಭಿರಕ್ಷೆಗೆ ಹೊಣೆಗಾರನಾಗಿರುವ ಯಾರೇ ವ್ಯಕ್ತಿಯನ್ನು ಸಂಘದ ಕೇಂದ್ರ ಕಾರ್ಯಸ್ಥಾನದ ಯಾವುದೇ ಸಾರ್ವಜನಿಕ ಕಚೇರಿಯಲ್ಲಿ ಅಥವಾ ಅದರ ಯಾವುದೇ ಶಾಖೆಯಲ್ಲಿ ಹಾಜರುಪಡಿಸುವಂತೆ ಸಮನು ಮಾಡಬಹುದು.

(4) ಸಂಘದ ಅಧಿಕಾರಿ ಅಥವಾ ನೌಕರನಾಗಿರುವ ಅಥವಾ ಯಾವುದೇ ಕಾಲದಲ್ಲಿ ಆಗಿದ್ದ ಪ್ರತಿಯೊಬ್ಬ ವ್ಯಕ್ತಿಯು, ಮತ್ತು ಸಂಘದ ಪ್ರತಿಯೊಬ್ಬ ಸದಸ್ಯನು ಮತ್ತು ಮಾಜಿ ಸದಸ್ಯನು, ಸಂಘದ ವ್ಯವಹಾರ ಮತ್ತು ಕಾರ್ಯನಿರ್ವಹಣೆಯ ಬಗ್ಗೆ [1][ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನು][1] ಅಥವಾ [2][ಅಧಿಕೃತಗೊಂಡ ವ್ಯಕ್ತಿಯು][2] ಅಗತ್ಯಪಡಿಸುವಂಥ ಮಾಹಿತಿಯನ್ನು ಒದಗಿಸತಕ್ಕುದು.

[3][(4ಎ) ಪ್ರತಿಯೊಂದು ಸಹಕಾರ ಸಂಘವು, ಪ್ರತಿಯೊಂದು ಸಹಕಾರ ವರ್ಷಕ್ಕಾಗಿ ಆ ವರ್ಷವು ಕೊನೆಗೊಳ್ಳುವ ಮುನ್ನ ಎರಡು ತಿಂಗಳೊಳಗೆ ಆ ವರ್ಷದ ಜಮೆಗಳು ಹಾಗೂ ವಿತರಣೆಗಳು, ಲಾಭ ಮತ್ತು ನಷ್ಟ ಇವುಗಳನ್ನು ತೋರಿಸುವ ತಃಖ್ತೆಯನ್ನು ಮತ್ತು ಆಯವ್ಯಯಪಟ್ಟಿ ಮತ್ತು ರಿಜಿಸ್ಟ್ರಾರನು ಅಥವಾ ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನು ನಿರ್ದೇಶಿಸಬಹುದಾದಂಥ ಇತರ ವಿವರಪತ್ರಗಳನ್ನು ಮತ್ತು ವಿವರಪಟ್ಟಿಕೆಗಳನ್ನು ತಯಾರಿಸಿ ಒದಗಿಸತಕ್ಕುದು.][3]

[4][(5) ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನು [5][xxxx][5] ಲೆಕ್ಕ ಪರಿಶೋಧನಾ ವರದಿಯ ಪ್ರತಿಗಳನ್ನು ಸಹಕಾರ ಸಂಘದ ರಿಜಿಸ್ಟ್ರಾರ್‌ಗೆ ಮತ್ತು ಹಣಕಾಸು ನೀಡಿಕೆ ಬ್ಯಾಂಕ್‌ಗೆ ಅಥವಾ ಸಾಲನೀಡಿಕೆ ಏಜೆನ್ಸಿಗೆ ಮತ್ತು ಆ ಸಂಘವು ಯಾವುದೇ ಇತರ ಸಹಕಾರ ಸಂಘದೊಡನೆ ಸಂಯೋಜಿತವಾಗಿದ್ದರೆ ಆ ಸಂಘಕ್ಕೆ ಕಳುಹಿಸತಕ್ಕುದು ಮತ್ತು ಲೆಕ್ಕಪರಿಶೋಧನೆಯ ಫಲಿತಾಂಶಗಳನ್ನು ತಿಳಿಸತಕ್ಕುದು.][4]

[4][(6) ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕನು ಅಥವಾ ಅವನಿಂದ ಅಧಿಕೃತನಾದ ಯಾರೇ ಅಧಿಕಾರಿಯು, ಸಹಕಾರ ಸಂಘದ ವಾರ್ಷಿಕ ಮಹಾಸಭೆಗೆ ಸಂಬಂಧಿಸಿದ ಎಲ್ಲ ನೋಟೀಸುಗಳನ್ನು ಮತ್ತು ಪ್ರತಿಯೊಂದು ಮಾಹಿತಿಯನ್ನು ಸ್ವೀಕರಿಸಲು ಮತ್ತು ಅಂತಹ ಸಭೆಗೆ ಹಾಜರಾಗಲು ಮತ್ತು ಲೆಕ್ಕಪರಿಶೋಧಕನಾಗಿ ತನಗೆ ಸಂಬಂಧಪಟ್ಟಿರುವ ಯಾವುದೇ ಕಾರ್ಯಕ್ಕೆ ಸಂಬಂಧಪಟ್ಟಂತೆ ಅಲ್ಲಿ ಅಹವಾಲು ಆಲಿಸಲು ಹಕ್ಕುಳ್ಳವನಾಗಿರತಕ್ಕುದು.

(7) (1)ನೇ ಉಪ-ಪ್ರಕರಣದ ಮೇರೆಗೆ ನಡೆಸಿದ ಲೆಕ್ಕಪರಿಶೋಧನೆಯ ಫಲಿತಾಂಶವು, ಸಂಘದ ಕಾರ್ಯನಿರ್ವಹಣೆಯಲ್ಲಿನ ಯಾವುದೇ ದೋಷಗಳನ್ನು ಬಹಿರಂಗಪಡಿಸಿದರೆ, ಸಂಘವು, ಲೆಕ್ಕ ಪರಿಶೋಧನೆಯ ದಿನಾಂಕದಿಂದ ಆರು ತಿಂಗಳ ಒಳಗಾಗಿ, ಲೆಕ್ಕ ಪರಿಶೋಧನೆಯಲ್ಲಿ ಎತ್ತಿತೋರಿಸಿದ ದೋಷಗಳನ್ನು ಅಥವಾ ಅಕ್ರಮಗಳನ್ನು ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನಿಗೆ ಮತ್ತು ರಿಜಿಸ್ಟ್ರಾರನಿಗೆ ವಿವರಿಸತಕ್ಕುದು ಮತ್ತು ದೋಷಗಳನ್ನು ಸರಿಪಡಿಸಲು ಮತ್ತು ಅಕ್ರಮಗಳನ್ನು ಸರಿಪಡಿಸಲು ಕ್ರಮ ಕೈಗೊಳ್ಳತಕ್ಕುದು. ನಂತರ, ಸಂಘವು ತೆಗೆದುಕೊಂಡ ಕ್ರಮದ ಬಗ್ಗೆ ರಿಜಿಸ್ಟ್ರಾರನಿಗೆ ವರದಿ ಮಾಡತಕ್ಕುದು. ರಿಜಿಸ್ಟರಾರನು ಸಂಘ ಅಥವಾ ಅದರ ಪದಾಧಿಕಾರಿಗಳಿಗೆ ದೋಷಗಳನ್ನು ಸರಿಪಡಿಸಲು ಆದೇಶದಲ್ಲಿ ನಿರ್ದಿಷ್ಟಪಡಿಸಿರಬಹುದಾದ ಕ್ರಮವನ್ನು ಅದರಲ್ಲಿ ನಿರ್ದಿಷ್ಟಪಡಿಸಿರುವ ಅವಧಿಯೊಳಗೆ ಕೈಗೊಳ್ಳುವಂತೆ ನಿರ್ದೇಶಿಸಿ, ಒಂದು ಆದೇಶವನ್ನೂ ಸಹ ಹೊರಡಿಸಬಹುದು.

(8) (ಎ) ಲೆಕ್ಕ ಪರಿಶೋಧನಾ ವರದಿಯಲ್ಲಿ ಆಕ್ಷೇಪಣೆಗೆ ಒಳಪಟ್ಟಿರುವ ಯಾವುದೇ ಬಾಬಿನ ಬಗ್ಗೆ ಅಹವಾಲುಳ್ಳ ಯಾವುದೇ ಸಂಘವು, ಲೆಕ್ಕಪರಿಶೋಧನಾ ವರದಿಯನ್ನು ಸ್ವೀಕರಿಸಿದ ದಿನದಿಂದ ಆರು ತಿಂಗಳ ಒಳಗಾಗಿ ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ಅದನ್ನು ಬಿಟ್ಟುಬಿಡುವಂತೆ ಅರ್ಜಿ ಸಲ್ಲಿಸಬಹುದು;

(ಬಿ) ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರು, (ಎ) ಖಂಡದ ಮೇರೆಗೆ ಅರ್ಜಿ ಸ್ವೀಕರಿಸಿದ ನಂತರ, ಆಕ್ಷೇಪಣೆಗೆ ಸಂಬಂಧಿಸಿದ ದಸ್ತಾವೇಜುಗಳು ಯಾವುವಾದರೂ ಇದ್ದರೆ, ಅವುಗಳನ್ನು ಹಾಜರುಪಡಿಸುವಂತೆ ತಿಳಿಸಬಹುದು ಮತ್ತು ಅವುಗಳನ್ನು ಪರಿಶೀಲಿಸಬಹುದು. ಅವನು ಲೆಕ್ಕಪರಿಶೋಧಕನೂ ಸೇರಿದಂತೆ ಯಾರೇ ವ್ಯಕ್ತಿಯನ್ನು ವಿಚಾರಿಸಬಹುದು ಮತ್ತು ಲೆಕ್ಕ ಪರಿಶೋಧನಾ ಆಕ್ಷೇಪಣೆಯನ್ನು ಬಿಟ್ಟು ಬಿಡುವುದಕ್ಕೆ ಅಥವಾ ಅದರ ಸ್ಥಿರೀಕರಣಕ್ಕೆ ಆದೇಶಿಸಬಹುದು ಹಾಗೂ, ಬಿಟ್ಟುಬಿಟ್ಟರೆ ಆಕ್ಷೇಪಣೆಯುನ್ನು ಸಂಘದ ಬ್ಯಾಲೆನ್ಸ್ ಶೀಟಿನಿಂದ ತೆಗೆದುಹಾಕಲಾಗಿದೆಯೆಂದಾಗತಕ್ಕುದು ಮತ್ತು ಸ್ಥಿರೀಕರಿಸಿದರೆ ಆಕ್ಷೇಪಣೆಗೆ ಒಳಪಟ್ಟಿದ್ದ ಮೊಬಲಗನ್ನು ವಸೂಲಿ ಮಾಡಬಹುದು.

(9) ರಿಜಿಸ್ಟ್ರಾರನು, ಲೆಕ್ಕ ಪರಿಶೋಧನೆಯಲ್ಲಿ ಕಂಡುಬಂದ ದೋಷಗಳ ಸಂಖ್ಯೆ, ಸರಿಪಡಿಸಿದ ದೋಷಗಳ ಸಂಖ್ಯೆ, ದೋಷಗಳನ್ನು ನಿವಾರಿಸಲು ತೆಗೆದುಕೊಂಡ ಕ್ರಮ ಮತ್ತು ಉಳಿಕೆ ಏನಾದರೂ ಇದ್ದರೆ ಅದಕ್ಕೆ ಕಾರಣಗಳನ್ನು ವಿವರಗಳನ್ನು ಒದಗಿಸಿ, ರಾಜ್ಯ ಸರ್ಕಾರಕ್ಕೆ ಅರ್ಧವಾರ್ಷಿಕ ವರದಿಗಳನ್ನು ಸಲ್ಲಿಸತಕ್ಕುದು. ಅಂತಹ ವರದಿಯ ಒಂದು ಪ್ರತಿಯನ್ನು ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕನಿಗೆ ಕಳುಹಿಸತಕ್ಕುದು.

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಪ್ರತಿಯೋಜಿಸಲಾಗಿದೆ.
3. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಬಿಟ್ಟುಬಿಡಲಾಗಿದೆ.

(10) ಸಹಕಾರ ಸಂಘವು ಸಲ್ಲಿಸಿದ ಅರ್ಜಿಯ ಮೇಲೆ ಅಥವಾ ಅನ್ಯಥಾ ರಾಜ್ಯ ಸರ್ಕಾರಕ್ಕೆ, ಸಂಘದ ಯಾವುದೇ ಲೆಕ್ಕ ಪತ್ರವನ್ನು ಮರು ಲೆಕ್ಕಪರಿಶೋಧನೆ ಮಾಡುವುದು ಅವಶ್ಯಕ ಅಥವಾ ಯುಕ್ತವೆಂದು ಕಂಡುಬಂದರೆ, ರಾಜ್ಯ ಸರ್ಕಾರವು, ಆದೇಶದ ಮೂಲಕ ಅಂತಹ ಮರು ಲೆಕ್ಕ ಪರಿಶೋಧನೆಗೆ ವ್ಯವಸ್ಥೆ ಮಾಡಬಹುದು ಮತ್ತು ಲೆಕ್ಕ ಪರಿಶೋಧನೆಗೆ ಅನ್ವಯವಾಗುವ ಅಧಿನಿಯಮ ಮತ್ತು ನಿಯಮಗಳು, ಉಪಬಂಧಗಳು ಅಂಥ ಮರು ಲೆಕ್ಕಪರಿಶೋಧನೆಗೆ ಅನ್ವಯವಾಗತಕ್ಕುದು:

[1][xxxx][1]

ಮತ್ತೂ ಪರಂತು, ನಿಯತ ಲೆಕ್ಕ ಪರಿಶೋಧನೆಯ ಸಮಯದಲ್ಲಿ ಲೆಕ್ಕ ಪರಿಶೋಧಕನು ಪತ್ತೆಹಚ್ಚಿರದ ಅಥವಾ ಸರಿಯಾಗಿ ಪರಿಶೀಲನೆ ಮಾಡಿಲ್ಲದ ಹಣದ ಬಗ್ಗೆ ಮೋಸ ಆಗಿದೆಯೆಂಬುದು ಅಥವಾ ದುರ್ವಿನಿಯೋಗವಾಗಿದೆಯೆಂಬುದು ಅಥವಾ ದುರುಪಯೋಗವಾಗಿದೆಯೆಂಬುದು ಮೇಲ್ನೋಟಕ್ಕೆ ಕಂಡುಬಂದರೆ ಅಥವಾ ಲೆಕ್ಕಪತ್ರಗಳ ತಪ್ಪು ವರ್ಗೀಕರಣ ಮಾಡಿದ್ದರೆ ಅಥವಾ ಸಂಘದ ಹಣಕಾಸು ಪರಿಸ್ಥಿತಿಯನ್ನು ಸತ್ಯವಾಗಿ ಪ್ರತಿಬಿಂಬಿಸುವ ದೃಷ್ಟಿಯಿಂದ ಯಾವುದೇ ಇತರ ಸಮಂಜಸ ಕಾರಣಗಳಿಗಾಗಿ ಅಂಥ ಮರುಲೆಕ್ಕ ಪರಿಶೋಧನೆಗೆ ಆದೇಶ ಮಾಡತಕ್ಕುದು.

(11) ಹಿಂದಿನ ಉಪ-ಪ್ರಕರಣಗಳಲ್ಲಿ ಏನೇ ಇದ್ದರೂ, ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನು, ಯಾವುದೇ ಸಹಕಾರ ಸಂಘದ ಯಾವುದೇ ವರ್ಷಕ್ಕೆ ಸಂಬಂಧಪಟ್ಟ ಲೆಕ್ಕಪತ್ರಗಳನ್ನು ಮರುಪರಿಶೀಲನೆ ಮಾಡಲು ಅಥವಾ ಮರು ಸತ್ಯಾಪನೆ ಮಾಡಲು ಮತ್ತು ಅಂಥ ಮರುಪರೀಕ್ಷೆ ಅಥವಾ ಮರು ಸತ್ಯಾಪನೆಯ ಸಮಯದಲ್ಲಿ ಕಂಡುಬಂದ ಲೋಪಗಳನ್ನು, ಮುಂದಿನ ವರ್ಷ ಮಾಡಬೇಕಾದ ಲೆಕ್ಕಪರಿಶೋಧನಾ ವರದಿಯಲ್ಲಿ ಸೇರಿಸಿಕೊಳ್ಳಲು ಅಧಿಕಾರ ಹೊಂದಿರತಕ್ಕುದು.][4]

**64. ರಿಜಿಸ್ಟ್ರಾರನಿಂದ ವಿಚಾರಣೆ:-** (1) ರಿಜಿಸ್ಟ್ರಾರನು ಸ್ವಇಚ್ಛೆಯಿಂದ ತಾನೇ ಅಥವಾ ಲಿಖಿತ ಆದೇಶದ ಮೂಲಕ ತಾನು ಅಧಿಕೃತಗೊಳಿಸಿದ ವ್ಯಕ್ತಿಯ ಮೂಲಕ, ಆ ಆದೇಶದಲ್ಲಿ ನಿರ್ದಿಷ್ಟಪಡಿಸಿದ ಸಹಕಾರ ಸಂಘದ ರಚನೆ, ಕಾರ್ಯನಿರ್ವಹಣೆ ಮತ್ತು ಹಣಕಾಸು ಪರಿಸ್ಥಿತಿ [2][ಇವುಗಳಿಗೆ ಸಂಬಂಧಿಸಿದ ಯಾವುದೇ ವಿಷಯದಲ್ಲಿ][2] ವಿಚಾರಣೆ ನಡೆಸಬಹುದು.

(2) (1)ನೇ ಉಪಪ್ರಕರಣದಲ್ಲಿ ಉಲ್ಲಿಖಿತವಾದ ಸ್ವರೂಪದ ವಿಚಾರಣೆಯನ್ನು -

(ಎ) ಸಂಬಂಧಪಟ್ಟ ಸಂಘವು ಯಾವ ಸಹಕಾರ ಸಂಘದೊಡನೆ ಸಂಯೋಜಿತ ವಾಗಿದೆಯೋ ಆ ಸಹಕಾರ ಸಂಘ;

(ಬಿ) ಸಂಘದ ಸಮಿತಿಯ ಬಹುಸಂಖ್ಯಾತ ಸದಸ್ಯರು; ಅಥವಾ

(ಸಿ) ಸಂಘದ ಸದಸ್ಯರ ಒಟ್ಟು ಸಂಖ್ಯೆಯ ಮೂರನೇ ಒಂದು ಭಾಗಕ್ಕೆ ಕಡಿಮೆಯಿಲ್ಲದಷ್ಟು ಸದಸ್ಯರು

- ಸಲ್ಲಿಸುವ ಅರ್ಜಿಯ ಮೇಲೆ ನಡೆಸತಕ್ಕುದು.

[3][(2ಎ) (1)ನೇ ಉಪ-ಪ್ರಕರಣದ ಮೇರೆಗಿನ ವಿಚಾರಣೆಯು [4][ಹನ್ನೆರಡು ತಿಂಗಳುಗಳ ಅವಧಿಯೊಳಗೆ ಪೂರ್ಣಗೊಳಿಸತಕ್ಕದು, ಈ ಅವಧಿಯನ್ನು [5][ಲಿಖಿತದಲ್ಲಿ ದಾಖಲಿಸಬೇಕಾದ ಕಾರಣಗಳಿಗಾಗಿ ರಿಜಿಸ್ಟ್ರಾರನು][5] ಆರುತಿಂಗಳ ಮತ್ತಷ್ಟು ಅವಧಿಗೆ ವಿಸ್ತರಿಸಬಹುದು.][4]][3]

(3) ರಿಜಿಸ್ಟ್ರಾರನು ಅಥವಾ (1)ನೇ ಉಪಪ್ರಕರಣದ ಮೇರೆಗೆ ಅವನು ಅಧಿಕೃತಗೊಳಿಸಿದ ವ್ಯಕ್ತಿಗಳು ಈ ಪ್ರಕರಣದ ಮೇರೆಗಿನ ವಿಚಾರಣೆಯ ಉದ್ದೇಶಗಳಿಗಾಗಿ ಈ ಕೆಳಕಂಡ ಅಧಿಕಾರಗಳನ್ನು ಹೊಂದಿರತಕ್ಕುದು, ಎಂದರೆ -

(ಎ) ಅವನು ಎಲ್ಲಾ ಕಾಲಗಳಲ್ಲಿ ಸಂಘಕ್ಕೆ ಸೇರಿದ ಮತ್ತು ಅದರ ಅಭಿರಕ್ಷೆಯಲ್ಲಿರುವ ಎಲ್ಲಾ ಪುಸ್ತಕಗಳನ್ನು,ಲೆಕ್ಕಪತ್ರಗಳನ್ನು, ದಸ್ತಾವೇಜುಗಳನ್ನು, ಕಾಗದಪತ್ರಗಳನ್ನು, ಭದ್ರತಾ ಪತ್ರಗಳನ್ನು, ನಗದು ಹಣವನ್ನು ಮತ್ತು ಇತರ ಸ್ವತ್ತುಗಳನ್ನು ಪರಿಶೀಲಿಸಲು ಮುಕ್ತ ಅವಕಾಶ ಹೊಂದಿರತಕ್ಕುದು ಮತ್ತು ಅಂಥ ಯಾವುವೇ ಪುಸ್ತಕಗಳನ್ನು, ಲೆಕ್ಕಪತ್ರಗಳನ್ನು, ದಸ್ತಾವೇಜುಗಳನ್ನು, ಭದ್ರತಾ ಪತ್ರಗಳನ್ನು, ನಗದು ಹಣವನ್ನು ಅಥವಾ ಇತರ ಸ್ವತ್ತುಗಳನ್ನು ಸ್ವಾಧೀನದಲ್ಲಿ ಇಟ್ಟುಕೊಂಡಿರುವ ಅಥವಾ ಅವುಗಳ ಅಭಿರಕ್ಷೆಗೆ ಹೊಣೆಗಾರನಾದ ಯಾರೇ ವ್ಯಕ್ತಿಯನ್ನು ಅವುಗಳನ್ನು ಸಂಘದ ಕೇಂದ್ರ ಕಾರ್ಯಸ್ಥಾನದಲ್ಲಿರುವ ಯಾವುದೇ ಸಾರ್ವಜನಿಕ ಕಚೇರಿಯಲ್ಲಿ ಅಥವಾ ಇತರ ಯಾವುದೇ ಶಾಖೆಯಲ್ಲಿ ಹಾಜರ್ಪಡಿಸುವಂತೆ ಸಮನು ಮಾಡಬಹುದು;

(ಬಿ) ಅವನು, ಸಂಘದ ಯಾವುವೇ ವ್ಯವಹಾರಗಳ ತಿಳಿವಳಿಕೆ ಹೊಂದಿರುವವನೆಂದು ನಂಬಲು ಕಾರಣವಿರುವ ಯಾರೇ ವ್ಯಕ್ತಿಯನ್ನು ಸಂಘದ ಕೇಂದ್ರ ಕಾರ್ಯಸ್ಥಾನದಲ್ಲಿರುವ ಯಾವುದೇ ಸಾರ್ವಜನಿಕ ಕಚೇರಿಯಲ್ಲಿ ಅಥವಾ ಅದರ ಯಾವುದೇ ಶಾಖೆಯಲ್ಲಿ ತನ್ನ ಮುಂದೆ ಹಾಜರಾಗುವಂತೆ ಸಮನು ಮಾಡಬಹುದು ಮತ್ತು ಅಂಥ ವ್ಯಕ್ತಿಯನ್ನು ಪ್ರಮಾಣದ ಮೇಲೆ ಪರೀಕ್ಷಿಸಬಹುದು; ಮತ್ತು

1. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಬಿಟ್ಟುಬಿಡಲಾಗಿದೆ.
2. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ 20.1.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಪ್ರತಿಯೋಜಿಸಲಾಗಿದೆ.
5. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಪ್ರತಿಯೋಜಿಸಲಾಗಿದೆ.

(ಸಿ) (i) ಅವನು ಸಂಘದ ಸರ್ವ ಸದಸ್ಯರ ಸಭೆಯನ್ನು ಕರೆಯುವ ನೋಟೀಸಿನ ಅವಧಿಯನ್ನು ನಿರ್ದಿಷ್ಟಪಡಿಸುವ ಯಾವುದೇ ನಿಯಮ ಅಥವಾ ಉಪವಿಧಿ ಇದ್ದಾಗ್ಯೂ, ಸಂಘದ [1][ಪದಾಧಿಕಾರಿಗಳ][1]ನ್ನು, ತಾನು ನಿರ್ದೇಶಿಸಬಹುದಾದಂಥ ಸಮಯದಲ್ಲಿ ಮತ್ತು ಸಂಘದ ಕೇಂದ್ರ ಕಾರ್ಯಸ್ಥಾನದಲ್ಲಿರುವ ಯಾವುದೇ ಸ್ಥಳದಲ್ಲಿ ಅಥವಾ ಅದರ ಯಾವುದೇ ಶಾಖೆಯಲ್ಲಿ ಸರ್ವಸದಸ್ಯರ ಸಭೆಯನ್ನು ಕರೆಯುವಂತೆ ಮತ್ತು ಅಂಥ ವಿಷಯಗಳನ್ನು ನಿರ್ಧರಿಸುವಂತೆ ಅಗತ್ಯಪಡಿಸಬಹುದು, ಮತ್ತು ಅಂಥ ಸಭೆಯನ್ನು ಕರೆಯಲು ಸಂಘದ [1][ಪದಾಧಿಕಾರಿಗಳು][1] ನಿರಾಕರಿಸಿದಲ್ಲಿ ಅಥವಾ ತಪ್ಪಿದಲ್ಲಿ ಅದನ್ನು ತಾನೇ ಕರೆಯಲು ಅಧಿಕಾರವನ್ನು ಹೊಂದಿರತಕ್ಕುದು;

(ii) (i)ನೇ ಖಂಡದ ಮೇರೆಗೆ ಕರೆಯಲಾದ ಯಾವುದೇ ಸಭೆಯು, ಸಂಘದ ಉಪವಿಧಿಗಳ ಮೇರೆಗೆ ಕರೆಯಲಾದ ಸರ್ವಸದಸ್ಯರ ಸಭೆಯ ಅಧಿಕಾರಗಳನ್ನು ಹೊಂದಿರತಕ್ಕುದು ಮತ್ತು ಅದರ ವ್ಯವಹರಣೆಗಳು ಅಂಥ ಸಭೆಗೆ ಯಾವುದೇ ಕೋರಂ ಅಗತ್ಯವಿರತಕ್ಕುದಲ್ಲ ಎಂಬುದನ್ನು ಹೊರತುಪಡಿಸಿ ಅಂಥ ಉಪವಿಧಿಗಳಿಂದ ವಿನಿಯಮಿಸಲ್ಪಡತಕ್ಕುದು.

(4) ಈ ಪ್ರಕರಣದ ಮೇರೆಗೆ ವಿಚಾರಣೆಯನ್ನು ನಡೆಸಿರುವಲ್ಲಿ, ರಿಜಿಸ್ಟ್ರಾರನು ಆ ವಿಚಾರಣೆಯ ಫಲಿತಾಂಶವನ್ನು ಆ ಸಂಘಕ್ಕೆ ಮತ್ತು ಆ ಸಂಘವು ಸಂಯೋಜಿತವಾದ ಸಹಕಾರ ಸಂಘವು ಯಾವುದಾದರೂ ಇದ್ದರೆ ಅದಕ್ಕೆ [2][ಮತ್ತು ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ಸಹ][2] ತಿಳಿಸತಕ್ಕುದು.

65. **ಸಹಕಾರ ಸಂಘದ ಪುಸ್ತಕಗಳ ಪರಿಶೀಲನೆ:-** (1) ರಿಜಿಸ್ಟ್ರಾರನು ಸ್ವಇಚ್ಛೆಯಿಂದ ಅಥವಾ ಸಹಕಾರ ಸಂಘದ ಲೇಣೇದಾರನ ಅರ್ಜಿಯ ಮೇಲೆ ಸಂಘದ ಪುಸ್ತಕಗಳನ್ನು ಪರಿಶೀಲಿಸಬಹುದು ಅಥವಾ ಈ ಬಗ್ಗೆ ಲಿಖಿತ ಆದೇಶದ ಮೂಲಕ ತಾನು ಅಧಿಕೃತಗೊಳಿಸಿದ ಯಾರೇ ವ್ಯಕ್ತಿಗೆ ಪರಿಶೀಲಿಸುವಂತೆ ನಿರ್ದೇಶಿಸಬಹುದು:

ಪರಂತು, ಲೇಣೇದಾರನು ಅರ್ಜಿಸಲ್ಲಿಸಿರುವಲ್ಲಿ ಅವನು -

(ಎ) ರಿಜಿಸ್ಟ್ರಾರನಿಗೆ, ಆ ಋಣವು ಆಗ ಬಾಕಿಯಾಗಿದ್ದ ಮೊತ್ತವೆಂದು ಮತ್ತು ಅದರ ಸಂದಾಯಕ್ಕೆ ತಾನು ತಗಾದೆ ಮಾಡಿದ್ದೇನೆಂದು ಮತ್ತು ಯುಕ್ತ ಕಾಲದೊಳಗೆ ಅದರ ತೀರ್ವಳಿ ಪ್ರಾಪ್ತವಾಗಿಲ್ಲವೆಂದು ಮನದಟ್ಟು ಮಾಡಿಕೊಟ್ಟ ಹೊರತು; ಮತ್ತು

(ಬಿ) ರಿಜಿಸ್ಟ್ರಾರನು ಅಗತ್ಯಪಡಿಸಬಹುದಾದಂತೆ ಪ್ರಸ್ತಾವಿತ ಪರಿಶೀಲನೆಯ ವೆಚ್ಚದ ಬಗ್ಗೆ ಭದ್ರತೆಯಾಗಿ ಮೊತ್ತವನ್ನು ರಿಜಿಸ್ಟ್ರಾರನ ಬಳಿ ಠೇವಣಿ ಇಟ್ಟ ಹೊರತು

- ಆ ಅರ್ಜಿಯ ಮೇಲೆ ಅಂಥ ಯಾವುದೇ ಪರಿಶೀಲನೆ ನಡೆಸತಕ್ಕುದಲ್ಲ.

(2) ರಿಜಿಸ್ಟ್ರಾರನು, [1][ಅಂಥ ಯಾವುದೇ ಪರಿಶೀಲನೆಯ ಫಲಿತಾಂಶವನ್ನು ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕನಿಗೆ ಮತ್ತು][1] -

(ಎ) ಪರಿಶೀಲನೆಯನ್ನು ಸ್ವಇಚ್ಛೆಯಿಂದ ಮಾಡಿರುವಲ್ಲಿ, ಸಂಘಕ್ಕೆ; ಮತ್ತು

(ಬಿ) ಪರಿಶೀಲನೆಯನ್ನು ಲೇಣೇದಾರನ ಅರ್ಜಿಯ ಮೇಲೆ ಮಾಡಿರುವಲ್ಲಿ, ಲೇಣೇದಾರನಿಗೆ ಮತ್ತು ಆ ಸಂಘಕ್ಕೆ

- ತಿಳಿಸತಕ್ಕುದು.

[3]**[65ಎ. [4][ವಿಚಾರಣೆ][4] ಹಾಗೂ ಪರಿಶೀಲನೆಯ ವರದಿಯನ್ನು ಮತ್ತು ಅಂತಿಮ ವರದಿಯನ್ನು ಪತ್ತಿನ ಏಜೆನ್ಸಿಗೆ ಒದಗಿಸತಕ್ಕುದು:-** ರಿಜಿಸ್ಟ್ರಾರನು, ಅಂಥ ಸಹಕಾರ ಸಂಘದ ಯಾವುದೇ ವಿಚಾರಣೆ ಅಥವಾ [4][ಪರಿಶೀಲನೆಯಲ್ಲಿ ಗಮನಿಸಿದ ನ್ಯೂನತೆಗಳತ್ತ][4] ಆ ಸಹಕಾರ ಸಂಘಕ್ಕೆ ಹಣಕಾಸು ನೀಡುವ ಪತ್ತಿನ ಏಜೆನ್ಸಿಯ ಗಮನ ಸೆಳೆಯತಕ್ಕುದು ಮತ್ತು ಅಂಥ ಪತ್ತಿನ ಏಜೆನ್ಸಿಯ ಲಿಖಿತದಲ್ಲಿ ತಗಾದೆ ಮಾಡಿದರೆ [4][ಅಂಥ ವಿಚಾರಣೆಯ ಅಥವಾ ಪರಿಶೀಲನಾ ವರದಿಯ][4] ಒಂದೊಂದು ಪ್ರತಿಯನ್ನು ಸಹ ಒದಗಿಸತಕ್ಕುದು.

[2][**ವಿವರಣೆ:-** ಈ ಪ್ರಕರಣದ ಮತ್ತು 65ಬಿ ಪ್ರಕರಣದ ಉದ್ದೇಶಕ್ಕಾಗಿ ಸಾಲನೀಡಿಕೆ ಏಜೆನ್ಸಿಯು ಹಣಕಾಸು ನೀಡಿಕೆ ಬ್ಯಾಂಕನ್ನು ಒಳಗೊಳ್ಳುತ್ತದೆ.][2]

65ಬಿ. **ಪತ್ತಿನ ಏಜೆನ್ಸಿಯಿಂದ ಸಹಕಾರ ಸಂಘದ ಪುಸ್ತಕಗಳ ಪರಿಶೀಲನೆ:-** (1) ಪತ್ತಿನ ಏಜೆನ್ಸಿಯು, ಯಾವ ಸಹಕಾರ ಸಂಘವು ಆ ಪತ್ತಿನ ಏಜೆನ್ಸಿಗೆ ಹಣಕಾಸು ನೆರವಿಗೆ ಅರ್ಜಿ ಸಲ್ಲಿಸಿರುವುದೋ ಅಥವಾ ಅದಕ್ಕೆ ಋಣಿಯಾಗಿರುವುದೋ ಆ ಯಾವುದೇ ಸಹಕಾರ ಸಂಘದ ಪುಸ್ತಕಗಳನ್ನು ಪರಿಶೀಲಿಸಲು ಅಧಿಕಾರ ಹೊಂದಿರತಕ್ಕುದು.

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1975ರ ಅಧಿನಿಯಮ ಸಂಖ್ಯೆ 2ರ ಮೂಲಕ 17.7.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1980ರ ಅಧಿನಿಯಮ ಸಂಖ್ಯೆ 3ರ ಮೂಲಕ 11.8.1977 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಪರಿಶೀಲನೆಯನ್ನು ಪತ್ತಿನ ಏಜೆನ್ಸಿಯ ಅಧಿಕಾರಿ ಅಥವಾ ಆ ಪತ್ತಿನ ಏಜೆನ್ಸಿಯ ಅಂಥ ಪರಿಶೀಲನೆಯನ್ನು ಕೈಗೊಳ್ಳಲು ಸಕ್ಷಮನೆಂದು ಅಧಿಕೃತಗೊಳಿಸಿದ ಅದರ ವೇತನ ಪಡೆಯುವ ಸಿಬ್ಬಂದಿ ವರ್ಗದ ಸದಸ್ಯನು ನಡೆಸಬಹುದು.

(3) ಹಾಗೆ ಪರಿಶೀಲನೆಯನ್ನು ನಡೆಸುವ ಅಧಿಕಾರಿಯು ಅಥವಾ ಸದಸ್ಯನು, ಎಲ್ಲ ಸೂಕ್ತ ವೇಳೆಗಳಲ್ಲಿ ಆ ಸಹಕಾರ ಸಂಘಕ್ಕೆ ಸೇರಿದ ಅಥವಾ ಅದರ ಅಭಿರಕ್ಷೆಯಲ್ಲಿರುವ ಪುಸ್ತಕಗಳು, ಲೆಕ್ಕಪತ್ರಗಳು, ದಸ್ತಾವೇಜುಗಳು, ಭದ್ರತಾಪತ್ರಗಳು ನಗದು ಹಣ ಮತ್ತು ಇತರ ಸ್ವತ್ತು ಇವುಗಳನ್ನು ಪರಿಶೀಲಿಸಲು ಮುಕ್ತ ಅವಕಾಶ ಹೊಂದಿರತಕ್ಕುದು ಮತ್ತು ಆ ಸಹಕಾರ ಸಂಘದ ಹಣಕಾಸು ಪರಿಸ್ಥಿತಿಗಳನ್ನು ಖಚಿತಪಡಿಸಿಕೊಳ್ಳಲು ಮತ್ತು ಪತ್ತಿನ ಏಜೆನ್ಸಿಯು ಅದಕ್ಕೆ ಸಾಲ ನೀಡಿದ ಮೊತ್ತಗಳ ಭದ್ರತೆಯನ್ನು ಸುನಿಶ್ಚಿತಗೊಳಿಸಲು ಅವಶ್ಯವಾಗಬಹುದಾದಂಥ ಮಾಹಿತಿಯನ್ನು, ವಿವರಪತ್ರಗಳನ್ನು ಮತ್ತು ವಿವರ ಪಟ್ಟಿಕೆಗಳನ್ನು ಸಹ ತರಿಸಿಕೊಳ್ಳಬಹುದು.][3]

**66. ಪುಸ್ತಕಗಳನ್ನು ಮತ್ತು ಸ್ವತ್ತನ್ನು ವಶಪಡಿಸಿಕೊಳ್ಳುವ ಅಧಿಕಾರ:–** 63ನೇ ಪ್ರಕರಣದ ಮೇರೆಗೆ ಲೆಕ್ಕಪರಿಶೋಧನೆಯನ್ನು, 64ನೇ ಪ್ರಕರಣದ ಮೇರೆಗೆ ವಿಚಾರಣೆಯನ್ನು ಅಥವಾ 65ನೇ ಪ್ರಕರಣದ ಮೇರೆಗೆ ಪರಿಶೀಲನೆಯನ್ನು ನಡೆಸುವ ಯಾರೇ ಅಧಿಕಾರಿಗೆ ಅಥವಾ ವ್ಯಕ್ತಿಗೆ ಲೆಕ್ಕಪರಿಶೋಧನೆಯ, ವಿಚಾರಣೆಯ ಅಥವಾ ಪರಿಶೀಲನೆಯ ಅವಧಿಯಲ್ಲಿ ತನ್ನ ಗಮನಕ್ಕೆ ಬಂದ ಯಾವುದೇ ನ್ಯೂನತೆ ಅಥವಾ ಅಕ್ರಮಗಳನ್ನು ರುಜುವಾತುಪಡಿಸುವುದಕ್ಕೆ ಸಂಬಂಧಿಸಿದಂತೆ ಅಗತ್ಯವೆಂದು ಅಂಥ ಅಧಿಕಾರಿಯು ಅಥವಾ ವ್ಯಕ್ತಿಯು ಭಾವಿಸಬಹುದಾದಂಥ ಯಾವುದೇ ಸಾಕ್ಷ್ಯವನ್ನು ನಾಶಪಡಿಸುವ ಅಥವಾ ಅಳಿಸುವ ಅಥವಾ ಬದಲಾಯಿಸುವ ಅಥವಾ ಕೈ ಚಳಕ ಮಾಡುವ ದೃಷ್ಟಿಯಿಂದ ಸಂಘದ ಯಾವುವೇ ಪುಸ್ತಕಗಳನ್ನು ಅಥವಾ ಇತರ ಸ್ವತ್ತುಗಳನ್ನು ಕೆಡಿಸಲಾಗಿದೆ ಎಂದು ಅಥವಾ ಅವುಗಳನ್ನು ಸಂಘದಲ್ಲಿ ಉಳಿಯಗೊಟ್ಟರೆ ಹಾಗೆ ಕೆಡಿಸುವ ಸಂಭವವಿದೆಯೆಂದು ನಂಬಲು ಕಾರಣವಿದ್ದರೆ ಅವನು ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಅವಧಿಯವರೆಗೆ ಅಂಥ ಪುಸ್ತಕಗಳನ್ನು ಅಥವಾ ಸ್ವತ್ತನ್ನು ಜಪ್ತಿ ಮಾಡಲು ಮತ್ತು ಸ್ವಾಧೀನಕ್ಕೆ ತೆಗೆದುಕೊಳ್ಳಲು ಅಧಿಕಾರ ಹೊಂದಿರತಕ್ಕುದು.

**67. ವಿಚಾರಣೆಯ ವೆಚ್ಚಗಳು:–** 64ನೇ ಪ್ರಕರಣದ ಮೇರೆಗೆ ವಿಚಾರಣೆಯನ್ನು ನಡೆಸಿರುವಲ್ಲಿ ಅಥವಾ ಲೇಣೇದಾರನ ಅರ್ಜಿಯ ಮೇಲೆ 65ನೇ ಪ್ರಕರಣದ ಮೇರೆಗೆ ಪರಿಶೀಲನೆಯನ್ನು ಮಾಡಿರುವಲ್ಲಿ, ರಿಜಿಸ್ಟ್ರಾರನು, ಅದಕ್ಕೆ ಸಂಬಂಧಿಸಿದ ವೆಚ್ಚಗಳನ್ನು ಅಥವಾ ಅವನು ಸೂಕ್ತವೆಂದು ಭಾವಿಸಬಹುದಾದಂಥ ಆ ವೆಚ್ಚಗಳ ಭಾಗವನ್ನು, ಸಂಬಂಧಪಟ್ಟ ಸಂಘವು ಯಾವ ಸಹಕಾರ ಸಂಘಕ್ಕೆ ಸಂಯೋಜಿತವಾಗಿದೆಯೋ ಆ ಸಹಕಾರ ಸಂಘ, ವಿಚಾರಣೆಯನ್ನು ಪರಿಶೀಲನೆಯನ್ನು ಮಾಡಬೇಕೆಂದು ಕೋರುವ ಸದಸ್ಯರು ಅಥವಾ ಲೇಣೇದಾರ ಮತ್ತು ಸಂಘದ [1][ಪದಾಧಿಕಾರಿಗಳ][1] ಅಥವಾ ಹಿಂದಿನ [1][ಪದಾಧಿಕಾರಿಗಳ][1] ನಡುವೆ ಭಾಗಮಾಡಬಹುದು:

ಪರಂತು,-

(ಎ) ಈ ಅಧಿನಿಯಮದ ಮೇರೆಗೆ ವೆಚ್ಚಗಳ ಹಂಚಿಕೆಯ ಯಾವುದೇ ಆದೇಶವನ್ನು, ಅದರ ಮೇರೆಗೆ ವೆಚ್ಚಗಳನ್ನು ಸಂದಾಯ ಮಾಡಲು ಬದ್ಧಗೊಳಿಸುವಂತೆ ಕೋರಲಾದ ಸಂಘಕ್ಕೆ ಅಥವಾ ವ್ಯಕ್ತಿಗೆ ಸುನಾವಣೆಯ ಸೂಕ್ತ ಅವಕಾಶವನ್ನು ಕೊಟ್ಟ ಹೊರತು, ಮಾಡಲ್ಪಡತಕ್ಕುದಲ್ಲ;

(ಬಿ) ಯಾವ ಕಾರಣಗಳ ಮೇಲೆ ವೆಚ್ಚಗಳನ್ನು ಹಂಚಿ ಹಾಕಲಾಯಿತೋ ಅವುಗಳನ್ನು ರಿಜಿಸ್ಟ್ರಾರನು ಲಿಖಿತದಲ್ಲಿ ನಿರೂಪಿಸತಕ್ಕುದು.

**68. ರಿಜಿಸ್ಟ್ರಾರನ ಆದೇಶ:-** [2][1][2] ರಿಜಿಸ್ಟ್ರಾರನು, ಸಹಕಾರ ಸಂಘ ಅಥವಾ ಅದರ [1][ಪದಾಧಿಕಾರಿಗಳನ್ನು][1] 63ನೇ ಪ್ರಕರಣದ ಮೇರೆಗಿನ ಲೆಕ್ಕ ಪರಿಶೋಧನೆಯಲ್ಲಿ, ಅಥವಾ 64ನೇ ಪ್ರಕರಣದ ಮೇರೆಗಿನ ವಿಚಾರಣೆಯಲ್ಲಿ ಅಥವಾ 65ನೇ [2][ಮತ್ತು 65ಬಿ][2] ಪ್ರಕರಣದ ಮೇರೆಗಿನ ಪರಿಶೀಲನೆಯಲ್ಲಿ ಕಂಡುಬಂದ ನ್ಯೂನತೆಗಳನ್ನು ಸರಿಪಡಿಸಲು ನಿರ್ದೇಶಿಸುವ ಆದೇಶವನ್ನು ಮಾಡಿ ಆ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕ್ರಮವನ್ನು ಅದರಲ್ಲಿ ತಿಳಿಸಿದ ಅವಧಿಯೊಳಗೆ ಕೈಗೊಳ್ಳುವಂತೆ ಆ ಮೂಲಕ ನಿರ್ದೇಶಿಸಬಹುದು.

[3][(2) ನ್ಯೂನತೆಗಳನ್ನು ಸಹಕಾರ ಸಂಘವು ಸರಿಪಡಿಸುವುದರ ಬಗ್ಗೆ ಒಂದು ವರದಿಯನ್ನು ಅಂಥ ಸಂಘದ ಸಮಿತಿಯು, ಅಂಥ ಎಲ್ಲ ನ್ಯೂನತೆಗಳನ್ನು ಸರಿಪಡಿಸುವವರೆಗೆ ನಿಯತವಾಗಿ ರಿಜಿಸ್ಟ್ರಾರ್‌ಗೆ, ಸಾಲನೀಡಿಕೆ ಏಜೆನ್ಸಿಗೆ ಮತ್ತು ಹಣಕಾನು ನೀಡಿಕೆ ಬ್ಯಾಂಕ್‌ಗೆ ಮತ್ತು ನ್ಯೂನತೆಗಳನ್ನು ಲೆಕ್ಕ ಪರಿಶೋಧನೆಯಲ್ಲಿ ಎತ್ತಿ ತೋರಿಸಿದ್ದಲ್ಲಿ ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ಕಳುಹಿಸತಕ್ಕುದು.

(3) ವಿಚಾರಣೆಯಲ್ಲಿ ಅಥವಾ ಪರಿಶೀಲನೆಯಲ್ಲಿ ಕಂಡು ಬಂದ ದೋಷಗಳನ್ನು ಬಗೆಹರಿಸುವಂತೆ ರಿಜಿಸ್ಟ್ರಾರನು (1)ನೇ ಉಪಪ್ರಕರಣದ ಮೇರೆಗೆ ಆದೇಶ ಮಾಡಿದಾಗ, ವಿಚಾರಣೆಯ ಅಥವಾ ಸಂದರ್ಭಾನುಸಾರ ಪರಿಶೀಲನೆಯ ಫಲಿತಾಂಶದೊಂದಿಗೆ ಆದೇಶದ ಒಂದು ಪ್ರತಿಯನ್ನು ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ಕಳುಹಿಸತಕ್ಕುದು. ಅವನು, ಅಂಥ ಫಲಿತಾಂಶಗಳನ್ನು ಮುಂದಿನ ವರ್ಷದ ಲೆಕ್ಕಪರಿಶೋಧನಾ ವರದಿಯಲ್ಲಿ ಮತ್ತು ಹಣಕಾಸು ವಿವರಣ ಪಟ್ಟಿಗಳಲ್ಲಿ ಅವಶ್ಯವಿರುವೆಡೆ ಸೇರಿಸಲು ಕ್ರಮ ಕೈಗೊಳ್ಳತಕ್ಕುದು.][3]

[3][**ವಿವರಣೆ:–** x x x x ][3]

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ 20.1.1976 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**69. ಅಧಿಭಾರ:-** (1) ಸಹಕಾರ ಸಂಘದ ಲೆಕ್ಕಪರಿಶೋಧನೆ, ವಿಚಾರಣೆ, ಪರಿಶೀಲನೆ ಅಥವಾ ಸಮಾಪನದ ಕ್ರಮದಲ್ಲಿ ಅಂಥ ಸಂಘದ ವ್ಯವಸ್ಥಾಪನೆ ನಡೆಸುವ ಸಮಿತಿ ಅಥವಾ [2][ಸರ್ಕಾರದಿಂದ ನಾಮನಿರ್ದೇಶಿತರು ಮತ್ತು ಪದನಿಮಿತ್ತ ಸದಸ್ಯರೂ ಒಳಗೊಂಡಂತೆ][2] ವ್ಯವಸ್ಥಾಪನಾ ಸಮಿತಿಯ ಅಧ್ಯಕ್ಷ, ಉಪಾಧ್ಯಕ್ಷ, ಸಭಾಪತಿ, ಉಪಸಭಾಪತಿ ಅಥವಾ ಯಾರೇ ಇತರ ಸದಸ್ಯನು ಅಥವಾ ಅಂಥ ಸಹಕಾರ ಸಂಘದ ಸಂಘಟನೆ ಅಥವಾ ವ್ಯವಸ್ಥಾಪನೆಯನ್ನು ವಹಿಸಿಕೊಡಲಾಗಿರುವ ಅಥವಾ ವಹಿಸಿಕೊಡಲಾಗಿದ್ದ ಯಾರೇ ವ್ಯಕ್ತಿಯು ಅಥವಾ ಯಾವುದೇ ಕಾಲಕ್ಕೆ ಸಹಕಾರ ಸಂಘದ ಅಧಿಕಾರಿ ಅಥವಾ ನೌಕರನಾಗಿರುವ ಅಥವಾ ಆಗಿದ್ದ ಯಾರೇ ವ್ಯಕ್ತಿಯು, ಅಧಿನಿಯಮ, ನಿಯಮಗಳು ಅಥವಾ ಉಪವಿಧಿಗಳಿಗೆ ವಿರುದ್ಧವಾಗಿ ಯಾವುದೇ ಸಂದಾಯವನ್ನು ಮಾಡಿದ್ದರೆ ಅಥವಾ ವಿಶ್ವಾಸಭಂಗ ಅಥವಾ [3][XXX][3] ನಿರ್ಲಕ್ಷ್ಯದಿಂದ ಸಹಕಾರ ಸಂಘದ ಆಸ್ತಿಗಳಲ್ಲಿ ಯಾವುದೇ ಕೊರತೆ ಉಂಟು ಮಾಡಿದ್ದರೆ ಅಥವಾ ಅಂಥ ಸಹಕಾರ ಸಂಘಕ್ಕೆ ಸೇರಿದ ಯಾವುದೇ ಹಣ ಅಥವಾ ಇತರ ಸ್ವತ್ತನ್ನು ದುರುಪಯೋಗಪಡಿಸಿಕೊಂಡಿದ್ದರೆ ಅಥವಾ ಮೋಸದಿಂದ ತನ್ನಲ್ಲಿ ಇಟ್ಟುಕೊಂಡಿದ್ದರೆ, ರಿಜಿಸ್ಟ್ರಾರನು ತಾನಾಗಿಯೇ ಅಥವಾ ಸಮಿತಿಯ, ಸಮಾಪಕನ ಅಥವಾ ಯಾವುದೇ ಲೇಣೇದಾರನ ಅರ್ಜಿಯ ಮೇಲೆ ಅಂಥ ವ್ಯಕ್ತಿ ಅಥವಾ ವ್ಯಕ್ತಿಗಳ ವಿರುದ್ಧ ಆರೋಪಗಳನ್ನು ರೂಪಿಸಬಹುದು ಮತ್ತು ಆ ವ್ಯಕ್ತಿಗೆ ಮತ್ತು ಮೃತ ವ್ಯಕ್ತಿಯ ಸಂದರ್ಭದಲ್ಲಿ ಅವನ ಸಂಪದದ ಉತ್ತರಾಧಿಕಾರಿಯಾದ ಅವನ ಪ್ರತಿನಿಧಿಗೆ ಮನವಿ ಸಲ್ಲಿಸಲು ಅವಕಾಶ ಕೊಟ್ಟ ತರುವಾಯ, ಆ ಹಣ, ಸ್ವತ್ತು ಅಥವಾ ಅದರ ಯಾವುದೇ ಭಾಗವನ್ನು ತಾನು ನಿರ್ಧರಿಸಬಹುದಾದಂಥ ದರದ ಬಡ್ಡಿಯೊಂದಿಗೆ ಸಂದಾಯ ಮಾಡುವಂತೆ ಅಥವಾ ಪುನಃ ಸ್ಥಾಪಿಸುವಂತೆ ಅಥವಾ ತಾನು ನ್ಯಾಯ ಸಮ್ಮತವಾದದ್ದೆಂದು ಮತ್ತು ನ್ಯಾಯಯುತವಾದದ್ದೆಂದು ಪರಿಗಣಿಸುವಂಥ ಮೊತ್ತವನ್ನು ಅಷ್ಟು ಮಟ್ಟಿಗೆ ಪರಿಹಾರ ರೂಪದಲ್ಲಿ ಸಹಕಾರ ಸಂಘದ ಆಸ್ತಿಗಳಿಗೆ ವಂತಿಗೆ ಕೊಡುವಂತೆ ಅಗತ್ಯಪಡಿಸುವ ಆದೇಶವನ್ನು ಹೊರಡಿಸಬಹುದು.

(2) ಆ ಕೃತ್ಯವು ಸಂಬಂಧಪಟ್ಟ ವ್ಯಕ್ತಿಯು ಕ್ರಿಮಿನಲ್ ವ್ಯವಹರಣೆಗೆ ಗುರಿಯಾಗತಕ್ಕ ಕೃತ್ಯವಾಗಿದ್ದಾಗ್ಯೂ, ಈ ಪ್ರಕರಣವು ಅನ್ವಯವಾಗತಕ್ಕುದು.][1]

[4][(3) (1)ನೇ ಉಪ-ಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಆದೇಶವು, ಯಾರ ವಿರುದ್ಧ ಆದೇಶ ಮಾಡಲಾಯಿತೋ ಆ ವ್ಯಕ್ತಿಯಿಂದ ವ್ಯವಹರಣೆಯ ವೆಚ್ಚವನ್ನು ನಿಯಮಿಸಬಹುದಾದಂಥ ದರದಲ್ಲಿ ಮತ್ತು ಅಂಥ ರೀತಿಯಲ್ಲಿ ವಸೂಲಿ ಮಾಡುವುದಕ್ಕೆ ಉಪಬಂಧಿಸಬಹುದು.][4]

## ಅಧ್ಯಾಯ - IX

### ವಿವಾದಗಳ ಇತ್ಯರ್ಥ

**70. ತೀರ್ಮಾನಕ್ಕಾಗಿ ರಿಜಿಸ್ಟ್ರಾರನಿಗೆ ಉಲ್ಲೇಖಿಸಬಹುದಾದ ವಿವಾದಗಳು :-** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಸಹಕಾರ ಸಂಘದ ರಚನೆ, ವ್ಯವಸ್ಥಾಪನೆ ಅಥವಾ ವ್ಯವಹಾರಕ್ಕೆ ಸಂಬಂಧಿಸಿ ಯಾವುದೇ ವಿವಾದವು,-

(ಎ) ಸದಸ್ಯರು, ಹಿಂದಿನ ಸದಸ್ಯರು ಮತ್ತು ಸದಸ್ಯರು, ಹಿಂದಿನ ಸದಸ್ಯರು ಮತ್ತು ಮೃತ ಸದಸ್ಯರ ಮೂಲಕ ಕ್ಲೇಮು ಮಾಡುವ ವ್ಯಕ್ತಿಗಳು - ಇವರ ನಡುವೆ;ಅಥವಾ

(ಬಿ) ಸದಸ್ಯ, ಹಿಂದಿನ ಸದಸ್ಯ ಅಥವಾ ಸದಸ್ಯನ, ಹಿಂದಿನ ಸದಸ್ಯನ ಅಥವಾ ಮೃತ ಸದಸ್ಯನ ಮೂಲಕ ಕ್ಲೇಮು ಮಾಡುವ ವ್ಯಕ್ತಿ ಮತ್ತು ಸಂಘ, ಅದರ ಸಮಿತಿ ಅಥವಾ ಸಂಘದ ಯಾರೇ ಅಧಿಕಾರಿ, ಏಜೆಂಟ್ ಅಥವಾ ನೌಕರ-ಇವರ ನಡುವೆ; ಅಥವಾ

(ಸಿ) ಸಂಘ ಅಥವಾ ಅದರ ಸಮಿತಿ ಮತ್ತು ಸಂಘದ ಯಾವುದೇ ಹಿಂದಿನ ಸಮಿತಿ ಸಂಘದ ಯಾರೇ ಅಧಿಕಾರಿ, ಏಜೆಂಟ್ ಅಥವಾ ನೌಕರ ಅಥವಾ ಯಾರೇ ಹಿಂದಿನ ಅಧಿಕಾರಿ, ಹಿಂದಿನ ಏಜೆಂಟ್, ಹಿಂದಿನ ನೌಕರ ಅಥವಾ ಯಾರೇ ಮೃತ ಅಧಿಕಾರಿಯ ಮೃತ ಏಜೆಂಟ್‌ನ ಅಥವಾ ಮೃತ ನೌಕರನ ನಾಮನಿರ್ದೇಶಿತನು, ವಾರಸುದಾರರು ಅಥವಾ ಕಾನೂನು ಸಮ್ಮತ ಪ್ರತಿನಿಧಿಗಳು - ಇವರ ನಡುವೆ; ಅಥವಾ

(ಡಿ) ಸಂಘ ಮತ್ತು ಇತರ ಯಾವುದೇ ಸಹಕಾರ ಸಂಘ [5][ಅಥವಾ ಪತ್ತಿನ ಏಜೆನ್ಸಿ][5] ಇವುಗಳ ನಡುವೆ

- ಯಾವುದೇ ವಿವಾದವು ಉದ್ಭವಿಸಿದರೆ, ಅಂಥ ವಿವಾದವನ್ನು ತೀರ್ಮಾನಕ್ಕಾಗಿ ರಿಜಿಸ್ಟ್ರಾರನಿಗೆ ಉಲ್ಲೇಖಿಸತಕ್ಕುದು ಮತ್ತು [6][ಯಾವುದೇ ಸಿವಿಲ್ ಅಥವಾ ಕಾರ್ಮಿಕ ಅಥವಾ ರೆವಿನ್ಯೂ ನ್ಯಾಯಾಲಯವು ಅಥವಾ ಕೈಗಾರಿಕಾ ನ್ಯಾಯಾಧಿಕರಣವು][6] ಅಂಥ ವಿವಾದಕ್ಕೆ ಸಂಬಂಧಿಸಿದ ಯಾವುದೇ ದಾವೆ ಅಥವಾ ಇತರ ವ್ಯವಹರಣೆಯನ್ನು ಅಂಗೀಕರಿಸಲು ಅಧಿಕಾರ ವ್ಯಾಪ್ತಿಯನ್ನು ಹೊಂದಿರತಕ್ಕುದಲ್ಲ.

---

1. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ 20.1.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಪ್ರತಿಯೋಜಿಸಲಾಗಿದೆ.
3. 1976ರ ಅಧಿನಿಯಮ ಸಂಖ್ಯೆ 71ರ ಮೂಲಕ 3.11.1976 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
4. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 27.10.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
5. 1975ರ ಅಧಿನಿಯಮ ಸಂಖ್ಯೆ 2ರ ಮೂಲಕ 17.7.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
6. 2000ದ ಅಧಿನಿಯಮ ಸಂಖ್ಯೆ 2ರ ಮೂಲಕ 20.6.2000 ದಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ. ಅಧಿಸೂಚನೆಯ ಪಾಠವು 84ನೇ ಪುಟದಲ್ಲಿದೆ.

(2) (1)ನೇ ಉಪಪ್ರಕರಣದ ಉದ್ದೇಶಗಳಿಗಾಗಿ ಈ ಕೆಳಕಂಡ ವಿವಾದಗಳನ್ನು ಸಹಕಾರ ಸಂಘದ ರಚನೆ, ವ್ಯವಸ್ಥಾಪನೆ ಅಥವಾ ವ್ಯವಹಾರಕ್ಕೆ ಸಂಬಂಧಪಟ್ಟ ವಿವಾದಗಳೆಂದು ಭಾವಿಸತಕ್ಕುದು, ಎಂದರೆ:-

(ಎ) ಸಂಘವು, ಸದಸ್ಯನಿಂದ ಅಥವಾ ಮೃತ ಸದಸ್ಯನ ನಾಮನಿರ್ದೇಶಿತನಿಂದ, ವಾರಸುದಾರರಿಂದ ಅಥವಾ ಕಾನೂನು ಸಮ್ಮತ ಪ್ರತಿನಿಧಿಗಳಿಂದ ತನಗೆ ಬರಬೇಕಾದ ಯಾವುದೇ ಋಣ ಅಥವಾ ತಗಾದೆಯ ಬಗ್ಗೆ ಮಾಡಿದ ಕ್ಲೇಮು, ಅಂಥ ಋಣ ಅಥವಾ ತಗಾದೆಯು ಅಂಗೀಕೃತವಾಗಿರಲಿ ಅಥವಾ ಇಲ್ಲದಿರಲಿ;

(ಬಿ) ಸಂಘವು, ಪ್ರಧಾನ ಋಣಿಯ ತಪ್ಪಿನ ಪರಿಣಾಮವಾಗಿ ಅಂಥ ಋಣ ಅಂಗೀಕೃತವಾಗಿರಲಿ ಅಥವಾ ಇಲ್ಲದಿರಲಿ, ಪ್ರಧಾನ ಋಣಿಯಿಂದ ತನಗೆ ಬಾಕಿ ಇರುವ ಯಾವುದೇ ಋಣ ಅಥವಾ ತಗಾದೆಯ ಸಂಬಂಧದಲ್ಲಿ ಯಾವುದೇ ಮೊಬಲಗನ್ನು ಜಾಮೀನುದಾರರಿಂದ ವಸೂಲು ಮಾಡಿರುವಲ್ಲಿ, ಆ ಪ್ರಧಾನ ಋಣಿಯ ವಿರುದ್ಧ ಜಮೀನುದಾರನು ಮಾಡಿದ ಕ್ಲೇಮು;

(ಸಿ) ಸಂಘದ ಸಮಿತಿಯ ಅಧ್ಯಕ್ಷ, ಉಪಾಧ್ಯಕ್ಷ, ಸಭಾಪತಿ, ಉಪಸಭಾಪತಿ, ಕಾರ್ಯದರ್ಶಿ, ಖಜಾಂಚಿ ಅಥವಾ ಸದಸ್ಯನ ಚುನಾವಣೆಗೆ ಸಂಬಂಧಿಸಿ ಉದ್ಭವಿಸಿದ ಯಾವುದೇ ವಿವಾದ;

[1][(ಡಿ) [2][ಕೈಗಾರಿಕಾ ವಿವಾದಗಳ ಅಧಿನಿಯಮ, 1947ರಲ್ಲಿ (1947ರ ಕೇಂದ್ರ ಅಧಿನಿಯಮ ಸಂಖ್ಯೆ 14) ತದ್ವಿರುದ್ಧವಾದುದು ಏನೇ ಇದ್ದರೂ,][2] ನಿಯೋಜನೆಯ ನಿಬಂಧನೆಗಳ, ಕೆಲಸದ ಪರಿಸ್ಥಿತಿಗಳು ಮತ್ತು ಸಹಕಾರ ಸಂಘವು ಕೈಗೊಂಡ ಶಿಸ್ತು ಕ್ರಮ ಇವುಗಳಿಗೆ ಸಂಬಂಧಿಸಿದ ವಿವಾದವೂ ಸೇರಿ, ಸಹಕಾರ ಸಂಘ ಮತ್ತು ಅದರ ನೌಕರರು, ಅಥವಾ ಹಿಂದಿನ ನೌಕರರು ಅಥವಾ ಮೃತ ನೌಕರರ ವಾರಸುದಾರರು ಅಥವಾ ಕಾನೂನು ಸಮ್ಮತ ಪ್ರತಿನಿಧಿಗಳು ಇವರ ನಡುವಿನ ಯಾವುದೇ ವಿವಾದ;

(ಇ) ಸದಸ್ಯ, ಹಿಂದಿನ ಸದಸ್ಯ, ಮೃತ ಸದಸ್ಯ ಅಥವಾ ಮೃತ ಅಧಿಕಾರಿ, ಹಿಂದಿನ ಏಜೆಂಟ್ ಅಥವಾ ಮೃತ ಏಜೆಂಟ್ ಅಥವಾ ಯಾವುದೇ ಸೇವಕ, ಹಿಂದಿನ ಸೇವಕ ಅಥವಾ ಮೃತ ಸೇವಕನಿಂದ ಅಥವಾ ಅದರ ಹಿಂದಿನ ಅಥವಾ ಈಗಿನ ಸಮಿತಿಯಿಂದ ಸಹಕಾರ ಸಂಘದ ಆಸ್ತಿಗಳಿಗೆ ಉಂಟು ಮಾಡಿದ ಯಾವುದೇ ಕೊರತೆಯು ಅಂಗೀಕರಿಸಲ್ಪಟ್ಟಿರಲಿ ಅಥವಾ ಇಲ್ಲದಿರಲಿ, ಆ ಬಗ್ಗೆ ಸಹಕಾರ ಸಂಘವು ಮಾಡಿದ ಕ್ಲೇಮು.][1]

(3) ಈ ಪ್ರಕರಣದ ಮೇರೆಗೆ ರಿಜಿಸ್ಟ್ರಾರನಿಗೆ ಉಲ್ಲೇಖಿಸಲಾದ ವಿವಾದವು, ಸಹಕಾರ ಸಂಘದ ರಚನೆ, ವ್ಯವಸ್ಥಾಪನೆ ಅಥವಾ ವ್ಯವಹಾರಕ್ಕೆ ಸಂಬಂಧಿಸಿದ ವಿವಾದವೇ ಎಂಬ ಬಗ್ಗೆ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಅದರ ಮೇಲೆ ರಿಜಿಸ್ಟ್ರಾರನ ತೀರ್ಮಾನವು ಅಂತಿಮವಾಗಿರತಕ್ಕುದು ಮತ್ತು ಅದನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸತಕ್ಕುದಲ್ಲ.

[3][**70ಎ. ಕಾಲಪರಿಮಿತಿಯ ಅವಧಿ:-** (1) 70ನೇ ಪ್ರಕರಣದ ಮೇರೆಗಿನ ಯಾವುದೇ ವಿವಾದವನ್ನು, ಅದನ್ನು ವ್ಯಾಜ್ಯ ಕಾರಣದ ದಿನಾಂಕದಿಂದ ಆರು ವರ್ಷಗಳ ಒಳಗೆ ರಿಜಿಸ್ಟ್ರಾರನಿಗೆ ಉಲ್ಲೇಖಿಸಿದ್ದ ಹೊರತು, ಅಂಗೀಕರಿಸತಕ್ಕುದಲ್ಲ:

ಪರಂತು, ಸಮಿತಿಯ ಸದಸ್ಯ, ಅಧ್ಯಕ್ಷ, ಉಪಾಧ್ಯಕ್ಷ, ವ್ಯವಸ್ಥಾಪಕ ನಿರ್ದೇಶಕ, ಗೌರವ ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯ ಚುನಾವಣೆಗೆ ಸಂಬಂಧಿಸಿದ ವಿವಾದವನ್ನು ಚುನಾವಣೆಯ ಫಲಿತಾಂಶವನ್ನು ಘೋಷಿಸಿದ ದಿನಾಂಕದಿಂದ ಮೂವತ್ತು ದಿನಗಳ ಒಳಗೆ ರಿಜಿಸ್ಟ್ರಾರನಿಗೆ ಉಲ್ಲೇಖಿಸತಕ್ಕುದು.

(2) (1)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ, (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅವಧಿಯ ತರುವಾಯ ಉಲ್ಲೇಖಿಸಿದ ವಿವಾದವನ್ನು, ಆ ಅವಧಿಯ ಒಳಗೆ ಅದನ್ನು ಉಲ್ಲೇಖಿಸದಿರಲು ಉಲ್ಲೇಖಿಸುವ ವ್ಯಕ್ತಿಗೆ ಸಾಕಷ್ಟು ಕಾರಣಗಳು ಇದ್ದುವೆಂದು ರಿಜಿಸ್ಟ್ರಾರನಿಗೆ ಮನದಟ್ಟಾದರೆ, ಅವನು ಅಂಗೀಕರಿಸಬಹುದು.][3]

**71. ವಿವಾದಗಳ ವಿಲೆ:-** (1) ರಿಜಿಸ್ಟ್ರಾರನು, 70ನೆಯ ಪ್ರಕರಣದ ಮೇರೆಗೆ ವಿವಾದದ ಉಲ್ಲೇಖವನ್ನು ಸ್ವೀಕರಿಸಿದ ತರುವಾಯ-

(ಎ) ಆ ವಿವಾದವನ್ನು ತಾನೇ ತೀರ್ಮಾನಿಸಬಹುದು; ಅಥವಾ

(ಬಿ) ಆ ಬಗ್ಗೆ ರಾಜ್ಯಸರ್ಕಾರವು ಅಧಿಕಾರ ನೀಡಿರುವ ಯಾರೇ ವ್ಯಕ್ತಿಗೆ ವಿಲೆಗಾಗಿ ಅದನ್ನು ವರ್ಗಾಯಿಸಬಹುದು; ಅಥವಾ

(ಸಿ) ರಿಜಿಸ್ಟ್ರಾರನು ನೇಮಿಸಿದ ಒಬ್ಬ ಮಧ್ಯಸ್ಥಗಾರನಿಗೆ ವಿಲೆಗಾಗಿ ಅದನ್ನು ಉಲ್ಲೇಖಿಸಬಹುದು.

(2) ರಿಜಿಸ್ಟ್ರಾರನು (1)ನೇ ಉಪಪ್ರಕರಣದ (ಬಿ) ಖಂಡದ ಮೇರೆಗೆ ವರ್ಗಾಯಿಸಿದ ಅಥವಾ ಆ ಉಪಪ್ರಕರಣದ (ಸಿ) ಖಂಡದ ಮೇರೆಗೆ ಉಲ್ಲೇಖಿಸಿದ ಯಾವುದೇ ಉಲ್ಲೇಖವನ್ನು ಹಿಂದಕ್ಕೆ ತೆಗೆದುಕೊಳ್ಳಬಹುದು ಮತ್ತು ಅದನ್ನು ತಾನೇ ತೀರ್ಮಾನಿಸಬಹುದು.

1. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ 20.1.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 2000ರ ಅಧಿನಿಯಮ ಸಂಖ್ಯೆ 2ರ ಮೂಲಕ 20.6.2000 ದಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1975ರ ಅಧಿನಿಯಮ ಸಂಖ್ಯೆ 39ರ, ಮೂಲಕ 1.6.1960 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(3) ಈ ಪ್ರಕರಣದ ಮೇರೆಗೆ ತೀರ್ಮಾನಕ್ಕಾಗಿ ವಿವಾದವನ್ನು ಯಾರಿಗೆ ಉಲ್ಲೇಖಿಸಲಾಗಿದೆಯೋ ಆ ರಿಜಿಸ್ಟ್ರಾರನು ಅಥವಾ ಯಾರೇ ಇತರ ವ್ಯಕ್ತಿಯು, ವಿವಾದವು ತೀರ್ಮಾನವಾಗುವವರೆಗೆ ನ್ಯಾಯದ ಹಿತದೃಷ್ಟಿಯಿಂದ ತಾನು ಅವಶ್ಯವೆಂದು ಭಾವಿಸುವಂಥ ವಾದಕಾಲೀನ ಆದೇಶಗಳನ್ನು ಮಾಡಬಹುದು.

[1][(3ಎ) (1)ನೇ ಉಪಪ್ರಕರಣದ (ಸಿ) ಖಂಡದ ಮೇರೆಗೆ ವಿವಾದವನ್ನು ಮಧ್ಯಸ್ಥಗಾರನಿಗೆ ಉಲ್ಲೇಖಿಸಿರುವಲ್ಲಿ, ಐತೀರ್ಪು ನಿಯಮಿಸಬಹುದಾದಂಥ ನಿಯಮಗಳಿಗೊಳಪಟ್ಟು ಮಧ್ಯಸ್ಥಗಾರನಿಗೆ ಸಂದಾಯಮಾಡಬೇಕಾದ ಫೀಜನ್ನು ಮತ್ತು ರಿಜಿಸ್ಟ್ರಾರನಿಗೆ ಸಂದಾಯಮಾಡಬೇಕಾದ ಫೀಜುಗಳು ಮತ್ತು ವೆಚ್ಚಗಳನ್ನು ಒಳಗೊಂಡಿರತಕ್ಕುದು. ಅಂಥ ಐತೀರ್ಪನ್ನು, ರಿಜಿಸ್ಟ್ರಾರನಿಂದ ವಿವಾದವನ್ನು ತೀರ್ಮಾನಿಸಲು ನಿಗದಿಪಡಿಸಿದ ಅವಧಿ ಕೊನೆಗೊಂಡ ತರುವಾಯ, ನೀಡಲಾಗಿತ್ತೆಂಬ ಕಾರಣ ಮಾತ್ರದಿಂದಲೇ ಅಸಿಂಧುವಾಗತಕ್ಕುದಲ್ಲ ಮತ್ತು ಅದು, ಅಪೀಲಿಗೆ ಅಥವಾ ಪುನರೀಕ್ಷಣೆಗೆ ಒಳಪಟ್ಟು, ವಿವಾದದ ಪಕ್ಷಕಾರರಿಗೆ ಬಂಧನಕಾರಿಯಾಗತಕ್ಕುದು.][1]

(4) 70ನೇ ಪ್ರಕರಣದಲ್ಲಿ ಏನೇ ಇದ್ದಾಗ್ಯೂ, ಸದರಿ ಪ್ರಕರಣದ (1)ನೇ ಉಪಪ್ರಕರಣದ (ಎ) ಅಥವಾ (ಬಿ) ಖಂಡದ ಮೇರೆಗೆ ಯಾವುದೇ ವಿವಾದವನ್ನು ತೀರ್ಮಾನಕ್ಕಾಗಿ ರಿಜಿಸ್ಟ್ರಾರನಿಗೆ ಉಲ್ಲೇಖಿಸಿರುವಾಗ, ರಿಜಿಸ್ಟ್ರಾರನಿಗೆ ಸಂಬಂಧಪಟ್ಟ ಸಂಘವು ಅರ್ಜಿ ಸಲ್ಲಿಸಿದ ಮೇಲೆ, ಆ ಸಂಘದ ಹಿತದೃಷ್ಟಿಯಲ್ಲಿ ಅವನ ಮುಂದಿರುವ ವ್ಯವಹರಣೆಗಳಲ್ಲಿ ವಿವಾದಕ್ಕೆ ಪಕ್ಷಕಾರರನ್ನಾಗಿ ಮಾಡಲಾಗದಂಥ ವ್ಯಕ್ತಿಗಳನ್ನು ವಿವಾದದ ಪರಿಣಾಮಕಾರಿ ತೀರ್ಮಾನಕ್ಕಾಗಿ ಪಕ್ಷಕಾರರನ್ನಾಗಿ ಸೇರಿಸುವುದು ಅಗತ್ಯವೆಂದು ಮನದಟ್ಟಾದರೆ, ಅಧಿಕಾರ ವ್ಯಾಪ್ತಿಹೊಂದಿರುವ ಸಿವಿಲ್ ನ್ಯಾಯಾಲಯದಲ್ಲಿ ಕ್ರಮಬದ್ಧವಾಗಿ ದಾವೆಯನ್ನು ಹೂಡಲು ಅವನು ಆ ಸಂಘಕ್ಕೆ ಅನುಮತಿ ನೀಡಬಹುದು ಮತ್ತು ಆ ಸಿವಿಲ್ ನ್ಯಾಯಾಲಯವು ಅಂಥ ದಾವೆಯನ್ನು ವಿಚಾರಣೆಗೆ ತೆಗೆದುಕೊಳ್ಳಲು ಸಕ್ಷಮವಾಗಿರತಕ್ಕುದು.

[2]**[71ಎ. ಹಣಕಾಸು ನೀಡಿಕೆ ಬ್ಯಾಂಕಿಗೆ ಯಾವೊಂದು ಸಹಕಾರ ಸಂಘದಿಂದ ಬರಬೇಕಾದ ಹಣಗಳ ವಸೂಲಿಗಾಗಿ ಅಂಥ ಸಂಘದ ಸದಸ್ಯರ ವಿರುದ್ಧ ವ್ಯವಹರಣೆ ನಡೆಸಲು ಆ ಹಣಕಾಸು ನೀಡಿಕೆ ಬ್ಯಾಂಕಿನ ಅಧಿಕಾರ:-** ಯಾವೊಂದು ಸಹಕಾರ ಸಂಘಕ್ಕೆ, ಅದರ ಸದಸ್ಯರಿಂದ ಬಾಕಿಯಿರುವ ಹಣಗಳನ್ನು ಅವರು ಸಂದಾಯಮಾಡಲು ತಪ್ಪಿದ ಕಾರಣ ಆ ಸಹಕಾರ ಸಂಘವು ಹಣಕಾಸು ನೀಡಿಕೆ ಬ್ಯಾಂಕಿಗೆ ತನ್ನ ಋಣಗಳನ್ನು ಸಂದಾಯ ಮಾಡಲು ಅಸಮರ್ಥವಾದಲ್ಲಿ ಆ ಹಣಕಾಸು ನೀಡಿಕೆ ಬ್ಯಾಂಕು ಅಂಥ ಸಹಕಾರ ಸಂಘದ ಸಮಿತಿಗೆ ಅಂಥ ಸದಸ್ಯರ ವಿರುದ್ಧ ಸಂದರ್ಭಾನುಸಾರ 70ನೇ ಪ್ರಕರಣದ ಮೇರೆಗಿನ ವ್ಯವಹರಣೆಗಳನ್ನು ಹೂಡಲು ಅಥವಾ 101ನೇ ಪ್ರಕರಣದ ಮೇರೆಗಿನ ವ್ಯವಹರಣೆಗಳನ್ನು ಪ್ರಾರಂಭಿಸಲು ನಿರ್ದೇಶಿಸಬಹುದು ಮತ್ತು ಅಂಥ ನಿರ್ದೇಶವನ್ನು ಸ್ವೀಕರಿಸಿದ ದಿನಾಂಕದಿಂದ ತೊಂಭತ್ತು ದಿನಗಳ ಅವಧಿಯ ಒಳಗೆ ಸಮಿತಿಯು ಹಾಗೆ ಮಾಡಲು ತಪ್ಪಿದರೆ, ಹಣಕಾಸು ನೀಡಿಕೆ ಬ್ಯಾಂಕು, ಸಂದರ್ಭಾನುಸಾರ, 70ನೇ ಪ್ರಕರಣ ಅಥವಾ 101ನೇ ಪ್ರಕರಣದ ಮೇರೆಗೆ ಅಂಥ ಸದಸ್ಯರ ವಿರುದ್ಧ ತಾನೇ ವ್ಯವಹರಣೆ ನಡೆಸಬಹುದು, ಮತ್ತು ಅಂಥ ಸಂದರ್ಭದಲ್ಲಿ ಈ ಅಧಿನಿಯಮ, ನಿಯಮಗಳು ಅಥವಾ ಉಪವಿಧಿಗಳು, ಉಪಬಂಧಗಳು, ಸದರಿ ಉಪಬಂಧಗಳಲ್ಲಿ ಸಹಕಾರ ಸಂಘ ಅಥವಾ ಅದರ ಸಮಿತಿಗೆ ಮಾಡಲಾದ ಎಲ್ಲಾ ಉಲ್ಲೇಖಗಳು ಹಣಕಾಸು ನೀಡಿಕೆ ಬ್ಯಾಂಕಿಗೆ ಮಾಡಲಾದ ಉಲ್ಲೇಖಗಳಾಗಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕುದು.

(2) ಹಣಕಾಸು ನೀಡಿಕೆ ಬ್ಯಾಂಕಿಗೆ ಸಹಕಾರ ಸಂಘದಿಂದ ಬಾಕಿ ಇರುವ ಹಣಗಳ ಸಂಬಂಧದಲ್ಲಿ ಆ ಸಹಕಾರ ಸಂಘದ ವಿರುದ್ಧ ಅದು ಡಿಕ್ರಿ ಅಥವಾ ತೀರ್ಮಾನವನ್ನು ಪಡೆದುಕೊಂಡಿರುವಲ್ಲಿ, ಆ ಹಣಕಾಸು ನೀಡಿಕೆ ಬ್ಯಾಂಕು ಅಂಥ, ಹಣವನ್ನು ಮೊದಲು ಸಹಕಾರ ಸಂಘದ ಆಸ್ತಿಗಳಿಂದ ಮತ್ತು ಎರಡನೆಯದಾಗಿ ಅಂಥ ಸಹಕಾರ ಸಂಘದ ಸದಸ್ಯರಿಂದ ಸಂಘಕ್ಕೆ ಸಲ್ಲತಕ್ಕ ಋಣಗಳಷ್ಟರಮಟ್ಟಿಗೆ ವಸೂಲು ಮಾಡಲು ಕ್ರಮ ಕೈಗೊಳ್ಳಬಹುದು.] [2]

[3]**[71ಬಿ. ಪತ್ತಿನ ಏಜೆನ್ಸಿಗೆ ಸಹಕಾರ ಸಂಘದಿಂದ ಬಾಕಿ ಇರುವ ಹಣದ ವಸೂಲಿಗಾಗಿ ಏಜೆನ್ಸಿಯು ಅಂಥ ಸಂಘದ ಸದಸ್ಯರ ವಿರುದ್ಧ ಕ್ರಮ ಕೈಗೊಳ್ಳಲು ಆ ಪತ್ತಿನ ಏಜೆನ್ಸಿಯ ಅಧಿಕಾರಗಳು:-** (1) ಯಾವೊಂದು ಸಹಕಾರ ಸಂಘಕ್ಕೆ, ಅದರ ಸದಸ್ಯರಿಂದ ಬಾಕಿಯಿರುವ ಹಣಗಳನ್ನು ಅವರು ಸಂದಾಯ ಮಾಡಲು ತಪ್ಪಿದ ಕಾರಣ ಆ ಸಹಕಾರ ಸಂಘವು ಪತ್ತಿನ ಏಜೆನ್ಸಿಗೆ ತನ್ನ ಋಣಗಳನ್ನು ಸಂದಾಯ ಮಾಡಲು ಅಸಮರ್ಥವಾದಲ್ಲಿ ಆ ಪತ್ತಿನ ಏಜೆನ್ಸಿಯು ಅಂಥ ಸಹಕಾರ ಸಂಘದ ಸಮಿತಿಗೆ ಅಂಥ ಸದಸ್ಯರ ವಿರುದ್ಧ ಸಂದರ್ಭಾನುಸಾರ, 70ನೇ ಪ್ರಕರಣದ ಮೇರೆಗಿನ ವ್ಯವಹರಣೆಗಳನ್ನು ಹೂಡಲು ಅಥವಾ 101ನೇ ಪ್ರಕರಣದ ಮೇರೆಗಿನ ವ್ಯವಹರಣೆಗಳನ್ನು ಪ್ರಾರಂಭಿಸಲು ನಿರ್ದೇಶಿಸಬಹುದು ಮತ್ತು ಅಂಥ ನಿರ್ದೇಶನವನ್ನು ಸ್ವೀಕರಿಸಿದ ದಿನಾಂಕದಿಂದ ತೊಂಬತ್ತು ದಿನಗಳ ಅವಧಿಯ ಒಳಗೆ ಸಮಿತಿಯು ಹಾಗೆ ಮಾಡಲು ತಪ್ಪಿದರೆ ಪತ್ತಿನ ಏಜೆನ್ಸಿಯು, ಸಂದರ್ಭಾನುಸಾರ, 70ನೇ ಪ್ರಕರಣದ ಅಥವಾ 101ನೇ ಪ್ರಕರಣದ ಮೇರೆಗೆ ಅಂಥ ಬಾಕಿದಾರ ಸದಸ್ಯರ ವಿರುದ್ಧ ತಾನೇ ವ್ಯವಹರಣೆಯನ್ನು ನಡೆಸಬಹುದು ಮತ್ತು ಅಂಥ ಸಂದರ್ಭದಲ್ಲಿ ಈ ಅಧಿನಿಯಮ, ನಿಯಮಗಳು ಮತ್ತು ಉಪವಿಧಿಗಳ ಉಪಬಂಧಗಳು, ಸದರಿ ಉಪಬಂಧಗಳಲ್ಲಿ ಆ ಸಹಕಾರ ಸಂಘ ಅಥವಾ ಅದರ ಸಮಿತಿಗೆ ಮಾಡಲಾದ ಎಲ್ಲ ಉಲ್ಲೇಖಗಳು ಪತ್ತಿನ ಏಜೆನ್ಸಿಗೆ ಮಾಡಲಾದ ಉಲ್ಲೇಖಗಳಾಗಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕುದು.

(2) ಪತ್ತಿನ ಏಜೆನ್ಸಿಗೆ ಸಹಕಾರ ಸಂಘದಿಂದ ಬಾಕಿ ಇರುವ ಹಣಗಳ ಸಂಬಂಧದಲ್ಲಿ ಆ ಸಹಕಾರ ಸಂಘದ ವಿರುದ್ಧ ಅದು ಡಿಕ್ರಿ ಅಥವಾ ಐತೀರ್ಪನ್ನು ಪಡೆದುಕೊಂಡಿರುವಲ್ಲಿ ಆ ಪತ್ತಿನ ಏಜೆನ್ಸಿಯು ಅಂಥ ಹಣಗಳನ್ನು ಮೊದಲು ಸಹಕಾರ ಸಂಘದ ಆಸ್ತಿಗಳಿಂದ ಮತ್ತು ಎರಡನೆಯದಾಗಿ ಅಂಥ ಸಹಕಾರ ಸಂಘದ ಸದಸ್ಯರಿಂದ, ಸಂಘಕ್ಕೆ ಸಲ್ಲತಕ್ಕ ಋಣಗಳಷ್ಟರ ಮಟ್ಟಿಗೆ ವಸೂಲು ಮಾಡಲು ಕ್ರಮ ಕೈಗೊಳ್ಳಬಹುದು.][3]

1. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1975ರ ಅಧಿನಿಯಮ ಸಂಖ್ಯೆ 2ರ ಮೂಲಕ 17.7.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## ಅಧ್ಯಾಯ - X

## ಸಹಕಾರ ಸಂಘಗಳ ಸಮಾಪನ ಮತ್ತು ವಿಸರ್ಜನೆ

**72. ಸಹಕಾರ ಸಂಘಗಳ ಸಮಾಪನ :-** (1) ರಿಜಿಸ್ಟ್ರಾರನು, 64ನೇ ಪ್ರಕರಣದ ಮೇರೆಗೆ ವಿಚಾರಣೆ ನಡೆಸಿದ ಅಥವಾ 65ನೇ ಪ್ರಕರಣದ ಮೇರೆಗೆ ಪರಿಶೀಲನೆ ಮಾಡಿದ ತರುವಾಯ ಅಥವಾ ಸಹಕಾರ ಸಂಘದ ಸದಸ್ಯರ ಪೈಕಿ ನಾಲ್ಕನೇ ಮೂರು ಭಾಗಕ್ಕಿಂತ ಕಡಿಮೆಯಿಲ್ಲದಷ್ಟು ಜನ ಸದಸ್ಯರು ಸಲ್ಲಿಸಿದ ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಆ ಸಂಘವನ್ನು ಸಮಾಪನಗೊಳಿಸಬೇಕೆಂದು ಅಭಿಪ್ರಾಯಪಡುವಲ್ಲಿ, ಅವನು ಅದನ್ನು ಸಮಾಪನಗೊಳಿಸಬೇಕೆಂದು ನಿರ್ದೇಶಿಸುವ ಆದೇಶವನ್ನು ಹೊರಡಿಸಬಹುದು.

(2) ರಿಜಿಸ್ಟ್ರಾರನು ತಾನಾಗಿಯೇ -

[1][(ಎ) ಸಂಘದ ಸದಸ್ಯರ ಸಂಖ್ಯೆಯು ಒಂದು ಸಹಕಾರ ಸಂಘದ ನೋಂದಣಿಗೆ ಅಗತ್ಯವಿರುವ ಕನಿಷ್ಠ ಸಂಖ್ಯೆಗಿಂತ ಕಡಿಮೆಯಾಗಿರುವಲ್ಲಿ; ಅಥವಾ][1]

(ಬಿ) ಸಹಕಾರ ಸಂಘವು ಕಾರ್ಯವನ್ನು ಪ್ರಾರಂಭಿಸದಿರುವಲ್ಲಿ ಅಥವಾ ಕಾರ್ಯವನ್ನು ನಿಲ್ಲಿಸಿರುವಲ್ಲಿ; [2][ಅಥವಾ][2]

[2][(ಸಿ) ನೋಂದಣಿ ಮತ್ತು ವ್ಯವಸ್ಥಾಪನೆ ಬಗ್ಗೆ ಈ ಅಧಿನಿಯಮದಿಂದ ಅಥವಾ ಅದರ ಮೇರೆಗೆ ವಿಧಿಸಿದ ಷರತ್ತುಗಳನ್ನು ಪಾಲಿಸುವುದನ್ನು ಸಹಕಾರ ಸಂಘವು ನಿಲ್ಲಿಸಿರುವಲ್ಲಿ

- ಸಹಕಾರ ಸಂಘವನ್ನು ಸಮಾಪನಗೊಳಿಸುವಂತೆ ನಿರ್ದೇಶಿಸುವ ಆದೇಶವನ್ನು ಮಾಡಬಹುದು.][2]

(3) ಸಹಕಾರ ಸಂಘದ ಅಸ್ತಿತ್ವವು ಮುಂದುವರಿಯತಕ್ಕುದೆಂದು ರಿಜಿಸ್ಟ್ರಾರನು ಅಭಿಪ್ರಾಯಪಟ್ಟಂಥ ಯಾವುದೇ ಸಂದರ್ಭದಲ್ಲಿ, ಯಾವುದೇ ಕಾಲಕ್ಕೆ ಆ ಸಂಘದ ಸಮಾಪನದ ಆದೇಶವನ್ನು ಅವನು ರದ್ದುಪಡಿಸಬಹುದು.

[3][(4) ಈ ಪ್ರಕರಣದಲ್ಲಿ ಏನೇ ಇದ್ದರೂ, ರಿಸರ್ವ್ ಬ್ಯಾಂಕ್‌ನ ಲಿಖಿತ ಪೂರ್ವ ಮಂಜೂರಾತಿಯನ್ನು ಪಡೆದ ಹೊರತು, ಯಾವುದೇ ಸಹಕಾರ ಬ್ಯಾಂಕನ್ನು ಸಮಾಪನಗೊಳಿಸತಕ್ಕುದಲ್ಲ [4][ಅಥವಾ ಸಮಾಪನಗೊಳಿಸುವ ಆದೇಶವನ್ನು ರದ್ದುಗೊಳಿಸತಕ್ಕುದಲ್ಲ.][4]][3]

[3][**72ಎ. ರಿಸರ್ವ್ ಬ್ಯಾಂಕು ಯಾವೊಂದು ಸಹಕಾರ ಬ್ಯಾಂಕನ್ನು ಸಮಾಪನಗೊಳಿಸಬೇಕೆಂದು ಅಗತ್ಯಪಡಿಸುವಲ್ಲಿ ಹಾಗೆ ಮಾಡುವುದು:-** ಈ ಅಧಿನಿಯಮದಲ್ಲಿ ತದ್ವಿರುದ್ಧವಾಗಿ ಏನೇ ಇದ್ದರೂ ಠೇವಣಿ ವಿಮಾ ನಿಗಮ ಅಧಿನಿಯಮ, 1961ರ (1961ರ ಕೇಂದ್ರ ಅಧಿನಿಯಮ 47) 13ನೇ ಪ್ರಕರಣದಲ್ಲಿ ಹೇಳಲಾದ ಸನ್ನಿವೇಶಗಳಲ್ಲಿ , ರಿಸರ್ವ್‌ಬ್ಯಾಂಕು ಸಹಕಾರ ಬ್ಯಾಂಕನ್ನು ಸಮಾಪನಗೊಳಿಸುವ ಆದೇಶವನ್ನು ಮಾಡಬೇಕೆಂದು ಅಗತ್ಯಪಡಿಸಿದರೆ ರಿಜಿಸ್ಟ್ರಾರನು ಹಾಗೆ ಮಾಡಬಹುದು.

**72ಬಿ. ಸಮಾಪಕರು ಠೇವಣಿ ವಿಮಾ ನಿಗಮಕ್ಕೆ ಹಣ ತುಂಬಿಕೊಡುವುದು:-** ಠೇವಣಿ ವಿಮಾ ನಿಗಮ ಅಧಿನಿಯಮ, 1961ರ ಅರ್ಥದಲ್ಲಿ ವಿಮೆ ಮಾಡಿರತಕ್ಕ ಬ್ಯಾಂಕು ಆಗಿರುವ ಸಹಕಾರ ಬ್ಯಾಂಕನ್ನು ಪರಿಸಮಾಪನಗೊಳಿಸಿರುವಲ್ಲಿ ಅಥವಾ ಸಮಾಪನಗೊಳಿಸಲು ಕ್ರಮ ಕೈಗೊಂಡಿರುವಲ್ಲಿ ಮತ್ತು ಆ ಅಧಿನಿಯಮದ 16ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಠೇವಣಿ ವಿಮಾ ನಿಗಮವು ವಿಮೆ ಮಾಡಿಸಿದ ಬ್ಯಾಂಕಿನ ಠೇವಣಿದಾರನಿಗೆ ಹೊಣೆಯಾಗಿರುವಲ್ಲಿ, ಠೇವಣಿ ವಿಮಾ ನಿಗಮಕ್ಕೆ ಸನ್ನಿವೇಶಗಳಲ್ಲಿ ಸಮಾಪಕನು ಅಥವಾ ಅಂಥ ಇತರ ವ್ಯಕ್ತಿಯು, ಠೇವಣಿ ವಿಮಾ ನಿಗಮ ಅಧಿನಿಯಮ, 1961ರ 21ನೇ ಪ್ರಕರಣದಲ್ಲಿ ಉಪಬಂಧಿಸಿದ ರೀತಿಯಲ್ಲಿ ಹಣ ತುಂಬಿಕೊಡತಕ್ಕುದು.][3]

**73. ಸಮಾಪಕ :-** (1) ಸಹಕಾರ ಸಂಘದ ಸಮಾಪನಕ್ಕಾಗಿ 72ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರನು, ಆದೇಶವನ್ನು ಮಾಡಿರುವಲ್ಲಿ, ಅವನು ಆ ಉದ್ದೇಶಕ್ಕಾಗಿ ಸಮಾಪಕನನ್ನು ನೇಮಿಸಬಹುದು ಮತ್ತು ಅವನು ಪರಿಶ್ರಮಧನವನ್ನು ನಿಗದಿಪಡಿಸಬಹುದು.

(2) ನೇಮಕದ ತರುವಾಯ ಸಮಾಪಕನು, ಸಂಘವು ಹಕ್ಕು ಹೊಂದಿರುವ ಅಥವಾ ಹಕ್ಕುಹೊಂದಿರುವುದಾಗಿ ಕಂಡು ಬರುವ ಎಲ್ಲ ಸ್ವತ್ತನ್ನು, ಸಾಮಾನು ಸರಂಜಾಮುಗಳನ್ನು ಮತ್ತು ಕ್ರಮಾರ್ಹ ಕ್ಲೇಮುಗಳನ್ನು ತನ್ನ ಅಭಿರಕ್ಷೆಗೆ ಅಥವಾ ನಿಯಂತ್ರಣಕ್ಕೆ ತೆಗೆದುಕೊಳ್ಳತಕ್ಕುದು ಮತ್ತು ಅಂಥ ಸ್ವತ್ತಿನ ಸಾಮಾನು ಸರಂಜಾಮುಗಳ ಮತ್ತು ಕ್ಲೇಮುಗಳ ನಷ್ಟವನ್ನು ಅಥವಾ ಇಳಿಗತಿಯನ್ನು ಅಥವಾ ಹಾನಿಯನ್ನು ತಡೆಗಟ್ಟಲು ಅವಶ್ಯವೆಂದು ಅಥವಾ ವಿಹಿತವೆಂದು ತಾನು ಭಾವಿಸಬಹುದಾದಂಥ ಕ್ರಮಗಳನ್ನು ಕೈಗೊಳ್ಳತಕ್ಕುದು.

(3) 106ನೇ ಪ್ರಕರಣದ ಮೇರೆಗೆ ಅಪೀಲನ್ನು ಸಲ್ಲಿಸಿರುವಲ್ಲಿ, 72ನೇ ಪ್ರಕರಣದ ಮೇರೆಗೆ ಮಾಡಿದ ಸಹಕಾರ ಸಂಘವನ್ನು ಸಮಾಪನಗೊಳಿಸುವ ಆದೇಶವು ಆ ತರುವಾಯ ಅಪೀಲಿನಲ್ಲಿ ಆ ಆದೇಶವನ್ನು ದೃಢೀಕರಿಸುವವರೆಗೆ ಪ್ರವರ್ತಿತವಾಗತಕ್ಕುದಲ್ಲ:

ಪರಂತು, ಸಮಾಪಕನು, (2)ನೇ ಉಪಪ್ರಕರಣದಲ್ಲಿ ನಮೂದಿಸಿದ ಸ್ವತ್ತು, ಸಾಮಾನು ಸರಂಜಾಮು ಅಥವಾ ಕ್ರಮಾರ್ಹ ಕ್ಲೇಮುಗಳ ಅಭಿರಕ್ಷೆಯನ್ನು ಅಥವಾ ನಿಯಂತ್ರಣವನ್ನು ಹೊಂದಿರುವುದು ಮುಂದುವರಿಯತಕ್ಕುದು ಮತ್ತು ಆ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಕ್ರಮಗಳನ್ನು ಕೈಗೊಳ್ಳಲು ಅವನಿಗೆ ಅಧಿಕಾರವಿರತಕ್ಕುದು.

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ 20.1.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(4) ಸಹಕಾರ ಸಂಘದ ಸಮಾಪನದ ಆದೇಶವನ್ನು ಅಪೀಲಿನಲ್ಲಿ ತಳ್ಳಿ ಹಾಕಿರುವಲ್ಲಿ ಸಂಘದ ಸ್ವತ್ತು, ಸಾಮಾನು ಸರಂಜಾಮು ಮತ್ತು ಕ್ರಮಾರ್ಹ ಕ್ಲೇಮುಗಳು ಸಂಘದಲ್ಲಿ ಪುನಃ ನಿಹಿತವಾಗತಕ್ಕುದು.

**74. ಸಮಾಪಕನ ಅಧಿಕಾರಗಳು:-** (1) ಈ ಬಗ್ಗೆ ರಚಿಸಿದ ನಿಯಮಗಳಿಗೊಳಪಟ್ಟು, ಯಾವ ಸಹಕಾರ ಸಂಘಕ್ಕೆ ಸಂಬಂಧಿಸಿ ಸಮಾಪನ ಈ ಆದೇಶವನ್ನು ಮಾಡಲಾಗಿದೆಯೋ ಅದರ ಎಲ್ಲ ಆಸ್ತಿಗಳು, 73ನೇ ಪ್ರಕರಣದ ಮೇರೆಗೆ ನೇಮಿಸಲಾದ ಸಮಾಪಕನಲ್ಲಿ, ಆ ಆದೇಶವು ಪರಿಣಾಮಕಾರಿಯಾಗುವ ದಿನಾಂಕದಿಂದ ನಿಹಿತವಾಗತಕ್ಕುದು ಮತ್ತು ಅಂಥ ಆಸ್ತಿಗಳನ್ನು ಮಾರಾಟಮಾಡಿ ಅಥವಾ ಇತರ ರೀತಿಯಲ್ಲಿ ಹಣಕ್ಕೆ ಪರಿವರ್ತಿಸಿಕೊಳ್ಳಲು ಸಮಾಪಕನು ಅಧಿಕಾರ ಹೊಂದಿರತಕ್ಕುದು.

(2) ಅಂಥ ಸಮಾಪಕನು ರಿಜಿಸ್ಟ್ರಾರನ ನಿಯಂತ್ರಣಕ್ಕೆ ಒಳಪಟ್ಟುಈ ಕೆಳಕಂಡ ಅಧಿಕಾರಗಳನ್ನು ಸಹ ಹೊಂದಿರತಕ್ಕುದು -

(ಎ) ತನ್ನ ಪದದ ಹೆಸರಿನಲ್ಲಿ ಸಹಕಾರ ಸಂಘದ ಪರವಾಗಿ ದಾವೆಗಳನ್ನು ಮತ್ತು ಇತರ ಕಾನೂನು ವ್ಯವಹರಣೆಗಳನ್ನು ಹೂಡುವುದು ಮತ್ತು ಪ್ರತಿವಾದಿಸುವುದು;

(ಬಿ) ಸದಸ್ಯರಿಂದ ಅಥವಾ ಹಿಂದಿನ ಸದಸ್ಯರಿಂದ ಅಥವಾ ಮೃತ ಸದಸ್ಯರ ಸಂಪದಗಳಿಂದ, ಅಥವಾ ನಾಮನಿರ್ದೇಶಿತರಿಂದ, ವಾರಸುದಾರರಿಂದ ಅಥವಾ ಕಾನೂನು ಸಮ್ಮತ ಪ್ರತಿನಿಧಿಗಳಿಂದ, ಅಥವಾ ಯಾರೇ [1][ಪದಾಧಿಕಾರಿಗಳಿಂದ][1] ಅಥವಾ ಹಿಂದಿನ [1][ಪದಾಧಿಕಾರಿಗಳಿಂದ][1] ಸಂಘದ ಆಸ್ತಿಗಳಿಗೆ ಸಂದಾಯಮಾಡತಕ್ಕ ಅಥವಾ ಸಂದಾಯಮಾಡಬೇಕಾಗಿ ಉಳಿದಿರುವ ವಂತಿಗೆಗಳನ್ನು ಕಾಲಕಾಲಕ್ಕೆ ನಿರ್ಧರಿಸುವುದು;

(ಸಿ) ಸಹಕಾರ ಸಂಘದ ವಿರುದ್ಧ ಮಾಡಲಾದ ಎಲ್ಲ ಕ್ಲೇಮುಗಳನ್ನು ತನಿಖೆಮಾಡುವುದು ಮತ್ತು , ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಕ್ಲೇಮುದಾರರ ನಡುವೆ ಉದ್ಭವಿಸುವ ಆದ್ಯತೆಯ ಪ್ರಶ್ನೆಗಳನ್ನು ತೀರ್ಮಾನಿಸುವುದು;

(ಡಿ) ಸಹಕಾರ ಸಂಘದ ವಿರುದ್ಧ ಮಾಡಲಾದ ಕ್ಲೇಮುಗಳನ್ನು, ಸಮಾಪನದ ದಿನಾಂಕದವರೆಗಿನ ಬಡ್ಡಿಯು ಸೇರಿ, ಅವುಗಳಿಗೆ ಸಂಬಂಧಿಸಿದ ಆದ್ಯತಾ ಕ್ರಮಗಳು ಯಾವುದಾದರೂ ಇದ್ದಲ್ಲಿ, ಅವುಗಳಿಗೆ ಅನುಸಾರವಾಗಿ, ಸಂಘದ ಆಸ್ತಿಗಳು ಅನುಮತಿಸಬಹುದಾದಂತೆ ಪೂರ್ತಿಯಾಗಿ ಅಥವಾ ಪ್ರಮಾಣಾನುಸಾರ ಸಂದಾಯಮಾಡುವುದು; ಆ ಕ್ಲೇಮುಗಳನ್ನು ಸಂದಾಯಮಾಡಿದ ತರುವಾಯ ಹೆಚ್ಚುವರಿ ಏನಾದರೂ ಉಳಿದಲ್ಲಿ, ಅದನ್ನು ಸಮಾಪನದ ಅಂಥ ಆದೇಶದ ದಿನಾಂಕದಿಂದ ಅವನು ನಿಗದಿಪಡಿಸಿದ ದರದಲ್ಲಿ, ಆದರೆ ಯಾವುದೇ ಸಂದರ್ಭದಲ್ಲಿ ಕರಾರುದರವನ್ನು ಮೀರದ ದರದಲ್ಲಿ ಬಡ್ಡಿಯನ್ನು ಸಂದಾಯಮಾಡಲು ವಿನಿಯೋಗಿಸುವುದು;

(ಇ) ಸಮಾಪನ ಖರ್ಚುಗಳನ್ನು ಯಾವ ವ್ಯಕ್ತಿಗಳು ಮತ್ತು ಯಾವ ಪ್ರಮಾಣಗಳಲ್ಲಿ ವಹಿಸಬೇಕೆಂಬುದನ್ನು ನಿರ್ಧರಿಸುವುದು;

(ಎಫ್) ಯಾರೇ ವ್ಯಕ್ತಿಯು ಸದಸ್ಯನೆ, ಹಿಂದಿನ ಸದಸ್ಯನೆ ಅಥವಾ ಮೃತ ಸದಸ್ಯನೆ, ನಾಮನಿರ್ದೇಶಿತನೆ ಎಂಬುದನ್ನು ನಿರ್ಧರಿಸುವುದು;

(ಜಿ) ಸಂಘದ ಆಸ್ತಿಯ ಸಂಗ್ರಹಣೆ ಮತ್ತು ವಿತರಣೆಗೆ ಸಂಬಂಧಿಸಿ ಸಂಘದ ವ್ಯವಹಾರಗಳನ್ನು ಸಮಾಪನಗೊಳಿಸುವುದಕ್ಕೆ ಅವಶ್ಯವೆಂದು ತನಗೆ ಕಂಡುಬರಬಹುದಾದಂಥ ನಿರ್ದೇಶನಗಳನ್ನು ನೀಡುವುದು;

(ಹೆಚ್) ಸಂಘದ ವ್ಯವಹಾರವನ್ನು ಪ್ರಯೋಜನಕಾರಿಯಾಗುವಂತೆ ಸಮಾಪನಗೊಳಿಸುವ ಸಲುವಾಗಿ ಅವಶ್ಯವಾಗುವಷ್ಟು ಮಟ್ಟಿಗೆ ಅದರ ವ್ಯವಹಾರವನ್ನು ನಡೆಸುವುದು;

(ಐ) ಲೇಣೇದಾರರಿಂದ ಅಥವಾ ಲೇಣೇದಾರರೆಂದು ಕ್ಲೇಮು ಮಾಡುವ ಅಥವಾ ಈಗಿನ ಅಥವಾ ಮುಂದಿನ ಯಾವುದೇ ಕ್ಲೇಮು ಹೊಂದಿರುವ ಅಥವಾ ಯಾವುದೇ ಕ್ಲೇಮು ಇದೆಯೆಂದು ಹೇಳಿಕೊಳ್ಳುವ ವ್ಯಕ್ತಿಗಳೊಡನೆ ಸಂಘವು ಹೊಣೆಯಾಗುವಂಥ ರೀತಿಯಲ್ಲಿ ಯಾವುದೇ ರಾಜಿಯನ್ನು ಅಥವಾ ವ್ಯವಸ್ಥೆ ಯನ್ನು ಮಾಡಿಕೊಳ್ಳುವುದು; ಮತ್ತು

(ಜೆ) ಸಂಘದ ಮತ್ತು ವಂತಿಗೆದಾರ ಅಥವಾ ಹೇಳಿಕೊಳ್ಳುವ ವಂತಿಗೆದಾರ ಅಥವಾ ಇತರ ಋಣಿ ಅಥವಾ ಸಹಕಾರ ಸಂಘವನ್ನು ಹೊಣೆಗಾರಿಕೆಗೆ ಗುರಿಪಡಿಸುವ ವ್ಯಕ್ತಿ ಇವರ ನಡುವೆ ಇರುವ ಅಥವಾ ಇರುವುದಾಗಿ ಭಾವಿಸಲಾದ ಎಲ್ಲಾ ಕರೆಗಳು ಅಥವಾ ಕರೆ ಮತ್ತು ಋಣಗಳ ಹೊಣೆಗಾರಿಕೆಗಳು ಮತ್ತು ಋಣಗಳಾಗಿ ಪರಿಣಮಿಸುವಂಥ ಹೊಣೆಗಾರಿಕೆಗಳು ಮತ್ತು ಈಗಿನ ಅಥವಾ ಮುಂದಿನ ನಿಶ್ಚಿತ ಅಥವಾ ಸಂಭಾವ್ಯ ಕ್ಲೇಮುಗಳು ಮತ್ತು ಒಪ್ಪಿಕೊಳ್ಳಬಹುದಾದಂಥ ನಿಬಂಧನೆಗಳ ಮೇಲೆ ಸಂಘದ ಆಸ್ತಿಗಳಿಗೆ ಅಥವಾ ಸಮಾಪನಕ್ಕೆ ಯಾವುದೇ ರೀತಿಯಲ್ಲಿ ಸಂಬಂಧಿಸಿದ ಅಥವಾ ಅವುಗಳ ಮೇಲೆ ಪರಿಣಾಮ ಬೀರುವಂಥ ಎಲ್ಲಾ ಪ್ರಶ್ನೆಗಳನ್ನು ರಾಜಿಮಾಡಿಕೊಳ್ಳುವುದು ಮತ್ತು ಅಂಥ ಯಾವುದೇ ಕರೆ, ಹೊಣೆಗಾರಿಕೆ, ಋಣ ಅಥವಾ ಕ್ಲೇಮಿನ ತೀರಿಕೆಯ ಸಲುವಾಗಿ ಯಾವುದೇ ಭದ್ರತೆಯನ್ನು ತೆಗೆದುಕೊಳ್ಳುವುದು ಮತ್ತು ಆ ಸಂಬಂಧದಲ್ಲಿ ಪೂರ್ಣ ತೀರಿಕೆಯನ್ನು ನೀಡುವುದು.

(3) ಸಹಕಾರ ಸಂಘದ ವ್ಯವಹಾರಗಳನ್ನು ಸಮಾಪನಗೊಳಿಸಿದಾಗ, ಸಮಾಪಕನು ರಿಜಿಸ್ಟ್ರಾರನಿಗೆ ವರದಿ ಮಾಡತಕ್ಕುದು ಮತ್ತು ಸಂಘದ ದಾಖಲೆಗಳನ್ನು ರಿಜಿಸ್ಟ್ರಾರನು ನಿರ್ದೇಶಿಸಬಹುದಾದಂಥ ಸ್ಥಳದಲ್ಲಿ ಇಡತಕ್ಕುದು.

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**75. ಸಹಕಾರ ಸಂಘದ ನೋಂದಣಿಯ ರದ್ದಿಯಾತಿ:-** 72ನೇ ಪ್ರಕರಣದ ಮೇರೆಗೆ ಸಮಾಪನಗೊಳಿಸಬೇಕೆಂದು ಆದೇಶಿಸಲಾದ ಯಾವುದೇ ಸಹಕಾರ ಸಂಘಕ್ಕೆ ಸಂಬಂಧಿಸಿ ಅಂಥ ಆದೇಶದ ದಿನಾಂಕದಿಂದ ಎರಡು ತಿಂಗಳ ತರುವಾಯ 73ನೇ ಪ್ರಕರಣದ ಮೇರೆಗೆ ಸಮಾಪಕನನ್ನು ನೇಮಿಸಿರದಿದ್ದರೆ ಅಥವಾ ಅಂಥ ಆದೇಶದ ದೃಢೀಕರಣದ ದಿನಾಂಕದಿಂದ ಅದರ ಮೇಲೆ ಅಪೀಲು ಸಲ್ಲಿಸಿರುವಲ್ಲಿ ಅಥವಾ ಯಾವ ಸಹಕಾರ ಸಂಘಕ್ಕೆ ಸಂಬಂಧಿಸಿ 73ನೇ ಪ್ರಕರಣದ ಮೇರೆಗೆ ಸಮಾಪಕನನ್ನು ನೇಮಿಸಲಾಗಿರುವುದೋ ಅದರ ವ್ಯವಹಾರಗಳನ್ನು ಸಮಾಪನಗೊಳಿಸಿರುವಲ್ಲಿ, ರಿಜಿಸ್ಟ್ರಾರನು ಆ ಸಂಘದ ನೋಂದಣಿಯನ್ನು ರದ್ದುಗೊಳಿಸುವ ಆದೇಶವನ್ನು ಮಾಡತಕ್ಕುದು ಮತ್ತು ಅಂಥ ರದ್ದಿಯಾತಿಯ ಆದೇಶದ ದಿನಾಂಕದಿಂದ ಸಂಘವು ವಿಸರ್ಜಿತವಾಗಿರುವುದಾಗಿ ಭಾವಿಸತಕ್ಕುದು ಮತ್ತು ನಿಗಮಿತ ನಿಕಾಯವಾಗಿರತಕ್ಕ ಅದರ ಅಸ್ತಿತ್ವ ಕೊನೆಗೊಳ್ಳತಕ್ಕುದು.

## ಅಧ್ಯಾಯ - XI

## [1][[2][ಕೃಷಿ ಮತ್ತು ಗ್ರಾಮೀಣ][1] ಅಭಿವೃದ್ಧಿ ಬ್ಯಾಂಕುಗಳು][2]

**76. ಪರಿಭಾಷೆಗಳು:-** ಈ ಅಧ್ಯಾಯದಲ್ಲಿ -

(ಎ) 'ಮಂಡಲಿ' ಎಂದರೆ [2][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][2] ನಿರ್ದೇಶಕರ ಮಂಡಲಿ;

(ಬಿ) [2]['ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು'][2] ಎಂದರೆ ಈ ಅಧಿನಿಯಮದ ಮೇರೆಗೆ ನೋಂದಾಯಿತವಾದ ಅಥವಾ ನೋಂದಾಯಿತವಾಗಿರುವುದಾಗಿ ಭಾವಿಸಲಾದ ಮತ್ತು [2][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][2] ಸದಸ್ಯನಾಗಿ ಪ್ರವೇಶಪಡೆದ ಸಹಕಾರ [2][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][2] [3][ಮತ್ತು ಅದು ರಿಜಿಸ್ಟ್ರಾರನು ಅಧಿಸೂಚಿಸಿ [2][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][2] ಸದಸ್ಯರೆಂದು ಪ್ರವೇಶ ನೀಡಬಹುದಾದಂಥ ಸಹಕಾರ ಸಂಘಗಳ ವರ್ಗ ಅಥವಾ ವರ್ಗಗಳನ್ನು ಒಳಗೊಳ್ಳುತ್ತದೆ;][3]

(ಸಿ) [2]['ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು'][2] ಎಂದರೆ, [4][ಕರ್ನಾಟಕ][4] ಕೇಂದ್ರ ಸಹಕಾರ [2][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][2] ನಿಯಮಿತ;

(ಡಿ) 'ನ್ಯಾಸಧಾರಿ' ಎಂದರೆ, 77ನೆಯ ಪ್ರಕರಣದಲ್ಲಿ ಉಲ್ಲೇಖಿಸಲಾದ ನ್ಯಾಸಧಾರಿ.

[5][[6][**76-ಎ. ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳಿಗೆ ಈ ಅಧ್ಯಾಯದ ಅನ್ವಯ:-** ಭೂಮಿಗಳ ಆಧಾರ ಅಥವಾ ಅಡಮಾನದ ಮೇಲೆ ಅಥವಾ ಕೃಷಿ ಯಂತ್ರಗಳನ್ನು ಅಥವಾ ಸರ್ಕಾರವು ಈ ಸಂಬಂಧದಲ್ಲಿ ಕಾಲಕಾಲಕ್ಕೆ ಅಧಿಸೂಚಿಸಬಹುದಾದ ಉದ್ದೇಶಗಳಿಗಾಗಿ ನೀಡಲಾದ ಸಾಲಗಳಿಂದ ಸೃಜಿಸಲಾದ ಇತರೆ ಆಸ್ತಿಗಳ ಒತ್ತೆಯ ಆಧಾರದ ಮೇಲೆ ಸಾಲಗಳನ್ನು ನೀಡುವ ಸಹಕಾರ ಬ್ಯಾಂಕ್‌ಗಳಿಗೆ ಈ ಅಧ್ಯಾಯವು ಅನ್ವಯವಾಗತಕ್ಕುದು.][6]

**76-ಬಿ. ರಾಜ್ಯದ ಮತ್ತು ಇತರ [2][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು][2]:-** (1) [4][ಕರ್ನಾಟಕ][4] ರಾಜ್ಯಕ್ಕಾಗಿ ಒಂದು [2][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][2] ಇರತಕ್ಕುದು ಮತ್ತು ಅವಶ್ಯವೆಂದು ಭಾವಿಸಬಹುದಾದಷ್ಟು [2][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು][2] ಇರತಕ್ಕುದು.

(2) ರಾಜ್ಯದಲ್ಲಿ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಅಥವಾ ಲಿಖಿತದಲ್ಲಿ ಭೂ ಅಡಮಾನ ಬ್ಯಾಂಕಿಗೆ ಮಾಡಲಾದ ಉಲ್ಲೇಖವನ್ನು [4][ಕರ್ನಾಟಕ][4] ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 1964ರ ಪ್ರಾರಂಭದಿಂದ [7][ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 1984ರ ಪ್ರಾರಂಭದಿಂದ ದಿನಾಂಕದವರೆಗೆ ಈ ಅಧ್ಯಾಯದ ಅರ್ಥದಲ್ಲಿ ಭೂ ಅಭಿವೃದ್ಧಿ ಬ್ಯಾಂಕಿಗೆ ಮತ್ತು ಆ ತರುವಾಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][7] ಮಾಡಲಾದ ಉಲ್ಲೇಖವೆಂದು ಅರ್ಥೈಸತಕ್ಕುದು.

(3) ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 1964ರ ಪ್ರಾರಂಭದಿಂದ ಮತ್ತು ಸದರಿ ಅಧಿನಿಯಮದ ಪ್ರಾರಂಭದಲ್ಲಿ ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಭೂ ಅಡಮಾನ ಬ್ಯಾಂಕುಗಳು ಮತ್ತು ಸಂಘಗಳ ಹೆಸರುಗಳನ್ನು 'ಭೂ ಅಭಿವೃದ್ಧಿ ಬ್ಯಾಂಕು'ಗಳೆಂದು ಬದಲಾಯಿಸುವವರೆಗೆ, ಅವುಗಳ ಮೂಲಕ ಮಾಡಲಾದ ಎಲ್ಲಾ ಕಾರ್ಯಗಳು ಅಥವಾ ಅವು ಅಥವಾ ಅವುಗಳ ಹೆಸರಿಗೆ ಮಾಡಿದ ಅಡಮಾನಗಳು ಮತ್ತು ಬರೆದುಕೊಡಲಾದ ಎಲ್ಲಾ ಇತರ ದಸ್ತಾವೇಜುಗಳನ್ನು ಮತ್ತು ಅವುಗಳಿಂದ ಅಥವಾ ಅವುಗಳ ವಿರುದ್ಧ ಸಲ್ಲಿಸಲಾದ ಎಲ್ಲ ದಾವೆಗಳು ಮತ್ತು ಇತರ ವ್ಯವಹರಣೆಗಳನ್ನು, ಸಂದರ್ಭಾನುಸಾರ, ಭೂ ಅಭಿವೃದ್ಧಿ ಬ್ಯಾಂಕುಗಳಾಗಿ ಅವು ಅಥವಾ ಅವುಗಳ ವಿರುದ್ಧ ಮಾಡಲಾಗಿರುವುದಾಗಿ, ಬರೆದುಕೊಟ್ಟಿರುವುದಾಗಿ ಅಥವಾ ಸಲ್ಲಿಸಿರುವುದಾಗಿ ಭಾವಿಸತಕ್ಕುದು.][5]

1. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ 20.1.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
5. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
6. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
7. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(4) ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 1984ರ ಪ್ರಾರಂಭದಿಂದ ಮತ್ತು ಸದರಿ ಅಧಿನಿಯಮದ ಪ್ರಾರಂಭದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಭೂ ಅಡಮಾನ ಬ್ಯಾಂಕುಗಳು ಮತ್ತು ಭೂ ಅಭಿವೃದ್ಧಿ ಬ್ಯಾಂಕುಗಳ ಹೆಸರುಗಳನ್ನು ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳೆಂದು ಬದಲಾಯಿಸುವವರೆಗೆ, (3)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ, ಅವುಗಳು ಮಾಡಿದ ಎಲ್ಲ ಕಾರ್ಯಗಳನ್ನು ಅಥವಾ ಅವು ಮಾಡಿದ ಅಥವಾ ಅವುಗಳ ಹೆಸರಿಗೆ ಮಾಡಲಾದ ಅಡಮಾನ ಅಥವಾ ಬರೆದು ಕೊಡಲಾದ ದಸ್ತಾವೇಜುಗಳನ್ನು ಮತ್ತು ಅವುಗಳಿಂದ ಅವುಗಳ ವಿರುದ್ಧ ಸಲ್ಲಿಸಲಾದ ಎಲ್ಲ ದಾವೆಗಳು ಮತ್ತು ಇತರ ವ್ಯವಹರಣೆಗಳನ್ನು ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳಾಗಿ ಸಂದರ್ಭಾನುಸಾರ, ಅವು ಅಥವಾ ಅವುಗಳ ವಿರುದ್ಧ ಮಾಡಲಾಗಿರುವುದಾಗಿ, ಬರೆದುಕೊಟ್ಟಿರುವುದಾಗಿ ಅಥವಾ ಸಲ್ಲಿಸಿರುವುದಾಗಿ ಭಾವಿಸತಕ್ಕುದು.][1]

**77. ನ್ಯಾಸಧಾರಿಯ ನೇಮಕಾತಿ ಮತ್ತು ಅವನ ಅಧಿಕಾರಗಳು ಮತ್ತು ಪ್ರಕಾರ್ಯಗಳು:-** (1) ಮಂಡಲಿಯು ಹೊರಡಿಸಿದ ಡಿಬೆಂಚರುಗಳ ಧಾರಕರ ಸಂಬಂಧದಲ್ಲಿ [2][ರಾಜ್ಯದ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][2] ಹೊಣೆಗಾರಿಕೆಗಳ ನೆರವೇರಿಕೆಯನ್ನು ಭದ್ರಗೊಳಿಸುವ ಉದ್ದೇಶಕ್ಕಾಗಿ ರಿಜಿಸ್ಟ್ರಾರನು ಅಥವಾ ಈ ಬಗ್ಗೆ ರಾಜ್ಯ ಸರ್ಕಾರವು ಯಾರೇ ಇತರ ವ್ಯಕ್ತಿಯನ್ನು ನಿಯಮಿಸಿರುವಲ್ಲಿ ಅಂಥ ವ್ಯಕ್ತಿಯು ನ್ಯಾಸಧಾರಿಯಾಗಿರತಕ್ಕುದು.

(2) ನ್ಯಾಸಧಾರಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳನ್ನು ಈ ಅಧಿನಿಯಮವು ಉಪಬಂಧಗಳು ಮತ್ತು, ಬ್ಯಾಂಕು ಮತ್ತು ನ್ಯಾಸಧಾರಿಯ ನಡುವೆ ನಿರ್ವಹಿಸಲಾದ ಮತ್ತು ಮಂಡಲಿ ಮತ್ತು ನ್ಯಾಸಧಾರಿ ಇವರ ನಡುವಣ ಪರಸ್ಪರ ಒಪ್ಪಂದದ ಮೂಲಕ ಕಾಲಕಾಲಕ್ಕೆ ಮಾರ್ಪಾಟಾದಂಥ ನ್ಯಾಸಪತ್ರ ಇವುಗಳಿಗೆ ಅಧೀನವಾಗಿ ನಿರ್ವಹಿಸಲ್ಪಡತಕ್ಕುದು.

**78. ನ್ಯಾಸಧಾರಿಯು ಏಕೈಕ ನಿಗಮವಾಗಿರುವುದು:-** 77ನೇ ಪ್ರಕರಣದ ಮೇರೆಗೆ ನಿಯಮಿಸಲಾದ ನ್ಯಾಸಧಾರಿಯು ಡಿಬೆಂಚರುಗಳ ನ್ಯಾಸಧಾರಿಯ ಹೆಸರಿನಲ್ಲಿ ಏಕೈಕ ನಿಗಮವಾಗಿರತಕ್ಕುದು ಮತ್ತು ಅಂಥ ನಿಗಮವಾಗಿ ಶಾಶ್ವತ ಉತ್ತರಾಧಿಕಾರವನ್ನು ಮತ್ತು ಸಾಮಾನ್ಯ ಮುದ್ರೆಯನ್ನು ಹೊಂದಿರತಕ್ಕುದು ಮತ್ತು ತನ್ನ ನಿಗಮಿತ ಹೆಸರಿನಲ್ಲಿ ದಾವೆ ಹೂಡತಕ್ಕುದು ಮತ್ತು ದಾವೆಗೆ ಗುರಿಯಾಗತಕ್ಕುದು.

[3][**79. ಡಿಬೆಂಚರುಗಳ ನೀಡಿಕೆ:-** (1) ರಾಜ್ಯಸರ್ಕಾರದ ಮತ್ತು ನ್ಯಾಸಧಾರಿಯ ಪೂರ್ವ ಮಂಜೂರಾತಿ ಪಡೆದು ಮತ್ತು ರಾಜ್ಯಸರ್ಕಾರವು ವಿಧಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು, [2][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು,][2] [2][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][2] ಆಗಿ ತನ್ನ ಪ್ರಕಾರ್ಯಗಳ ನಿರ್ವಹಣೆಯಲ್ಲಿ ತಾನು ಸೂಕ್ತವೆಂದು ಭಾವಿಸಬಹುದಾದಂಥ ಅವಧಿಯ ಮತ್ತು ಅಂಥ ಬಡ್ಡಿ ದರಗಳಲ್ಲಿ ಅಂಥ ಮೌಲ್ಯಗಳ ಡಿಬೆಂಚರುಗಳನ್ನು ಹೊರಡಿಸಬಹುದು [1][ಅಥವಾ ಸಾಲಗಳನ್ನು][1]-

(ಎ) ಈಗಾಗಲೇ ಪಡೆದಿರುವ [1][ಸಾಲದಿಂದ ಸೃಜಿಸಲಾದ ಕೃಷಿ ಯಂತ್ರಗಳು [4][ಅಥವಾ 33ನೇ ಪ್ರಕರಣದ ಮೇರೆಗೆ ಸಾಲಗಾರರ ಜಮೀನುಗಳ ಮೇಲೆ ಸೃಜಿಸಿದ ಋಣಭಾರಗಳ ಆಧಾರದ ಮೇಲೆ][1] [4][ಅಥವಾ ಇತರ ಆಸ್ತಿಗಳ [5][ಅಡಮಾನ ಅಥವಾ ಅಡಮಾನಗಳ ಒತ್ತೆ; ಅಥವಾ

[4][(ಎಎ) ಸದಸ್ಯರು ಮಾಲಿಕತ್ವ ಹೊಂದಿದ ಜಮೀನಿನ ಮೇಲೆ ಅಥವಾ ಅಂತಹ ಸದಸ್ಯರು ಗೇಣೀದಾರರಾಗಿ ಹೊಂದಿರುವ ಜಮೀನಿನಲ್ಲಿನ ಹಿತಾಸಕ್ತಿಯ ಮೇಲೆ 33ನೇ ಪ್ರಕರಣ ಮೇರೆಗೆ ಈಗಾಗಲೇ ಸೃಜಿಸಲಾದ ಋಣಭಾರಗಳು.][4]

(ಬಿ) ಪಡೆದುಕೊಳ್ಳಬೇಕಾದ [1][ಸಾಲದಿಂದ ಸೃಜಿಸಲಾದ ಕೃಷಿ ಯಂತ್ರಗಳು ಅಥವಾ ಇತರ ಆಸ್ತಿಗಳ ಅಡಮಾನ ಅಥವಾ ಅಡಮಾನಗಳು ಅಥವಾ ಒತ್ತೆ;][1] ಅಥವಾ;

[4][(ಬಿಬಿ) ಸದಸ್ಯರು ಮಾಲಿಕತ್ವ ಹೊಂದಿದ ಜಮೀನಿನ ಮೇಲೆ ಅಥವಾ ಅಂಥ ಸದಸ್ಯರು ಗೇಣಿದಾರರಾಗಿ ಹೊಂದಿರುವ ಜಮೀನಿನಲ್ಲಿನ ಹಿತಾಸಕ್ತಿಯ ಮೇಲೆ, 33ನೇ ಪ್ರಕರಣದ ಮೇರೆಗೆ ಸೃಜಿಸಬೇಕಾದ ಋಣಭಾರಗಳು.][4]

(ಸಿ) ಪಡೆದ ಮತ್ತು ಭಾಗಶಃ ಪಡೆದು ಕೊಳ್ಳಬೇಕಾಗಿರುವ [1][ಸಾಲದಿಂದ ಸೃಜಿಸಲಾದ ಕೃಷಿ ಯಂತ್ರಗಳು ಅಥವಾ ಇತರ ಆಸ್ತಿಗಳ][1] ಭಾಗಶಃ ಅಡಮಾನ ಅಥವಾ ಒತ್ತೆ; ಅಥವಾ

[4][(ಸಿಸಿ) ಸದಸ್ಯರು ಮಾಲಿಕತ್ವ ಹೊಂದಿರುವ ಜಮೀನುಗಳ ಮೇಲೆ ಅಥವಾ ಅಂಥ ಸದಸ್ಯರು ಗೇಣಿದಾರರಾಗಿ ಹೊಂದಿರುವ ಜಮೀನಿನಲ್ಲಿನ ಹಿತಾಸಕ್ತಿಯ ಮೇಲೆ, 33ನೇ ಪ್ರಕರಣದ ಮೇರೆಗೆ, ಈಗಾಗಲೇ ಸೃಜಿಸಲಾದ ಋಣಭಾರಗಳ ಮೇಲೆ ಭಾಗಶಃ ಮತ್ತು ಸೃಜಿಸಬೇಕಾದ ಋಣಭಾರಗಳ ಮೇಲೆ ಭಾಗಶಃ;][4]

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
5. 1976ರ ಅಧಿನಿಯಮ ಸಂಖ್ಯೆ 71ರ ಮೂಲಕ 3.11.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಡಿ) ಡಿಬೆಂಚರುಗಳ ಪೂರ್ಣ ತೀರಿಕೆಯ ದಿನಾಂಕದವರೆಗೆ ಡಿಬೆಂಚರುಗಳ [1][ಅಥವಾ ಸಾಲಗಳ][1] ಅಸಲು ಮತ್ತು ಅವುಗಳ ಮೇಲಿನ ಬಡ್ಡಿಯ ಪೂರ್ಣ ಮೊಬಲಗಿಗೆ ಖಾತರಿ ನೀಡುವ ರಾಜ್ಯಸರ್ಕಾರದ ಖಾತರಿ; ಅಥವಾ

(ಇ) ಪಡೆದ ಅಥವಾ ಪಡೆದುಕೊಳ್ಳಬೇಕಾಗಿರುವ ಅಡಮಾನಗಳ ಮೇಲೆ ಭಾಗಶಃ ಮತ್ತು ಡಿಬೆಂಚರುಗಳು [1][ಅಥವಾ ಸಾಲಗಳ][1] ಪೂರ್ಣ ತೀರಿಕೆಯವರೆಗೆ ಅಸಲು ಮತ್ತು ಬಡ್ಡಿಗೆ ಸರ್ಕಾರ ನೀಡಿದ ಖಾತರಿಯ ಮೇಲೆ ಭಾಗಶಃ; ಮತ್ತು

(ಎಫ್) [2][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳ][2] ಸ್ವತ್ತುಗಳು ಮತ್ತು ಇತರ ಆಸ್ತಿಗಳು

- ಇವುಗಳ ಭದ್ರತೆಯ ಮೇಲೆ ಪಡೆದುಕೊಳ್ಳಬಹುದು.][5]

(2) ಪ್ರತಿಯೊಂದು ಡಿಬೆಂಚರು ಅದು ವಿಮೋಚನೀಯವಾಗತಕ್ಕ ಅವಧಿಯನ್ನು ನೀಡಿಕೆಯ ದಿನಾಂಕದಿಂದ ಮೂವತ್ತು ವರ್ಷಗಳಿಗೆ ಮೀರದ ಅವಧಿಯನ್ನು ನಿಗದಿಗೊಳಿಸುವ, ಅಥವಾ ಅಂಥ ಡಿಬೆಂಚರಿಗೆ ನಿಗದಿಪಡಿಸಿದ ದಿನಾಂಕಕ್ಕೆ ಮುಂಚಿತವಾಗಿ ಯಾವುದೇ ಕಾಲಕ್ಕೆ ಅದನ್ನು ವಿಮೋಚನೆಗೊಳಿಸುವ ಹಕ್ಕನ್ನು ಸಮಿತಿಯಲ್ಲಿ ಕಾದಿರಿಸುವ ನಿಬಂಧನೆಯನ್ನು ಒಳಗೊಂಡಿರಬಹುದು.

(3) [2][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][2] ಹೊರಡಿಸಿದ ಡಿಬೆಂಚರುಗಳ [1][ಅಥವಾ ತೆಗೆದುಕೊಂಡ ಸಾಲಗಳ][1] ಮೇಲೆ ಬಾಕಿ ಇರುವ ಮತ್ತು ಯಾವುದೇ ಕಾಲಕ್ಕೆ ಬಾಕಿ ಉಳಿದಿರುವ ಒಟ್ಟು ಮೊಬಲಗು,-

(ಎ) ಡಿಬೆಂಚರುಗಳನ್ನು ನೀಡಿರುವ [2][ಅಥವಾ ಭೂಮಿಯ ಅಡಮಾನವನ್ನು ಅಥವಾ ಭಾರವನ್ನು ಆಧರಿಸಿ ಅಥವಾ ಪಡೆದ ಸಾಲಗಳಿಂದ ಸೃಜಿಸಿದ ಕೃಷಿ ಯಂತ್ರಗಳು ಅಥವಾ ಇತರ ಆಸ್ತಿಗಳ ಒತ್ತೆಯನ್ನು ಆಧರಿಸಿ ಸಾಲಗಳನ್ನು ತೆಗೆದುಕೊಂಡಿರುವಲ್ಲಿ][2]-

(i) ಅಡಮಾನಗಳ ಮೇಲೆ ಬಾಕಿ ಇರುವ ಮೊಬಲಗುಗಳು;

(ii) ಪ್ರಾಥಮಿಕ [2][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು][2] 85ನೇ ಪ್ರಕರಣದ ಮೇರೆಗೆ [2][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][2] ವರ್ಗಾಯಿಸಿದ ಅಥವಾ ವರ್ಗಾಯಿಸಿರುವುದಾಗಿ ಭಾವಿಸಲಾದ ಮತ್ತು ಅಂಥ ಕಾಲದಲ್ಲಿ ಅಸ್ತಿತ್ವದಲ್ಲಿರುವ ಸ್ವತ್ತುಗಳು ಮತ್ತು ಇತರ ಆಸ್ತಿಗಳ ಮೌಲ್ಯ; ಮತ್ತು

(iii) ಮೇಲೆ ಹೇಳಿದ ಅಡಮಾನಗಳ ಮೇರೆಗೆ ಸಂದಾಯ ಮಾಡಿದ ಮೊಬಲಗುಗಳು ಮತ್ತು ಆ ಕಾಲಕ್ಕೆ [2][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][2] ಅಥವಾ ನ್ಯಾಸಧಾರಿಯ ಕೈಯಲ್ಲಿ ಉಳಿದಿರುವ ಆಧಾರರಹಿತ ಮೊಬಲಗುಗಳು ಇವುಗಳ ಒಟ್ಟು ಮೊತ್ತವನ್ನು;

(ಬಿ) ಡಿಬೆಂಚರುಗಳನ್ನು ಹೊರಡಿಸಿರುವಲ್ಲಿ ಅಥವಾ ಧಾರಣ ಮಾಡಿದ ಅಡಮಾನಗಳ ಮೇಲಲ್ಲದೆ [1][ಸಾಲಗಳನ್ನು ತೆಗೆದುಕೊಂಡಿರುವಲ್ಲಿ][1], (ಎ) ಖಂಡದ ಮೇರೆಗೆ ಲೆಕ್ಕ ಹಾಕಿದ ಒಟ್ಟು ಮೊಬಲಗು ಡಿಬೆಂಚರುಗಳ ಮೇಲೆ ಪಡೆದ ಮೊಬಲಗಿನ ಪೈಕಿ ಅಡಮಾನಕ್ಕೆ ಒಳಪಡದಿರುವ ಭಾಗದಷ್ಟನ್ನು ಸೇರಿಸಿ ಅಧಿಕಗೊಳಿಸಿದ ಮೊಬಲಗು

- ಇವುಗಳನ್ನು ಮೀರತಕ್ಕುದಲ್ಲ.][3]

**80. ಕೆಲವೊಂದು ಸ್ವತ್ತುಗಳ ಮೇಲೆ ಡಿಬೆಂಚರು ಧಾರಕರ ಭಾರ:-** ಡಿಬೆಂಚರು ಧಾರಕನು-

(ಎ) 79ನೇ ಪ್ರಕರಣದ (8)ನೇ ಉಪಪ್ರಕರಣದ (ಎ) ಖಂಡದಲ್ಲಿ ಉಲ್ಲೇಖಿಸಲಾಗಿರುವಂಥ ಎಲ್ಲ ಅಡಮಾನಗಳು ಮತ್ತು ಆಸ್ತಿಗಳು;

(ಬಿ) ಅಂಥ ಅಡಮಾನಗಳ ಮೇರೆಗೆ ಸಂದಾಯಮಾಡಲಾದ ಮತ್ತು ಮಂಡಲಿಯ ಅಥವಾ ನ್ಯಾಸಧಾರಿಯ ಕೈಯಲ್ಲಿ ಉಳಿದಿರುವ ಮೊಬಲಗು; ಮತ್ತು

(ಸಿ) [2][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][2] ಇತರ ಸ್ವತ್ತುಗಳು

- ಇವುಗಳ ಮೇಲೆ ಹಾಲಿ ಭಾರವನ್ನು ಹೊಂದಿರತಕ್ಕುದು.

**81. ಡಿಬೆಂಚರುಗಳ ಅಸಲು ಮತ್ತು ಅದರ ಮೇಲಣ ಬಡ್ಡಿಗೆ ರಾಜ್ಯಸರ್ಕಾರದ ಖಾತರಿ:-**

(1) 79ನೇ ಪ್ರಕರಣದ ಮೇರೆಗೆ ಹೊರಡಿಸಲಾದ ಡಿಬೆಂಚರುಗಳ ಅಸಲು ಮತ್ತು ಅವುಗಳ ಮೇಲಿನ ಬಡ್ಡಿಯು, ರಾಜ್ಯ ಸರ್ಕಾರವು ನಿಗದಿಪಡಿಸಬಹುದಾದಂಥ ಗರಿಷ್ಠ ಮೊಬಲಗಿನ ಸಂಬಂಧದಲ್ಲಿ ಮತ್ತು ಅದು ವಿಧಿಸುವುದು ಸೂಕ್ತವೆಂದು ಭಾವಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ರಾಜ್ಯ ಸರ್ಕಾರದ ಖಾತರಿಯನ್ನು ಹೊಂದಿರತಕ್ಕುದು.

---

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ರಾಜ್ಯ ಸರ್ಕಾರವು, ರಾಜ್ಯ ವಿಧಾನಮಂಡಲದ ಯಾವುದೇ ಕಾನೂನಿಗೆ ಒಳಪಟ್ಟು (1)ನೇ ಉಪಪ್ರಕರಣದ ಮೇರೆಗೆ ಕೊಡಲಾದ ಯಾವುದೇ ಖಾತರಿಯ ಗರಿಷ್ಠ ಮೊಬಲಗನ್ನು ಹೆಚ್ಚಿಸಬಹುದು.

(3) ರಾಜ್ಯಸರ್ಕಾರವು ಮಂಡಲಿಯೊಡನೆ ಮತ್ತು ನ್ಯಾಸಧಾರಿಯೊಡನೆ ಸಮಾಲೋಚಿಸಿದ ತರುವಾಯ -

(ಎ) ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ; ಮತ್ತು

(ಬಿ) ರಾಜ್ಯದಲ್ಲಿ ಮತ್ತು ಭಾರತದ ಇತರ ರಾಜ್ಯಗಳಲ್ಲಿ ಇರುವ ಮುಖ್ಯ ವೃತ್ತಪತ್ರಿಕೆಗಳ ಪೈಕಿ ರಾಜ್ಯಸರ್ಕಾರವು ಈ ಸಂಬಂಧದಲ್ಲಿ ಆಯ್ಕೆ ಮಾಡಬಹುದಾದಂಥ ವೃತ್ತ ಪತ್ರಿಕೆಗಳಲ್ಲಿ ಹದಿನಾಲ್ಕು ದಿವಸಗಳಿಗೆ ಕಡಿಮೆಯಿಲ್ಲದಷ್ಟು ನೋಟೀಸು ಕೊಟ್ಟು

- ರಾಜಪತ್ರದಲ್ಲಿ ಅಧಿಸೂಚನೆಯ ಪ್ರಕಟಣೆಯ ದಿನಾಂಕದಿಂದ ಆರು ತಿಂಗಳಿಗಿಂತ ಮುಂಚಿತವಾಗಿಲ್ಲದಂಥ ನಿರ್ದಿಷ್ಟ ದಿನಾಂಕದಿಂದ ಜಾರಿಗೆ ಬರುವಂತೆ ತಾನು ಕೊಟ್ಟಂಥ ಯಾವುದೇ ಖಾತರಿಯನ್ನು ನಿಲ್ಲಿಸಬಹುದು ಅಥವಾ ಅದರ ಗರಿಷ್ಠ ಮೊಬಲಗನ್ನು ಮಿತಗೊಳಿಸಬಹುದು ಅಥವಾ ಯಾವ ಷರತ್ತುಗಳಿಗೊಳಪಟ್ಟು ಅದನ್ನು ನೀಡಲಾಗಿದೆಯೋ ಅವುಗಳನ್ನು ಮಾರ್ಪಡಿಸಬಹುದು:

ಪರಂತು, ಈ ಉಪಪ್ರಕರಣದ ಮೇರೆಗಿನ ಯಾವುದೇ ಖಾತರಿಯನ್ನು ಹಿಂತೆಗೆದುಕೊಳ್ಳುವುದು, ಮಿತಗೊಳಿಸುವುದು ಅಥವಾ ಮಾರ್ಪಡಿಸುವುದು ಹಾಗೆ ಹಿಂತೆಗೆದುಕೊಂಡ, ಮಿತಗೊಳಿಸಿದ ಅಥವಾ ಮಾರ್ಪಡಿಸಿದ ದಿನಾಂಕಕ್ಕೆ ಮುಂಚೆ ಹೊರಡಿಸಿದ ಯಾವುದೇ ಡಿಬೆಂಚರುಗಳು ಹೊಂದಿದ್ದ ಖಾತರಿಗೆ ಯಾವುದೇ ರೀತಿಯಲ್ಲಿ ಬಾಧಕವಾಗತಕ್ಕುದಲ್ಲ.

(4) (3)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಪ್ರತಿಯೊಂದು ಅಧಿಸೂಚನೆ ಮತ್ತು ನೋಟೀಸು, ಖಾತರಿಯ ಗರಿಷ್ಠ ಮೊಬಲಗನ್ನು ಮಿತಗೊಳಿಸಬೇಕಾಗಿರುವಲ್ಲಿ, ಅಥವಾ ಯಾವಷರತ್ತುಗಳಿಗೊಳಪಟ್ಟು ಖಾತರಿಯನ್ನು ಕೊಡಲಾಗಿತ್ತೋ ಅವುಗಳನ್ನು ಮಾರ್ಪಡಿಸಬೇಕಾಗಿರುವಲ್ಲಿ, ಸಂದರ್ಭಾನುಸಾರ, ಮಿತಗೊಳಿಸುವ ಅಥವಾ ಮಾರ್ಪಾಡುಗೊಳಿಸುವ ವ್ಯಾಪ್ತಿಯನ್ನು ಮತ್ತು ಪರಿಣಾಮವನ್ನು ಖಚಿತವಾಗಿ ನಿರೂಪಿಸತಕ್ಕುದು.

**82. ರಾಜ್ಯಸರ್ಕಾರದಿಂದ ಇತರ ಖಾತರಿಗಳು:-** (1) ರಾಜ್ಯ ಸರ್ಕಾರವು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ, ಭೂ ಅಭಿವೃದ್ಧಿಗಾಗಿ [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1]ಅಥವಾ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು][1] ಸದಸ್ಯರಿಗೆ, ಅವರು ರಾಜ್ಯ ಸರ್ಕಾರದಿಂದ ಅನುಮೋದಿತವಾದ ಮೌಲ್ಯ ನಿರ್ಧರಣಾ ತತ್ವಗಳಿಗನುಸಾರವಾಗಿ ನಿರ್ಧಾರಿತವಾದ ಭೂಮಿಗಳ ಮೌಲ್ಯವನ್ನು ಆಧರಿಸಿ ಹಕ್ಕು ಹೊಂದಿರಬಹುದಾದಂಥ ಸಾಲಗಳಿಗೆ ಹೆಚ್ಚುವರಿಯಾಗಿ, ಅಂಥ ಹೆಚ್ಚುವರಿಯು ಅಂಥ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಮಿತಿಗಳಿಗೆ ಮೀರದಂತೆ ಸಾಲಗಳನ್ನು ನೀಡಲು ಅಧಿಕಾರ ನೀಡಬಹುದು.

(2) (1)ನೇ ಉಪಪ್ರಕರಣದ ಮೇರೆಗೆ ನೀಡಲಾದ ಸಾಲಗಳ ಸಂಬಂಧದಲ್ಲಿ ರಾಜ್ಯಸರ್ಕಾರವು, ಆ ಸದಸ್ಯರಿಗೆ ನೀಡಲಾದ ಹೆಚ್ಚುವರಿಯ ಮಟ್ಟಿಗೆ ಸಾಲದ ಮರು ಸಂದಾಯಕ್ಕೆ ನಿರ್ದಿಷ್ಟ ಅವಧಿಯ ಖಾತರಿಯನ್ನು ಕೊಡಬಹುದು.

[2][**82ಎ. ಸಾಲಗಳನ್ನು ನೀಡಲು ಮತ್ತು ಭೂಮಿಗಳನ್ನು ಧಾರಣಮಾಡಲು ಭೂ ಅಭಿವೃದ್ಧಿ ಬ್ಯಾಂಕುಗಳ ಅಧಿಕಾರಗಳು:-** ಈ ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳ ಉಪಬಂಧಗಳಿಗೆ ಒಳಪಟ್ಟು, 76ಎ - ಪ್ರಕರಣದಲ್ಲಿ ಉಲ್ಲೇಖಿಸಲಾದ ಉದ್ದೇಶಗಳಿಗಾಗಿ ಸಾಲಗಳನ್ನು ನೀಡಲು ಮತ್ತು ಈ ಅಧ್ಯಾಯದ ಉಪಬಂಧಗಳ ಮೇರೆಗೆ ಅವುಗಳಿಗೆ ಸ್ವಾಧೀನವನ್ನು ವರ್ಗಾಯಿಸಲಾದ ಭೂಮಿಗಳನ್ನು ಧಾರಣ ಮಾಡಲು [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು][1] ಸಕ್ಷಮವಾಗಿರತಕ್ಕುದು.

**82ಬಿ. ಸಾಲಗಳ ಅರ್ಜಿಗಳನ್ನು ವ್ಯವಹರಿಸುವ ವಿಧಾನ:-** (1) 76ಎ ಪ್ರಕರಣದಲ್ಲಿ ನಮೂದಿಸಿದ ಉದ್ದೇಶಗಳಲ್ಲಿ ಯಾವೊಂದಕ್ಕಾಗಿ ಸಾಲಕ್ಕೆ ಅರ್ಜಿಯನ್ನು ಸಲ್ಲಿಸಿರುವಲ್ಲಿ ನಿಯಮಿಸಿದ ರೀತಿಯಲ್ಲಿ ಅರ್ಜಿಯ ಬಗ್ಗೆ ಸಾರ್ವಜನಿಕ ನೋಟೀಸು ಕೊಡುತ್ತಾ ಅದರಲ್ಲಿ ನಿಗದಿಪಡಿಸಿದ ಸಮಯ ಮತ್ತು ಸ್ಥಳದಲ್ಲಿ ಆ ಸಾಲ ನೀಡಿಕೆಗೆ ಆಕ್ಷೇಪಣೆಗಳು ಯಾವುದಾದರೂ ಇದ್ದರೆ, ಅವುಗಳನ್ನು ಸಾದರಪಡಿಸಲು ಆಸಕ್ತಿಯುಳ್ಳ ವ್ಯಕ್ತಿಗಳಿಗೆ ಕರೆ ನೀಡಬಹುದು. ರಾಜ್ಯಸರ್ಕಾರವು, ಕಾಲಕಾಲಕ್ಕೆ ಅಂಥ ಸಾರ್ವಜನಿಕ ನೋಟೀಸನ್ನು ಹೊರಡಿಸತಕ್ಕ ವ್ಯಕ್ತಿಗಳು ಮತ್ತು ಆಕ್ಷೇಪಣೆಗಳನ್ನು ಸುನಾವಣೆ ಮಾಡಿ ವಿಲೆ ಮಾಡತಕ್ಕ ರೀತಿ ಇವುಗಳನ್ನು ನಿಯಮಿಸಬಹುದು.

(2) ನಿಯಮಿಸಲಾದ ಅಧಿಕಾರಿಯು, (1)ನೇ ಉಪಪ್ರಕರಣದ ಮೇರೆಗೆ ಸಲ್ಲಿಸಲಾದ ಪ್ರತಿಯೊಂದು ಆಕ್ಷೇಪಣೆಯನ್ನು ಪರ್ಯಾಲೋಚಿಸತಕ್ಕುದು ಮತ್ತು ಅದನ್ನು ಎತ್ತಿ ಹಿಡಿಯುವ ಅಥವಾ ತಳ್ಳಿಹಾಕುವ ಲಿಖಿತ ಆದೇಶವನ್ನು ಮಾಡತಕ್ಕುದು:

ಪರಂತು, ಆಕ್ಷೇಪಣೆಯಲ್ಲಿ ಎತ್ತಿದ ಪ್ರಶ್ನೆಯು ಸಿವಿಲ್ ನ್ಯಾಯಾಲಯದ ಹೊರತು ತೃಪ್ತಿಕರವಾಗಿ ತೀರ್ಮಾನಿಸಲಾಗದ ಸ್ವರೂಪದ ಪ್ರಶ್ನೆಯಾಗಿದೆ ಎಂದು ಅಧಿಕಾರಿಯು ಅಭಿಪ್ರಾಯಪಟ್ಟರೆ, ಅವನು ಆ ಪ್ರಶ್ನೆಯನ್ನು ತೀರ್ಮಾನಿಸುವವರೆಗೆ ಆ ಅರ್ಜಿಯ ಮೇಲಣ ವ್ಯವಹರಣೆಗಳನ್ನು ಮುಂದಕ್ಕೆ ಹಾಕತಕ್ಕುದು.

---

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(3) ನಿಯಮಿಸಲಾದ ರೀತಿಯಲ್ಲಿ ಪ್ರಕಟಿಸಲಾದ (1)ನೇ ಉಪಪ್ರಕರಣದ ಮೇರೆಗಿನ ನೋಟೀಸನ್ನು, ಈ ಅಧಿನಿಯಮದ ಉದ್ದೇಶಕ್ಕಾಗಿ ಸುಧಾರಿಸಬೇಕಾದ ಅಥವಾ ಸಾಲದ ಸಲುವಾಗಿನ ಭದ್ರತೆಯಾಗಿ ಒದಗಿಸಿದ ಭೂಮಿಯಲ್ಲಿ ಹಿತಾಸಕ್ತಿಯುಳ್ಳ ಅಥವಾ ಹಿತಾಸಕ್ತಿಯನ್ನು ಕ್ಲೇಮು ಮಾಡುವ ಎಲ್ಲಾ ವ್ಯಕ್ತಿಗಳಿಗೆ ನೀಡಲಾದ ಯುಕ್ತ ನೋಟೀಸು ಎಂದು ಭಾವಿಸತಕ್ಕುದು.

(4) ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು][1], ಈ ಅಧ್ಯಾಯದ ಮೇರೆಗೆ ಸಾಲಗಳನ್ನು ನೀಡುವ ಉದ್ದೇಶಕ್ಕಾಗಿ ಯುಕ್ತ ವಿಚಾರಣೆಯ ತರುವಾಯ ಅಂಥ ಅರ್ಜಿಯನ್ನು ಪರ್ಯಾಲೋಚಿಸತಕ್ಕುದು.

**82ಸಿ. ಸಾಲ ಮಂಜೂರು ಮಾಡಿದ ಆದೇಶವು ಕೆಲವು ವಿಷಯಗಳಲ್ಲಿ ನಿರ್ಣಾಯಕವಾಗಿರುವುದು:-** [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ದಿ ಬ್ಯಾಂಕು][1] ಅಥವಾ 76ಎ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಎಲ್ಲಾ ಅಥವಾ ಅವುಗಳಲ್ಲಿ ಯಾವೊಂದು ಉದ್ದೇಶಕ್ಕಾಗಿ ಬ್ಯಾಂಕಿನ ಉಪವಿಧಿಗಳ ಮೇರೆಗೆ ಅಧಿಕೃತರಾದ ವ್ಯಕ್ತಿಗಳು ಅಥವಾ ಸಮಿತಿಗಳು [2][ಕರ್ನಾಟಕ][2] ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 1964 ಇದರ ಪ್ರಾರಂಭಕ್ಕೆ ಮುಂಚೆ ಅಥವಾ ಆ ತರುವಾಯ ಲಿಖಿತ ಆದೇಶದಲ್ಲಿ ನಮೂದಿಸಿದ ವ್ಯಕ್ತಿಗೆ ಅಥವಾ ಅವನ ಸಮ್ಮತಿಯಿಂದ ಸಾಲವನ್ನು ಭೂಮಿಯ ಪ್ರಯೋಜನಕ್ಕಾಗಿ ಅಥವಾ ಅದರಲ್ಲಿ ನಿರ್ದಿಷ್ಟಪಡಿಸಿದ ಉತ್ಪಾದನಾ ಉದ್ದೇಶಕ್ಕಾಗಿ ಅದರಲ್ಲಿ ನಿದಿಷ್ಟಪಡಿಸಿದ ಕಾಮಗಾರಿಯನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ ಸಾಲವನ್ನು ನೀಡುವ ಲಿಖಿತ ಆದೇಶವು ಈ ಅಧಿನಿಯಮದ ಉದ್ದೇಶಗಳಿಗಾಗಿ ಈ ಕೆಳಕಂಡ ವಿಷಯಗಳ ಬಗ್ಗೆ ನಿರ್ಣಾಯಕವಾಗಿರತಕ್ಕುದು, ಎಂದರೆ:-

(ಎ) ವಿವರಿಸಲಾದ ಕಾಮಗಾರಿ ಅಥವಾ ಯಾವ ಉದ್ದೇಶಕ್ಕಾಗಿ ಸಾಲವನ್ನು ನೀಡಲಾಗಿದೆಯೋ ಆ ಉದ್ದೇಶವು 76ಎ ಪ್ರಕರಣದ ಅರ್ಥದಲ್ಲಿ, ಸಂದರ್ಭಾನುಸಾರ, ಒಂದು ಸುಧಾರಣೆ ಅಥವಾ ಉತ್ಪಾದಕ ಉದ್ದೇಶವಾಗಿರುವುದು;

(ಬಿ) ಸಂದರ್ಭಾನುಸಾರ, ಅಂಥ ಸುಧಾರಣೆ ಮಾಡಲು ಅಥವಾ ಉತ್ಪಾದಕ ಉದ್ದೇಶಕ್ಕಾಗಿ ವೆಚ್ಚಗಳನ್ನು ವಹಿಸಲು ಆ ವ್ಯಕ್ತಿಯು ಆ ಆದೇಶದ ದಿನಾಂಕದಂದು ಹಕ್ಕು ಹೊಂದಿದ್ದನು; ಮತ್ತು

(ಸಿ) ಆ ಸುಧಾರಣೆಯು ನಿರ್ದಿಷ್ಟಪಡಿಸಿದ ಭೂಮಿಗೆ ಪ್ರಯೋಜನ ಒದಗಿಸುವ ಸುಧಾರಣೆಯಾಗಿರುವುದು ಮತ್ತು ಉತ್ಪಾದಕ ಉದ್ದೇಶವು ಆಧಾರವಾಗಿ ಒದಗಿಸಿದ ಭೂಮಿಗೆ ಅಥವಾ ಸುಸಂಗತವಾಗುವಂತೆ ಅದರ ಯಾವುದೇ ಭಾಗಕ್ಕೆ ಸಂಬಂಧಿಸಿರುವುದು.][2]

**83. ಕೆಲವು ಕ್ಲೇಮುಗಳ ಮೇಲೆ ಅಡಮಾನದ ಆದ್ಯತೆ:-** [3][(1)][3] [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಹೆಸರಿಗೆ ಬರೆದುಕೊಟ್ಟ ಅಡಮಾನವು, ಆ ಅಡಮಾನವನ್ನು ಬರೆದುಕೊಟ್ಟ ತರುವಾಯ, [4][ಕರ್ನಾಟಕ ಭೂ ಸುಧಾರಣೆ ಸಾಲಗಳ ಅಧಿನಿಯಮ,1963 (1963ರ ಕರ್ನಾಟಕ ಅಧಿನಿಯಮ 16) ಅಥವಾ ಕರ್ನಾಟಕ ಕೃಷಿಕರ ಸಾಲ ಅಧಿನಿಯಮ, 1963 (1963ರ ಕರ್ನಾಟಕ ಅಧಿನಿಯಮ 17)][4]ರ ಮೇರೆಗೆ ನೀಡಲಾದ ಸಾಲದಿಂದ ಉದ್ಭವಿಸುವ ಸರ್ಕಾರದ ಯಾವುದೇ ಕ್ಲೇಮಿನ ಮೇಲೆ ಆದ್ಯತೆ ಹೊಂದಿರತಕ್ಕುದು.

[5][(2) ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ರಲ್ಲಿ ಏನೇ ಇದ್ದರೂ, [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಹೆಸರಿಗೆ ಬರೆದುಕೊಟ್ಟ ಅಡಮಾನವು ಗೇಣಿದಾರ ಖರೀದಿದಾರ ಅಥವಾ ಗೇಣಿದಾರನು ಹಿತಾಸಕ್ತಿ ಹೊಂದಿರುವ ಭೂಮಿಗೆ ಸಂಬಂಧಪಟ್ಟಿರುವಲ್ಲಿ ಆ ಅಡಮಾನವು ಅಂಥ ಹಿತಾಸಕ್ತಿಯ ಭದ್ರತೆಯನ್ನು ಆಧರಿಸಿರಬಹುದು ಮತ್ತು ಅಡಮಾನ ಪಡೆದವನ ಹಕ್ಕುಗಳು ಗೇಣಿದಾರ ಖರೀದಿದಾರ ಅಥವಾ ಗೇಣಿದಾರನು ಸದರಿ ಅಧಿನಿಯಮದ ಅಗತ್ಯತೆಗಳನ್ನು ಪಾಲಿಸಲು ತಪ್ಪಿದ ಕಾರಣ ಬಾಧಿತವಾಗತಕ್ಕುದಲ್ಲ ಮತ್ತು ಸದರಿ ಅಧಿನಿಯಮದ ಮೇರೆಗೆ ಮಾಡಲಾದ ಭೂಮಿಯ ಮಾರಾಟ ಮತ್ತು ಅದರಲ್ಲಿನ ಅವನ ಹಿತಾಸಕ್ತಿ ಇವು [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಮುಂಚಿನ ಭಾರಕ್ಕೆ ಒಳಪಟ್ಟಿರತಕ್ಕುದು.][5]

**84. ಅಡಮಾನ ಮಾಡಲಾದ ಸ್ವತ್ತನ್ನು ಖರೀದಿಸಲು [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಅಥವಾ [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಹಕ್ಕು:-** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಅಥವಾ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಈ ಅಧ್ಯಾಯದ ಮೇರೆಗೆ ಮಾರಾಟ ಮಾಡಿದ ಯಾವುದೇ ಅಡಮಾನ ಸ್ವತ್ತನ್ನು ಖರೀದಿಸುವುದು ಕಾನೂನು ಸಮ್ಮತವಾಗಿರತಕ್ಕುದು ಮತ್ತು ಹಾಗೆ ಖರೀದಿಸಿದ ಸ್ವತ್ತನ್ನು ಅಂಥ ಬ್ಯಾಂಕು ನ್ಯಾಸಧಾರಿಯು ನಿಗದಿಪಡಿಸಬಹುದಾದಂಥ ಅವಧಿಯೊಳಗೆ ಮಾರಾಟದ ಮೂಲಕ ವಿಲೇ ಮಾಡತಕ್ಕುದು.

(2) ಕೃಷಿ ಹಿಡುವಳಿಯ ಗರಿಷ್ಠ ಮಿತಿಯನ್ನು ನಿಗದಿಪಡಿಸುವ ಯಾವುದೇ ಕಾನೂನಿನಲ್ಲಿ ಇರುವುದು ಯಾವುದೂ, (1)ನೇ ಉಪಪ್ರಕರಣದ ಮೇರೆಗೆ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಅಥವಾ [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಮಾಡಿದ ಭೂ ಆರ್ಜನೆಗೆ ಅನ್ವಯವಾಗತಕ್ಕುದಲ್ಲ.

**85. [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಹೆಸರಿಗೆ ಬರೆದುಕೊಟ್ಟ ಅಡಮಾನಗಳು [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನಲ್ಲಿ][1] ನಿಹಿತವಾಗಿರುವುದು:-** [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಹೆಸರಿಗೆ, ಅದರ

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
3. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಮರು ಸಂಖ್ಯೆನೀಡಲಾಗಿದೆ.
4. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
5. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಸದಸ್ಯರು ಬರೆದುಕೊಟ್ಟ ಅಡಮಾನಗಳು ಮತ್ತು ವರ್ಗಾಯಿಸಿದ ಎಲ್ಲಾ ಇತರ ಆಸ್ತಿಗಳನ್ನು ಹಾಗೆ ಬರೆದುಕೊಟ್ಟ ಅಥವಾ ವರ್ಗಾಯಿಸಿದ ದಿನಾಂಕದಿಂದ ಅಂಥ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನಿಂದ][1] [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][1] ವರ್ಗಾಯಿಸಿರುವುದಾಗಿ ಭಾವಿಸತಕ್ಕುದು ಮತ್ತು ನ್ಯಾಸಧಾರಿಯಲ್ಲಿ ನಿಹಿತವಾಗತಕ್ಕುದು.

[2][**85ಎ. [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಹೆಸರಿಗೆ ಅಡಮಾನ ಅಥವಾ ಗುತ್ತಿಗೆಯ ನೋಂದಣಿ:-** ಭಾರತ ನೋಂದಣಿ ಅಧಿನಿಯಮ, 1908ರಲ್ಲಿ ಏನೇ ಇದ್ದರೂ, [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳ][1] ಹೆಸರಿಗೆ ಬರೆದುಕೊಟ್ಟ ಅಡಮಾನಗಳನ್ನು ಅಥವಾ ಗುತ್ತಿಗೆಗಳನ್ನು ನೋಂದಾಯಿಸುವುದು ಅವಶ್ಯವಾಗತಕ್ಕುದಲ್ಲ: ಪರಂತು, ಸಂಬಂಧಪಟ್ಟ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಯಾವ ಲಿಖಿತದ ಮೂಲಕ ಸ್ಥಿರ ಸ್ವತ್ತನ್ನು ಅಡಮಾನ ಮಾಡಲಾಯಿತೋ ಅಥವಾ ಗುತ್ತಿಗೆಗೆ ಕೊಡಲಾಯಿತೋ ಅದರ ಒಂದು ಪ್ರತಿಯನ್ನು, ಅಡಮಾನ ಮಾಡಲಾದ ಅಥವಾ ಸಂದರ್ಭಾನುಸಾರ ಗುತ್ತಿಗೆಗೆ ಕೊಡಲಾದ ಆ ಇಡೀ ಸ್ವತ್ತು ಅಥವಾ ಅದರ ಯಾವುದೇ ಭಾಗವು ಯಾವ ನೋಂದಣಿ ಅಧಿಕಾರಿಯ ಸ್ಥಳೀಯ ಪರಿಮಿತಿಗಳಲ್ಲಿ ಇರುವುದೋ ಆ ನೋಂದಣಿ ಅಧಿಕಾರಿಗೆ, ನಿಯಮಿಸಬಹುದಾದಂಥ ಸಮಯದೊಳಗೆ ಮತ್ತು ಅಂಥ ರೀತಿಯಲ್ಲಿ ಕಳುಹಿಸಬೇಕು ಮತ್ತು ಅಂಥ ನೋಂದಣಿ ಅಧಿಕಾರಿಯು ಸಂದರ್ಭಾನುಸಾರ ಆ ಪ್ರತಿಯನ್ನು ಅಥವಾ ಪ್ರತಿಗಳನ್ನು ಭಾರತ ನೋಂದಣಿ ಅಧಿನಿಯಮ, 1908ರ 51ನೇ ಪ್ರಕರಣದ ಮೇರೆಗೆ ನಿಯಮಿಸಲಾದ ತನ್ನ ಪುಸ್ತಕ ಸಂಖ್ಯೆ 1ರಲ್ಲಿ ದಾಖಲು ಮಾಡತಕ್ಕುದು.][2]

**86. ಹಣಗಳನ್ನು ಸ್ವೀಕರಿಸಲು ಮತ್ತು ವಿಮೋಚನೆ ನೀಡಲು [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಅಧಿಕಾರ:-** [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಹೆಸರಿಗೆ ಬರೆದುಕೊಟ್ಟ ಅಡಮಾನವನ್ನು [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][1] 85ನೇ ಪ್ರಕರಣದ ಉಪಬಂಧಗಳ ಮೇರೆಗೆ ವರ್ಗಾಯಿಸಲಾಗಿದ್ದರೂ ಅಥವಾ ವರ್ಗಾಯಿಸಲಾಗಿದೆಯೆಂದು ಭಾವಿಸಲಾಗಿದ್ದರೂ,-

(ಎ) ಅಡಮಾನದ ಮೇರೆಗೆ ಬಾಕಿ ಇರುವ ಎಲ್ಲಾ ಹಣಗಳು ಮಂಡಲಿ ಅಥವಾ ನ್ಯಾಸಧಾರಿಯು ತದ್ವಿರುದ್ಧವಾಗಿ ಹೊರಡಿಸಿದ ಮತ್ತು ಅಡಮಾನದಾರನಿಗೆ ತಿಳಿಸಿದ ಯಾವುದೇ ನಿರ್ದಿಷ್ಟ ನಿರ್ದೇಶನವಿಲ್ಲದಿದ್ದರೂ, [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][1] ಸಂದಾಯವಾಗತಕ್ಕುದು ಮತ್ತು ಅಂಥ ಸಂದಾಯವು ಅಡಮಾನವನ್ನು ಹಾಗೆ ವರ್ಗಾಯಿಸಿರದಿದ್ದರೆ ಹೇಗೋ ಹಾಗೆ ಸಿಂಧುವಾಗಿರತಕ್ಕುದು; ಮತ್ತು

(ಬಿ) [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು,][1] ಮಂಡಲಿ ಅಥವಾ ನ್ಯಾಸಧಾರಿಯು ತದ್ವಿರುದ್ಧವಾಗಿ ಹೊರಡಿಸಿದ ಮತ್ತು [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][1] ತಿಳಿಸಿದ ಯಾವುದೇ ನಿರ್ದಿಷ್ಟ ನಿರ್ದೇಶನವಿಲ್ಲದಿದ್ದರೂ ಅಡಮಾನದ ಮೇರೆಗೆ ಬಾಕಿ ಇರುವ ಹಣಗಳ ವಸೂಲಿಯ ಸಲುವಾಗಿ ಅಡಮಾನವನ್ನು ಆಧರಿಸಿ ದಾವೆ ಹೂಡಲು ಅಥವಾ ಇತರ ಯಾವುವೇ ವ್ಯವಹರಣೆಗಳನ್ನು ಕೈಗೊಳ್ಳಲು ಹಕ್ಕು ಹೊಂದಿರತಕ್ಕುದು.

[2][**86ಎ. [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು]ಗಳಿಂದ ಸಾಲಗಳ ವಸೂಲಿ:-** [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು][1] ನೀಡಿದ ಎಲ್ಲಾ ಸಾಲಗಳು, ಅವುಗಳ ಮೇಲೆ ವಿಧಿಸಬಹುದಾದ ಬಡ್ಡಿಗಳು ಯಾವುದಾದರೂ ಇದ್ದರೆ ಆ ಎಲ್ಲಾ ಬಡ್ಡಿಗಳು ಮತ್ತು ಅವುಗಳನ್ನು ನೀಡುವ ಬಗ್ಗೆ ವಹಿಸಿದ ವೆಚ್ಚಗಳು ಯಾವುದಾದರೂ ಇದ್ದರೆ ಅವು ಬಾಕಿಯಾದಾಗ ಸಂಬಂಧಪಟ್ಟ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನಿಂದ][1] ವಸೂಲೀಯವಾಗತಕ್ಕುದು.][2]

**87. ಅಡಮಾನಕಾರನ ಮುಂಚಿನ ಋಣಗಳನ್ನು ಸಂದಾಯಮಾಡಲು [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಅಧಿಕಾರ:-** (1) ಅಡಮಾನಕಾರನ ಮುಂಚಿನ ಋಣಗಳ ಸಂದಾಯದ ಸಲುವಾಗಿ[1][ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಹೆಸರಿಗೆ ಅಡಮಾನವನ್ನು ಬರೆದುಕೊಟ್ಟಿರುವಲ್ಲಿ, ಆ ಬ್ಯಾಂಕು, ಸ್ವತ್ತು ವರ್ಗಾವಣೆ ಅಧಿನಿಯಮ, 1882ರ (1882ರ ಕೇಂದ್ರ ಅಧಿನಿಯಮ IV) 83 ಮತ್ತು 84ನೇ ಪ್ರಕರಣಗಳ ಉಪಬಂಧಗಳು ಏನೇ ಇದ್ದರೂ, ಲಿಖಿತ ನೋಟೀಸಿನ ಮೂಲಕ, ಅಂಥ ಯಾವುದೇ ಋಣ ಯಾರೇ ವ್ಯಕ್ತಿಗೆ ಬಾಕಿ ಇದೆಯೋ ಆ ವ್ಯಕ್ತಿಗೆ, ಆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಬಹುದಾದ ಅವಧಿಯೊಳಗೆ ಬ್ಯಾಂಕಿನಿಂದ ಅದರ ನೋಂದಾಯಿತ ಕಚೇರಿಯಲ್ಲಿ ಅಂಥ ಋಣದ ಸಂದಾಯವನ್ನು ಸ್ವೀಕರಿಸುವಂತೆ ಅಗತ್ಯಪಡಿಸಬಹುದು.

(2) ಅಂಥ ಯಾರೇ ವ್ಯಕ್ತಿಯು ಅಂಥ ನೋಟೀಸನ್ನು ಅಥವಾ ಅಂಥ ಸಂದಾಯವನ್ನು ಸ್ವೀಕರಿಸಲು ತಪ್ಪಿದರೆ, ಅಂಥ ಋಣವು ಅಥವಾ ಸಂದರ್ಭಾನುಸಾರ ಅದರ ಭಾಗವು ಆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಅವಧಿಯು ಮುಗಿದಂದಿನಿಂದ ಬಡ್ಡಿಗಳಿಸುವುದು ಕೊನೆಗೊಳ್ಳತಕ್ಕುದು:

ಪರಂತು, ಅಂಥ ಯಾವುದೇ ಋಣದ ಮೊಬಲಗಿನ ಸಂಬಂಧದಲ್ಲಿ ಯಾವೊಂದು ವಿವಾದವಿರುವಲ್ಲಿ, ಯಾವ ವ್ಯಕ್ತಿಗೆ ಅಂಥ ಋಣವು ಬಾಕಿಯಾಗಿರುವುದೋ ಆ ವ್ಯಕ್ತಿಯು, ಋಣದ ಬಗ್ಗೆ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಕೊಡಮಾಡಿದ ಮೊಬಲಗಿನ ಸಂದಾಯವನ್ನು ಸ್ವೀಕರಿಸಲು ಬದ್ಧನಾಗಿರತಕ್ಕುದು, ಆದರೆ ಅಂಥ ಸ್ವೀಕೃತಿಯು ಅಂಥ ವ್ಯಕ್ತಿಯು ಕ್ಲೇಮು ಮಾಡಿದ ಶಿಲ್ಕನ್ನು ವಸೂಲು ಮಾಡುವ ಬಗ್ಗೆ ಅವನಿಗೆ ಅಧಿಕಾರ ಯಾವುದಾದರೂ ಇದ್ದರೆ ಅದಕ್ಕೆ ಬಾಧಿತವಾಗತಕ್ಕುದಲ್ಲ.

---

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(3) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಮುಂಚಿನ ಋಣಗಳ ವಿವರಗಳನ್ನು ನಿರ್ಧರಿಸುವ ಉದ್ದೇಶಗಳಿಗಾಗಿ ರಾಜ್ಯಸರ್ಕಾರವು, ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ಈ ಬಗ್ಗೆ ಅಧಿಕೃತಗೊಳಿಸಿದ [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಅಥವಾ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಯಾರೇ ಅಧಿಕಾರಿಯು, ನಿಯಮಿಸಬಹುದಾದಂಥ ನಿರ್ಬಂಧಗಳಿಗೆ, ಪರಿಮಿತಿಗಳಿಗೆ ಮತ್ತು ಷರತ್ತುಗಳಿಗೆ ಒಳಪಟ್ಟು ಲಿಖಿತ ಆದೇಶದ ಮೂಲಕ ಮುಂಚಿನ ಋಣಗಳು ಯಾವ ವ್ಯಕ್ತಿಗೆ ಬಾಕಿ ಇರಬಹುದೋ ಆ ವ್ಯಕ್ತಿಗೆ ಅಂಥ ಋಣಗಳಿಗೆ ಸಂಬಂಧಿಸಿದ ಯಾವುದೇ ಮಾಹಿತಿಯನ್ನು ಅಥವಾ ಯಾವುದೇ ದಸ್ತಾವೇಜನ್ನು ಒದಗಿಸಲು ಅಗತ್ಯಪಡಿಸಬಹುದು ಮತ್ತು ಆ ತರುವಾಯ ಅಂಥ ವ್ಯಕ್ತಿಯು ಹಾಗೆ ಅಗತ್ಯಪಡಿಸಲಾದ ಮಾಹಿತಿಯನ್ನು ಅಥವಾ ದಸ್ತಾವೇಜನ್ನು ಒದಗಿಸತಕ್ಕುದು.

[2][**87ಎ. ಏಕತ್ರ ಹಿಂದೂ ಕುಟುಂಬದ ವ್ಯವಸ್ಥಾಪಕರು ಬರೆದುಕೊಟ್ಟ ಅಡಮಾನಗಳು:-** (1) [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಅಥವಾ [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ನೀಡುವ ಸಾಲಗಳ ಸಂಬಂಧದಲ್ಲಿ, ಕೃಷಿ ಭೂಮಿಯ ಅಥವಾ ಸಾಗುವಳಿ ಪದ್ಧತಿಗಳ ಸುಧಾರಣೆಗಾಗಿ ಅಥವಾ ಭೂಮಿಯ ಉತ್ಪಾದಕ ಸಾಮರ್ಥ್ಯವನ್ನು ಹೆಚ್ಚಿಸುವ ಇತರ ಯಾವುದೇ ಸಾಧನೆಗಳಿಗೆ ಹಣ ಒದಗಿಸುವುದಕ್ಕಾಗಿ ಅಥವಾ ಭೂಮಿಯ ಉತ್ಪಾದನೆಯನ್ನು ಹೆಚ್ಚಿಸುವ ಇತರ ಸಾಧನಗಳಿಗಾಗಿ ಅಥವಾ ಭೂಮಿಯ ಖರೀದಿಯ ಸಲುವಾಗಿ ಏಕತ್ರ ಹಿಂದೂ ಕುಟುಂಬದ ವ್ಯವಸ್ಥಾಪಕನು, [3][ಕರ್ನಾಟಕ][3] ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 1964ರ ಪ್ರಾರಂಭಕ್ಕೆ ಮುಂಚೆ ಅಥವಾ ಆ ತರುವಾಯ ಮಾಡಿದ ಅಡಮಾನಗಳಿಗೆ ತದ್ವಿರುದ್ಧವಾದ ಯಾವುದೇ ಕಾನೂನು ಇದ್ದರೂ, ಅಂಥ ಏಕತ್ರ ಕುಟುಂಬದ ಪ್ರತಿಯೊಬ್ಬ ಸದಸ್ಯನು ಬದ್ಧನಾಗಿರತಕ್ಕುದು.

(2) ಇತರ ಸಂದರ್ಭಗಳಲ್ಲಿ, [3][ಕರ್ನಾಟಕ][3] ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 1964ರ ಪ್ರಾರಂಭಕ್ಕೆ ಮುಂಚೆ ಅಥವಾ ಆ ತರುವಾಯ, [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಅಥವಾ [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಹೆಸರಿಗೆ ಬರೆದುಕೊಟ್ಟ ಅಡಮಾನವನ್ನು ಏಕತ್ರ ಹಿಂದೂ ಕುಟುಂಬದ ವ್ಯವಸ್ಥಾಪಕನು ಆ ಕುಟುಂಬದ ಸದಸ್ಯರಿಗೆ ಬಂಧನಕಾರಿಯಾಗದ ಉದ್ದೇಶಕ್ಕಾಗಿ (ಅಂಥ ಸದಸ್ಯರು ಪ್ರಾಪ್ತ ವಯಸ್ಕರಾಗಿರಲಿ ಅಥವಾ ಆಗಿಲ್ಲದಿರಲಿ) ಬರೆದುಕೊಟ್ಟಿದ್ದನೆಂಬ ಕಾರಣದ ಮೇಲೆ ಪ್ರಶ್ನಿಸಿರುವಲ್ಲಿ, ಅದನ್ನು ರುಜುವಾತುಪಡಿಸುವ ಭಾರವು, ತದ್ವಿರುದ್ಧವಾದ ಯಾವುದೇ ಕಾನೂನು ಇದ್ದರೂ, ಅದನ್ನು ಆಪಾದಿಸಿದ ಪಕ್ಷಕಾರನದಾಗಿರತಕ್ಕುದು.

**87ಬಿ. ಗುತ್ತಿಗೆಯ ಮೇಲಣ ನಿರ್ಬಂಧಗಳು:-** (1) ಸ್ವತ್ತು ವರ್ಗಾವಣೆ ಅಧಿನಿಯಮ, 1882ರಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][1] ಅಡಮಾನ ಮಾಡಿದ ಸ್ವತ್ತಿನ ಯಾರೇ ಅಡಮಾನಕಾರನು, ಬ್ಯಾಂಕಿನ ಲಿಖಿತ ಪೂರ್ವ ಸಮ್ಮತಿ ಪಡೆದ ಮತ್ತು ಬ್ಯಾಂಕು ವಿಧಿಸಬಹುದಾದಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೆ ಒಳಪಟ್ಟ ಹೊರತು, ಅಂಥ ಯಾವುದೇ ಸ್ವತ್ತನ್ನು ಗುತ್ತಿಗೆಗೆ ಕೊಡತಕ್ಕುದಲ್ಲ ಅಥವಾ ಅದರ ಮೇಲೆ ಯಾವುದೇ ಗೇಣಿಯ ಅಧಿಕಾರಗಳನ್ನು ಸೃಷ್ಟಿಸತಕ್ಕುದಲ್ಲ:

ಪರಂತು, [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಅಧಿಕಾರಗಳನ್ನು, ಸಂದರ್ಭಾನುಸಾರ, ಗೇಣಿದಾರ ಖರೀದಿದಾರನ, ಗುತ್ತಿಗೆದಾರನ ಅಥವಾ ಗೇಣಿದಾರನ ವಿರುದ್ಧ ಅವನೇ ಅಡಮಾನಕಾರನಾಗಿದ್ದರೆ ಹೇಗೋ ಹಾಗೆ ಜಾರಿಗೊಳಿಸತಕ್ಕುದು.

(2) [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][1] ಸ್ವಾಧೀನದೊಡನೆ ಅಡಮಾನ ಮಾಡಿದ ಭೂಮಿಯು ಗೇಣಿದಾರನ ವಾಸ್ತವ ಸ್ವಾಧೀನದಲ್ಲಿ ಇರುವಲ್ಲಿ, ಅಡಮಾನಕಾರನು ಅಥವಾ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು,][1] ಗುತ್ತಿಗೆ ಮತ್ತು ಅಡಮಾನವು ಜಾರಿಯಲ್ಲಿರುವ ಅವಧಿಯಲ್ಲಿ ಗೇಣಿಯನ್ನು [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][1] ಸಂದಾಯಮಾಡಲು ಗೇಣಿದಾರನಿಗೆ ನೋಟೀಸನ್ನು ಕೊಡತಕ್ಕುದು ಮತ್ತು ಅಂಥ ನೋಟೀಸನ್ನು ಕೊಟ್ಟ ತರುವಾಯ ಗೇಣಿದಾರನು [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ನೂತನ ಒಡೆತನವನ್ನು ಅಂಗೀಕರಿಸಿದ್ದಾನೆಂದು ಭಾವಿಸತಕ್ಕುದು.][2]

**88. ಜಪ್ತಿ - ಯಾವಾಗ ಮಾಡುವುದು:-** (1) [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಹೆಸರಿಗೆ ಬರೆದುಕೊಟ್ಟ ಅಡಮಾನದ ಮೇರೆಗೆ ಸಂದಾಯ ಮಾಡಬೇಕಾದ ಯಾವುದೇ ಕಂತು ಅಥವಾ ಅಂಥ ಕಂತಿನ ಯಾವುದೇ ಭಾಗವು ಅದು ಬಾಕಿಯಾದ ದಿನಾಂಕದಿಂದ ಒಂದು ತಿಂಗಳಿಗಿಂತ ಹೆಚ್ಚಿನ ಅವಧಿಯವರೆಗೆ ಸಂದಾಯವಾಗದೆ ಉಳಿದಿದ್ದರೆ, ಸಮಿತಿಯು ಬ್ಯಾಂಕಿಗೆ ಲಭ್ಯವಿರುವ ಇತರ ಯಾವುದೇ ಕ್ರಮೋಪಾಯದ ಜೊತೆಗೆ, ಅಡಮಾನ ಮಾಡಿದ ಭೂಮಿಯಲ್ಲಿರುವ ಬೆಳೆಯೂ ಸೇರಿದಂತೆ ಅದರ ಹುಟ್ಟುವಳಿಯನ್ನು ಜಪ್ತಿಮಾಡುವ ಮತ್ತು ಮಾರಾಟ ಮಾಡುವ ಮೂಲಕ ಅಂಥ ಕಂತನ್ನು ಅಥವಾ ಅದರ ಭಾಗವನ್ನು ವಸೂಲು ಮಾಡುವ ಸಲುವಾಗಿ ರಿಜಿಸ್ಟ್ರಾರನಿಗೆ ಅರ್ಜಿಯನ್ನು ಸಲ್ಲಿಸಬಹುದು.

(2) ಅಂಥ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ರಿಜಿಸ್ಟ್ರಾರನು, ಸ್ವತ್ತು ವರ್ಗಾವಣೆ ಅಧಿನಿಯಮ, 1882ರಲ್ಲಿ (1882ರ ಕೇಂದ್ರ ಅಧಿನಿಯಮ IV) ಏನೇ ಇದ್ದರೂ, ಅಂಥ ಹುಟ್ಟುವಳಿಯನ್ನು ಜಪ್ತಿಮಾಡುವ ಮತ್ತು ಮಾರಾಟ ಮಾಡುವ ಉದ್ದೇಶಕ್ಕಾಗಿ ನಿಯಮಿಸಿದ ರೀತಿಯಲ್ಲಿ ಕ್ರಮವನ್ನು ಕೈಗೊಳ್ಳಬಹುದು:

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

ಪರಂತು, ಕಂತು ಬಾಕಿಯಾದ ದಿನಾಂಕದಿಂದ [1][ಮೂವತ್ತಾರು ತಿಂಗಳು][1] ಕಳೆದ ತರುವಾಯ ಯಾವುದೇ ಜಪ್ತಿಯನ್ನು ಮಾಡತಕ್ಕುದಲ್ಲ.

(3) ಜಪ್ತಿ ಮಾಡಲಾದ ಸ್ವತ್ತಿನ ಮೌಲ್ಯವು ಸಾಧ್ಯವಾದಷ್ಟು ಮಟ್ಟಿಗೆ ಬಾಕಿ ಇರುವ ಮೊಬಲಗಿಗೆ ಮತ್ತು ಜಪ್ತಿಯ ವೆಚ್ಚಗಳು ಮತ್ತು ಮಾರಾಟದ ವೆಚ್ಚಗಳಿಗೆ ಸಮನಾಗಿರತಕ್ಕುದು.

**89. ಮಾರಾಟದ ಅಧಿಕಾರವನ್ನು ಯಾವಾಗ ಚಲಾಯಿಸುವುದು:-** (1) ಸ್ವತ್ತು ವರ್ಗಾವಣೆ ಅಧಿನಿಯಮ, 1882ರಲ್ಲಿ (1882ರ ಕೇಂದ್ರ ಅಧಿನಿಯಮ IV) ಏನೇ ಇದ್ದರೂ, ನ್ಯಾಯಾಲಯದ ಮಧ್ಯ ಪ್ರವೇಶವಿಲ್ಲದೆ ಮಾರಾಟದ ಅಧಿಕಾರವನ್ನು ಅಡಮಾನ ಪತ್ರದ ಮೂಲಕ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][1] ಸ್ಪಷ್ಟವಾಗಿ ಪ್ರದಾನ ಮಾಡಿರುವಲ್ಲಿ, ಅಂಥ ಬ್ಯಾಂಕಿನ ಸಮಿತಿಯು ಅಥವಾ ಅಂಥ ಸಮಿತಿಯು ಈ ಬಗ್ಗೆ ಅಧಿಕೃತಗೊಳಿಸಿದ ಯಾರೇ ವ್ಯಕ್ತಿಯು, ಅಡಮಾನದ ಹಣವನ್ನು ಅಥವಾ ಅದರ ಯಾವುದೇ ಭಾಗವನ್ನು ಸಂದಾಯ ಮಾಡಲು ತಪ್ಪಿರುವ ಸಂದರ್ಭದಲ್ಲಿ, ಬ್ಯಾಂಕಿಗೆ ಇರುವ ಇತರ ಯಾವುದೇ ಕ್ರಮೋಪಾಯದ ಜೊತೆಗೆ, ಅಡಮಾನ ಮಾಡಲಾದ ಭೂಮಿಯನ್ನು ನ್ಯಾಯಾಲಯದ ಮಧ್ಯ ಪ್ರವೇಶವಿಲ್ಲದೆ ಮಾರಾಟ ಮಾಡುವ ಅಧಿಕಾರವನ್ನು ಹೊಂದಿರತಕ್ಕುದು.

(2) ಅಂಥ ಯಾವುದೇ ಅಧಿಕಾರವನ್ನು -

(ಎ) ಅಡಮಾನಕಾರನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ, ಅವುಗಳ ಸುನಾವಣೆ ಮಾಡಿದ ತರುವಾಯ, (1)ನೇ ಉಪಪ್ರಕರಣದ ಮೂಲಕ ಪ್ರದಾನ ಮಾಡಿದ ಅಧಿಕಾರವನ್ನು ಚಲಾಯಿಸಲು ಮಂಡಲಿಯನ್ನು ಮುಂಚಿತವಾಗಿ ಅಧಿಕೃತಗೊಳಿಸಿದ ಹೊರತು ಮತ್ತು ಅಧಿಕೃತಗೊಳಿಸುವವರೆಗೆ;

(ಬಿ) ಅಂಥ ಅಡಮಾನದ ಹಣವನ್ನು ಅಥವಾ ಅದರ ಭಾಗವನ್ನು ಸಂದಾಯ ಮಾಡುವಂತೆ ಅಗತ್ಯಪಡಿಸುವ ಲಿಖಿತ ನೋಟೀಸನ್ನು -

(i) ಅಡಮಾನಕಾರನಿಗೆ;

(ii) ಅಡಮಾನ ಮಾಡಲಾದ ಸ್ವತ್ತಿನಲ್ಲಿ ಯಾವುದೇ ಹಿತಾಸಕ್ತಿಯನ್ನು ಅಥವಾ ಭಾರವನ್ನು ಅಥವಾ ಅದನ್ನು ವಿಮೋಚನೆಗೊಳಿಸುವ ಅಧಿಕಾರದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯನ್ನು ಹೊಂದಿರುವ ಯಾರೇ ವ್ಯಕ್ತಿಗೆ;

(iii) ಅಡಮಾನ ಋಣದ ಅಥವಾ ಅದರ ಯಾವುದೇ ಭಾಗದ ಸಂದಾಯದ ಸಲುವಾಗಿ ಯಾರೇ ಜಾಮೀನುದಾರನಿಗೆ; ಮತ್ತು

(iv) ತನ್ನ ಸಂಪದದ ಆಡಳಿತದ ಸಲುವಾಗಿ ಇರುವ ದಾವೆಯಲ್ಲಿ ಅಡಮಾನ ಮಾಡಲಾದ ಸ್ವತ್ತಿನ ಮಾರಾಟದ ಡಿಕ್ರಿಯನ್ನು ಪಡೆದ ಅಡಮಾನಕಾರನ ಯಾರೇ ಲೇಣೇದಾರನಿಗೆ

- ಜಾರಿ ಮಾಡಿದ ಹೊರತು ಮತ್ತು ಮಾಡುವವರೆಗೆ; ಮತ್ತು

(ಸಿ) ಹಾಗೆ ಜಾರಿ ಮಾಡಿದ ತರುವಾಯ ಮೂರು ತಿಂಗಳುಗಳವರೆಗೆ ಅಂಥ ಅಡಮಾನದ ಹಣವನ್ನು ಅಥವಾ ಅದರ ಭಾಗವನ್ನು ಸಂದಾಯ ಮಾಡಲು ತಪ್ಪಿದ ಹೊರತು ಮತ್ತು ತಪ್ಪುವವರೆಗೆ

- ಚಲಾಯಿಸಲ್ಪಡತಕ್ಕುದಲ್ಲ.

[2][(3) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಈ ಅಧ್ಯಾಯದ ಮೇರೆಗೆ ಮಾರಾಟ ಮಾಡುವ ಯಾವುದೇ ಅಡಮಾನ ಸ್ವತ್ತನ್ನು [3][ಒಂದು][3] [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಅಥವಾ [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಖರೀದಿಸುವುದು ಕಾನೂನು ಸಮ್ಮತವಾಗಿರತಕ್ಕುದು.][2]

[4]**[89ಎ. ಮಾರಾಟದ ಸ್ಥಿರೀಕರಣ:-** (1) 89ನೇ ಪ್ರಕರಣದ ಮೇರೆಗೆ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಮಾರಾಟವನ್ನು ಮಾಡಿದ ತರುವಾಯ ಆ ಬ್ಯಾಂಕು, ಮಾರಾಟವನ್ನು ಮಾಡಿದ ರೀತಿಯನ್ನು ಮತ್ತು ಮಾರಾಟದ ಫಲಿತಾಂಶವನ್ನು ನಿರೂಪಿಸುವ ವರದಿಯನ್ನು, ನಿಯಮಿಸಿದ ರೀತಿಯಲ್ಲಿ [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][1] ಮತ್ತು ರಿಜಿಸ್ಟ್ರಾರನಿಗೆ ಸಲ್ಲಿಸತಕ್ಕುದು ಮತ್ತು [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ರಿಜಿಸ್ಟ್ರಾರನ ಅನುಮೋದನೆಯನ್ನು ಪಡೆದು ಆ ಮಾರಾಟವನ್ನು ಸ್ಥಿರೀಕರಿಸಬಹುದು ಅಥವಾ ರದ್ದುಗೊಳಿಸಬಹುದು.

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) 89ನೇ ಪ್ರಕರಣದ ಮೇರೆಗೆ ಮಾರಾಟವನ್ನು [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಅಥವಾ ನ್ಯಾಸಧಾರಿಯು ಮಾಡಿರುವಲ್ಲಿ, ಸಂದರ್ಭಾನುಸಾರ, [1][ಆ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಅಥವಾ ಆ ನ್ಯಾಸಧಾರಿಯು, ಮಾರಾಟವನ್ನು ಮಾಡಿದ ರೀತಿಯನ್ನು ಮತ್ತು ಮಾರಾಟದ ಫಲಿತಾಂಶವನ್ನು ನಿರೂಪಿಸುವ ವರದಿಯನ್ನು, ನಿಯಮಿಸಿದ ರೀತಿಯಲ್ಲಿ ರಿಜಿಸ್ಟ್ರಾರನಿಗೆ ಸಲ್ಲಿಸತಕ್ಕುದು ಮತ್ತು ರಿಜಿಸ್ಟ್ರಾರನು ಆ ಮಾರಾಟವನ್ನು ಸ್ಥಿರೀಕರಿಸಬಹುದು ಅಥವಾ ರದ್ದುಗೊಳಿಸಬಹುದು.

**89ಬಿ. ಮಾರಾಟದ ಉತ್ಪತ್ತಿಯ ವಿಲೆ:-** 89ನೇ ಪ್ರಕರಣದ ಮೇರೆಗೆ ಮಾಡಿದ ಮತ್ತು 89ಎ ಪ್ರಕರಣದ ಮೇರೆಗೆ ಸ್ಥಿರೀಕರಿಸಿದ ಪ್ರತಿಯೊಂದು ಮಾರಾಟದ ಉತ್ಪತ್ತಿಯನ್ನು ಮೊದಲನೆಯದಾಗಿ, ಮಾರಾಟದ ಅಥವಾ ಪ್ರಯತ್ನಿಸಿದ ಮಾರಾಟಗಳ ಸಂಬಂಧದಲ್ಲಿ ವಹಿಸಿದ ಎಲ್ಲಾ ಖರ್ಚುಗಳು, ಚಾರ್ಜುಗಳು ಮತ್ತು ವೆಚ್ಚಗಳ ಸಂದಾಯಕ್ಕಾಗಿ, ಎರಡನೆಯದಾಗಿ ಅಡಮಾನ ಸ್ವತ್ತನ್ನು ಮಾರಾಟ ಮಾಡಿದ ಪರಿಣಾಮವಾಗಿ ಅಡಮಾನದ ಬಗ್ಗೆ ಬಾಕಿ ಇರುವ ಯಾವುದೇ ಬಡ್ಡಿಯ ಅಥವಾ ಎಲ್ಲಾ ಬಡ್ಡಿಯ ಸಂದಾಯಕ್ಕಾಗಿ ಮತ್ತು ಮೂರನೆಯದಾಗಿ, ವಸೂಲಿಗೆ ಸಂಬಂಧಿಸಿದ ಪ್ರಾಸಂಗಿಕ ಖರ್ಚುಗಳು ಮತ್ತು ಚಾರ್ಜುಗಳೂ ಸೇರಿ ಅಡಮಾನದ ಬಗ್ಗೆ ಬಾಕಿ ಇರುವ ಅಸಲಿನ ಸಂದಾಯಕ್ಕಾಗಿ ವಿನಿಯೋಗಿಸತಕ್ಕುದು.

ಮಾರಾಟದ ಉತ್ಪತ್ತಿಯಿಂದ ಯಾವುದೇ ಹಣ ಉಳಿದರೆ, ಅದನ್ನು ಮಾರಾಟ ಮಾಡಿದ ಸ್ವತ್ತಿನಲ್ಲಿ ತಾನು ಹಿತಾಸಕ್ತಿ ಹೊಂದಿರುವುದಾಗಿ ರುಜುವಾತುಪಡಿಸುವ ವ್ಯಕ್ತಿಗೆ, ಅಥವಾ ಅಂಥ ವ್ಯಕ್ತಿಗಳು ಒಬ್ಬನಿಗಿಂತ ಹೆಚ್ಚಾಗಿದ್ದರೆ, ಆಗ ಅಂಥ ವ್ಯಕ್ತಿಗಳಿಗೆ, ಅವರ ಜಂಟಿ ರಸೀದಿಯ ಮೇಲೆ ಅಥವಾ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ನಿರ್ಧರಿಸಬಹುದಾದಂತೆ ಅದರಲ್ಲಿ ಅನುಕ್ರಮವಾಗಿ ಅವರವರಿಗಿರುವ ಹಿತಾಸಕ್ತಿಗೆ ಅನುಸಾರವಾಗಿ ಸಂದಾಯಮಾಡತಕ್ಕುದು:]

ಪರಂತು, ಅಂಥ ಯಾವುದೇ ಸಂದಾಯಗಳನ್ನು ಮಾಡುವುದಕ್ಕೆ ಮುಂಚೆ,-

(ಎ) ಅಡಮಾನಕಾರನಿಂದ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][1] ಬರಬೇಕಾದ ಭದ್ರತೆಯಿಲ್ಲದ ಬಾಕಿಗಳಿಗೆ ಸರಿಹೊಂದಿಸಬಹುದು; ಮತ್ತು

(ಬಿ) ಅಡಮಾನಕಾರನು ಯಾವ ಸದಸ್ಯನಿಗೆ ಅಥವಾ ಹಿಂದಿನ ಸದಸ್ಯನಿಗೆ ಋಣಿಯಾಗಿದ್ದಾನೋ ಆ ಯಾರೇ ಸದಸ್ಯನಿಂದ ಅಥವಾ ಹಿಂದಿನ ಸದಸ್ಯನಿಂದ ಬರಬೇಕಾದ ಭದ್ರತೆಯಿಲ್ಲದ ಬಾಕಿಗಳಿಗೆ ಸಹ ಅಂಥ ಸದಸ್ಯನು ಮತ್ತು ಹಿಂದಿನ ಸದಸ್ಯನು ಕೊಟ್ಟ ಲಿಖಿತ ಅಧಿಕಾರ ಪತ್ರದ ಮೇರೆಗೆ ಮತ್ತು ಅವಶ್ಯವೆಂದು ಭಾವಿಸಬಹುದಾದಂಥ ವಿಚಾರಣೆಯನ್ನು ನಡೆಸಿದ ತರುವಾಯ ಸರಿಹೊಂದಿಸಬಹುದು.

**89ಸಿ. ಖರೀದಿಸುವುದು, ಸ್ವತ್ತನ್ನು ಒಪ್ಪಿಸುವುದು ಮತ್ತು ಖರೀದಿದಾರನ ಹಕ್ಕಿಗೆ ಸಂಬಂಧಿಸಿದ ಪ್ರಮಾಣಪತ್ರ:-** (1) 89ಎ ಪ್ರಕರಣದ ಮೇರೆಗೆ ಅಡಮಾನ ಸ್ವತ್ತಿನ ಮಾರಾಟವು ಪೂರ್ಣಗೊಂಡಿರುವಲ್ಲಿ ಮತ್ತು ಮಾರಾಟದ ಉತ್ಪತ್ತಿಯನ್ನು [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಪೂರ್ತಿಯಾಗಿ ಸ್ವೀಕರಿಸಿರುವಲ್ಲಿ, ಆ ಬ್ಯಾಂಕು ಮಾರಾಟಮಾಡಿದ ಸ್ವತ್ತು, ಮಾರಾಟದ ಬೆಲೆ, ಅದರ ಮಾರಾಟದ ದಿನಾಂಕ, ಮಾರಾಟದ ಸಮಯದಲ್ಲಿ ಖರೀದಿದಾರನೆಂದು ಘೋಷಿಸಲಾದ ವ್ಯಕ್ತಿಯ ಹೆಸರು ಮತ್ತು ಮಾರಾಟವು ಪೂರ್ಣಗೊಂಡ ದಿನಾಂಕ ಇವುಗಳನ್ನು ಪ್ರಮಾಣೀಕರಿಸಿದ ಒಂದು ಪ್ರಮಾಣಪತ್ರವನ್ನು ನಿಯಮಿಸಿದ ನಮೂನೆಯಲ್ಲಿ ಖರೀದಿದಾರನಿಗೆ ನೀಡತಕ್ಕುದು ಮತ್ತು ಅಂಥ ಪ್ರಮಾಣ ಪತ್ರವನ್ನು ಹಾಜರುಪಡಿಸಿದಾಗ ಭಾರತ ನೋಂದಣಿ ಅಧಿನಿಯಮ, 1908ರ ಮೇರೆಗೆ ನೇಮಕಗೊಂಡ ಮತ್ತು ಆ ಪ್ರಮಾಣ ಪತ್ರದಲ್ಲಿ ನಿರ್ದಿಷ್ಟಪಡಿಸಿದ ಇಡೀ ಸ್ವತ್ತು ಅಥವಾ ಅದರ ಯಾವುದೇ ಭಾಗವು ಯಾರ ಅಧಿಕಾರ ವ್ಯಾಪ್ತಿಯ ಪರಿಮಿತಿಗಳಲ್ಲಿ ಇರುವುದೋ ಆ ಸಬ್‌ರಿಜಿಸ್ಟ್ರಾರನು ಅಂಥ ಪ್ರಮಾಣಪತ್ರದಲ್ಲಿರುವ ಒಳಾಂಶಗಳನ್ನು ಸ್ಥಿರ ಸ್ವತ್ತಿಗೆ ಸಂಬಂಧಿಸಿದ ತನ್ನ ರಿಜಿಸ್ಟರಿನಲ್ಲಿ ನಮೂದಿಸತಕ್ಕುದು.

(2) (ಎ) ಮಾರಾಟ ಮಾಡಲಾದ ಅಡಮಾನ ಸ್ವತ್ತು ಅಡಮಾನಕಾರನ ಅಥವಾ ಅವನ ಪರವಾಗಿ ಯಾವೊಬ್ಬ ವ್ಯಕ್ತಿಯ, ಅಥವಾ [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಅಥವಾ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಹೆಸರಿಗೆ ಅಡಮಾನ ಮಾಡಿದ ತರುವಾಯ ಅಡಮಾನಕಾರನು ಸೃಜಿಸಿದ ಹಕ್ಕಿನ ಅಡಿಯಲ್ಲಿ ಕ್ಲೇಮು ಮಾಡುವ ಯೊವೊಬ್ಬ ವ್ಯಕ್ತಿಯ ಅನುಭೋಗದಲ್ಲಿರುವಲ್ಲಿ ಮತ್ತು ಹಿಂದೆ ಹೇಳಿದ ಉಪಪ್ರಕರಣದ ಮೇರೆಗೆ ಆ ಸಂಬಂಧದಲ್ಲಿ ಪ್ರಮಾಣಪತ್ರವನ್ನು ಕೊಟ್ಟಿರುವಲ್ಲಿ, ಡೆಪ್ಯೂಟಿ ಕಮಿಷನರನು ಖರೀದಿದಾರನ ಅರ್ಜಿಯ ಮೇಲೆ ಆ ಸ್ವತ್ತಿನ ಸ್ವಾಧೀನವನ್ನು ಅಂಥ ಖರೀದಿದಾರನಿಗೆ ಅಥವಾ ಅವನು ತನ್ನ ಪರವಾಗಿ ವಶಾವಣೆ ಪಡೆಯಲು ನೇಮಕ ಮಾಡಬಹುದಾದ ವ್ಯಕ್ತಿಗೆ ಒಪ್ಪಿಸಿ ವಶಾವಣೆ ಮಾಡುವಂತೆ ಆದೇಶಿಸತಕ್ಕುದು.

(ಬಿ) ಮಾರಾಟ ಮಾಡಲಾದ ಸ್ವತ್ತು ಗೇಣಿದಾರನ ಅಥವಾ ಅದರ ಅನುಭೋಗಕ್ಕೆ ಹಕ್ಕುಳ್ಳ ಇತರ ವ್ಯಕ್ತಿಯ ಅನುಭೋಗದಲ್ಲಿರುವಲ್ಲಿ ಮತ್ತು ಈ ಹಿಂದೆ ಹೇಳಿದ ಉಪ ಪ್ರಕರಣದ ಮೇರೆಗೆ ಆ ಸಂಬಂಧದಲ್ಲಿ ಪ್ರಮಾಣ ಪತ್ರವನ್ನು ನೀಡಿರುವಲ್ಲಿ, ಡೆಪ್ಯುಟಿ ಕಮಿಷನರನು ಖರೀದಿದಾರನ ಅರ್ಜಿಯ ಮೇಲೆ ಮತ್ತು ಅಂಥ ಗೇಣಿದಾರರಿಗೆ ಅಥವಾ ಇತರ ವ್ಯಕ್ತಿಗಳಿಗೆ, ನೋಟೀಸು ಕೊಟ್ಟ ತರುವಾಯ, ಮಾರಾಟದ ಪ್ರಮಾಣಪತ್ರದ ಪ್ರತಿಯನ್ನು ಸ್ವತ್ತಿನ

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಮೇಲೆ ಎದ್ದು ಕಾಣುವ ಸ್ಥಳದಲ್ಲಿ ಅಂಟಿಸುವ ಮೂಲಕ ಮತ್ತು ಯಾವೊಂದು ಅನುಕೂಲಕರ ಸ್ಥಳದಲ್ಲಿ ಡಂಗುರ ಸಾರಿಸುವ ಅಥವಾ ಇತರ ರೂಢಿಗತ ಪದ್ಧತಿಯ ಮೂಲಕ ಆ ಅನುಭೋಗದಾರನಿಗೆ, ಅಡಮಾನಕಾರನ ಅಧಿಕಾರ, ಹಕ್ಕು ಮತ್ತು ಹಿತಾಸಕ್ತಿ ಇವುಗಳು ಖರೀದಿದಾರನಿಗೆ ವರ್ಗಾಯಿತವಾಗಿರುವುದಾಗಿ ಘೋಷಿಸುವ ಮೂಲಕ ವಶಾವಣೆ ಮಾಡುವಂತೆ ಆದೇಶಿಸತಕ್ಕುದು.

(3) [1][89ನೇ ಪ್ರಕರಣದ][1] ಮೇರೆಗಿನ ಮಾರಾಟದ ಅಧಿಕಾರವನ್ನು ಚಲಾಯಿಸಿ, ಅಥವಾ ಚಲಾಯಿಸಲಾಗಿದೆಯೆಂದು ತಾತ್ಪರ್ಯವಾಗುವಲ್ಲಿ ಯಾವುದೇ ಸ್ವತ್ತನ್ನು ಮಾರಾಟ ಮಾಡಿರುವಲ್ಲಿ ಖರೀದಿದಾರನ ಹಕ್ಕನ್ನು ಆ ಮಾರಾಟವನ್ನು ಅಧಿಕೃತಗೊಳಿಸುವುದಕ್ಕೆ ಅಗತ್ಯವಾದ ಸನ್ನಿವೇಶಗಳು ಉದ್ಭವಿಸಿರುವುದಿಲ್ಲವೆಂಬ, ಅಥವಾ ಮಾರಾಟದ ಬಗ್ಗೆ ಸೂಕ್ತ ನೋಟೀಸನ್ನು ಕೊಟ್ಟಿಲ್ಲವೆಂಬ ಅಥವಾ ಮಾರಾಟದ ಅಧಿಕಾರವನ್ನು ಅನ್ಯಥಾ ಅನುಚಿತವಾಗಿ ಅಥವಾ ಅಕ್ರಮವಾಗಿ ಚಲಾಯಿಸಲಾಗಿದೆ ಎಂಬ ಕಾರಣದ ಮೇಲೆ ಪ್ರಶ್ನಿಸತಕ್ಕುದಲ್ಲ:

ಪರಂತು, ಅಂಥ ಅಧಿಕಾರವನ್ನು ಅನಧಿಕೃತವಾಗಿ, ಅನುಚಿತವಾಗಿ ಅಥವಾ ಅಕ್ರಮವಾಗಿ ಚಲಾಯಿಸಲಾಗಿರುವ ಕಾರಣದಿಂದ ನಷ್ಟವನ್ನು ಅನುಭವಿಸಿದ ಯಾರೇ ವ್ಯಕ್ತಿಯು, ಅಂಥ ನಷ್ಟಕ್ಕಾಗಿ [2][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನಿಂದ][2] ಪರಿಹಾರವನ್ನು ಪಡೆಯಲು ಅವಕಾಶ ಹೊಂದಿರತಕ್ಕುದು.

**89ಡಿ. ರಿಜಿಸ್ಟ್ರಾರನು ಕೊಟ್ಟ ಪ್ರಮಾಣಪತ್ರದ ಮೇಲೆ ಸಾಲಗಳ ವಸೂಲಿ:-** (1) 70 ಮತ್ತು 71ನೇ ಪ್ರಕರಣಗಳಲ್ಲಿ ಏನೇ ಇದ್ದರೂ, [2][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು,][2] ಅದು ತನ್ನ ಸದಸ್ಯರಿಗೆ ಮುಂಗಡವಾಗಿ ನೀಡಿದ ಯಾವುದೇ ಮೊತ್ತದ ಬಾಕಿಗಳ ವಸೂಲಿಗಾಗಿ ಸಲ್ಲಿಸಿದ ಅರ್ಜಿಯ ಮೇಲೆ ಮತ್ತು ಬಾಕಿಗಳ ಸಂಬಂಧದಲ್ಲಿ ಲೆಕ್ಕಗಳ ತಃಖ್ತೆಯನ್ನು ಒದಗಿಸಿದ ಮೇಲೆ, ರಿಜಿಸ್ಟ್ರಾರನು, ತಾನು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆ ಮಾಡಿದ ತರುವಾಯ, ಪ್ರಮಾಣಪತ್ರದಲ್ಲಿ ಬಾಕಿ ಇರುವುದಾಗಿ ತಿಳಿಸಿದ ಮೊಬಲಗಿನ ವಸೂಲಿಗಾಗಿ ಪ್ರಮಾಣಪತ್ರವನ್ನು ನೀಡಬಹುದು.

(2) (1)ನೇ ಉಪಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಕೊಟ್ಟ ಪ್ರಮಾಣ ಪತ್ರವು ಬಾಕಿಗಳಿಗೆ ಸಂಬಂಧಿಸಿದಂತೆ ಅಂತಿಮ ಮತ್ತು ನಿರ್ಣಾಯಕವಾಗಿರತಕ್ಕುದು. ಅದರಲ್ಲಿ ಬಾಕಿಯಾಗಿರುವುದಾಗಿ ಹೇಳಲಾದ ಬಾಕಿಗಳು ಭೂ ಕಂದಾಯದ ಬಾಕಿಗಳ ವಸೂಲಿಯ ಸಲುವಾಗಿ ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿಗೆ ಅನುಸಾರವಾಗಿ ವಸೂಲೀಯವಾಗಿರತಕ್ಕುದು.

(3) [2][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][2] ಸಂದಾಯವಾಗತಕ್ಕ ಬಾಕಿಗಳನ್ನು, ಬಡ್ಡಿ ಮತ್ತು ಅಂಥ ಬಾಕಿಗಳ ವಸೂಲಿಗಾಗಿ ವಹಿಸಿದ ಯಾವುದೇ ಆನುಷಂಗಿಕ ವೆಚ್ಚಗಳ ಸಹಿತ ಸಂದಾಯ ಮಾಡುವವರೆಗೆ ಅಥವಾ ರಿಜಿಸ್ಟ್ರಾರನಿಗೆ ಮನದಟ್ಟಾಗುವಂತೆ ಅಂಥ ಬಾಕಿಗಳ ಸಂದಾಯದ ಬಗ್ಗೆ ಭದ್ರತೆಯನ್ನು ಒದಗಿಸುವವರೆಗೆ ಡೆಪ್ಯುಟಿ ಕಮೀಷನರನು, [3][ಕರ್ನಾಟಕ][3] ಭೂ ಕಂದಾಯ ಅಧಿನಿಯಮ, 1964ರ 188ನೆಯ ಪ್ರಕರಣದ ಮೂಲಕ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನು ಅಥವಾ ಅದಕ್ಕೆ ಸಂವಾದಿಯಾದ ಉಪಬಂಧದ ಮೂಲಕ ಅಧಿಕೃತ ಮುನ್ನೆಚ್ಚರಿಕೆಯ ಕ್ರಮಗಳನ್ನು ಕೈಗೊಳ್ಳುವುದು ಕಾನೂನು ಸಮ್ಮತವಾಗಿರತಕ್ಕುದು.

(4) [2][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][2] ಸಲ್ಲತಕ್ಕ ಬಾಕಿಗಳನ್ನು ಅಂಥ ಬಾಕಿಗಳ ಮೇಲಿನ ಬಡ್ಡಿ ಮತ್ತು ಅವುಗಳನ್ನು ವಸೂಲು ಮಾಡುವಲ್ಲಿ ವಹಿಸಿದ ಪ್ರಾಸಂಗಿಕ ವೆಚ್ಚಗಳ ಸಮೇತವಾಗಿ ಸಂದಾಯ ಮಾಡುವವರೆಗೆ ಅಥವಾ ಅಂಥ ಬಾಕಿಗಳ ಸಂದಾಯಕ್ಕಾಗಿ ರಿಜಿಸ್ಟ್ರಾರನಿಗೆ ಮನದಟ್ಟಾಗುವಂತೆ ಭದ್ರತೆಯನ್ನು ಒದಗಿಸುವವರೆಗೆ, ಅಡಮಾನಕಾರನ ಸ್ವತ್ತಿನ ಷರತ್ತುಪೂರ್ವಕ ಜಫ್ತಿಗಾಗಿ ನಿರ್ದೇಶಿಸುವುದಕ್ಕೆ ರಿಜಿಸ್ಟ್ರಾರನು ಅಥವಾ ಅವನಿಂದ ಅಧಿಕೃತನಾದ ವ್ಯಕ್ತಿಯು ಸಕ್ಷಮನಾಗಿರತಕ್ಕುದು ಮತ್ತು ಈ ಪ್ರಕರಣದ ಮೇರೆಗೆ ಮಾಡಲಾದ ಅಥವಾ ಮಾಡಬೇಕಾದ ಯಾವುದೇ ಸ್ವತ್ತಿನ ಷರತ್ತು ಪೂರ್ವಕ ಜಫ್ತಿಗೆ 95ನೇ ಪ್ರಕರಣದ ಉಪಬಂಧಗಳು ಉಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕುದು.

**89ಇ. ಕೆಲವೊಂದು ಅವಧಿಯಲ್ಲಿ ಡೆಪ್ಯುಟಿ ಕಮೀಷನರನು ವಸೂಲಿ ಮಾಡುವುದು:-** (1) ರಾಜ್ಯ ಸರ್ಕಾರವು, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ, ರಾಜಪತ್ರದಲ್ಲಿ ಅಧಿಸೂಚಿಸಬಹುದಾದಂಥ ಅವಧಿಯಲ್ಲಿ [2][ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][2] ಸಲ್ಲತಕ್ಕ ಎಲ್ಲ ಮೊತ್ತಗಳನ್ನು (ವಸೂಲಿಯ ಖರ್ಚು ಸೇರಿ) ವಸೂಲು ಮಾಡುವ ಸಂಬಂಧದಲ್ಲಿ ಅರ್ಜಿಯನ್ನು [2][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][2] ಡೆಪ್ಯುಟಿ ಕಮೀಷನರನಿಗೆ ಸಲ್ಲಿಸಿ ಅವನು ಆ ಎಲ್ಲ ಮೊತ್ತಗಳನ್ನು ವಸೂಲು ಮಾಡಲು ಸಕ್ಷಮನಾಗಿರತಕ್ಕುದು.

(2) [2][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][2] ಸಲ್ಲತಕ್ಕ ಯಾವುದೇ ಮೊಬಲಗು ಮುಂದೆ ಹೇಳಿರುವ ಎಲ್ಲ ಅಥವಾ ಯಾವುವೇ ಬಗೆಗಳಲ್ಲಿ ಡೆಪ್ಯುಟಿ ಕಮೀಷನರನಿಂದ ಅಥವಾ ಈ ಬಗ್ಗೆ ಡೆಪ್ಯುಟಿ ಕಮೀಷನರನಿಂದ ವಿಶೇಷವಾಗಿ ಅಧಿಕೃತನಾದ ಯಾರೇ ಅಧಿಕಾರಿಯಿಂದ ವಸೂಲೀಯವಾಗತಕ್ಕುದು, ಎಂದರೆ:-

(ಎ) ಸಾಲ ಪಡೆದವನಿಂದ ಅವು ಭೂ ಕಂದಾಯದ ಬಾಕಿಯಾಗಿದ್ದರೆ ಹೇಗೋ ಹಾಗೆ;

(ಬಿ) ಯಾವ ಭೂಮಿಯ ಪ್ರಯೋಜನದ ಸಲುವಾಗಿ ಸಾಲವನ್ನು ಮಂಜೂರು ಮಾಡಲಾಗಿದೆಯೋ ಆ ಭೂಮಿಯಿಂದ ಭೂ ಕಂದಾಯದ ವಸೂಲಿಯ ಸಲುವಾಗಿ ಸ್ಥಿರ ಸ್ವತ್ತನ್ನು ಮಾರಾಟ ಮಾಡವ ಪ್ರಕ್ರಿಯೆಗೆ ಅನುಸಾರವಾಗಿ;

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(ಸಿ) ಜಾಮೀನುದಾರನು ಯಾವನಾದರೂ ಇದ್ದರೆ ಅವನಿಂದ ಸಲ್ಲತಕ್ಕ ಭೂ ಕಂದಾಯದ ಬಾಕಿಯಾಗಿದ್ದರೆ ಹೇಗೋ ಹಾಗೆ ಆ ಜಾಮೀನುದಾರನಿಂದ;

(ಡಿ) ಸಹ ಭದ್ರತೆಯನ್ನೊಳಗೊಂಡ ಸ್ವತ್ತು ಯಾವುದಾದರೂ ಇದ್ದರೆ ಅದರಿಂದ, ಭೂ ಕಂದಾಯದ ವಸೂಲಿಯ ಸಲುವಾಗಿ ಸ್ಥಿರ ಸ್ವತ್ತನ್ನು ಮಾರಾಟ ಮಾಡುವ ಪ್ರಕ್ರಿಯೆಯ ಮೇರೆಗೆ.

**89ಎಫ್. ಬ್ಯಾಂಕಿನ ಅಧಿಕಾರಿಗಳು ಮಾರಾಟಗಳಲ್ಲಿ ಸವಾಲು ಮಾಡಲಾಗದು:-** ಈ ಅಧ್ಯಾಯದ ಉಪಬಂಧಗಳ ಮೇರೆಗೆ ನಡೆಸಲಾದ ಚರ ಅಥವಾ ಸ್ಥಿರ ಸ್ವತ್ತಿನ ಯಾವುದೇ ಮಾರಾಟದಲ್ಲಿ, [1][ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಅಥವಾ [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಯಾರೇ ಅಧಿಕಾರಿ ಅಥವಾ ನೌಕರ, ಅವನು ಯಾವ ಬ್ಯಾಂಕಿನ ಅಧಿಕಾರಿಯು ಅಥವಾ ನೌಕರನು ಇರುತ್ತಾನೋ ಆ ಬ್ಯಾಂಕಿನ ಪರವಾಗಿ ಹೊರತು, ಮತ್ತು ಅಂಥ ಮಾರಾಟಕ್ಕೆ ಸಂಬಂಧಿಸಿದ ಯಾವುದೇ ಕರ್ತವ್ಯದ ಚಾಲನೆಯನ್ನು ಹೊಂದಿದ ಯಾವ ವ್ಯಕ್ತಿಯೂ ಅಂಥ ಸ್ವತ್ತಿನ ಹಿತಾಸಕ್ತಿಗಾಗಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸವಾಲು ಮಾಡತಕ್ಕುದಲ್ಲ ಅಥವಾ ಅದನ್ನು ಆರ್ಜಿಸತಕ್ಕುದಲ್ಲ ಅಥವಾ ಆರ್ಜಿಸಲು ಪ್ರಯತ್ನಿಸತಕ್ಕುದಲ್ಲ.

**89ಜಿ. [1][ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳ][1] ಪರ ಆದ ಪರಭಾರೆಗೆ 1947ರ ಮುಂಬೈ 28ನೆಯ ಅಧಿನಿಯಮದ 40ನೆಯ ಪ್ರಕರಣವು ಅನ್ವಯಿಸತಕ್ಕುದಲ್ಲ:-** ಮುಂಬೈ ಕೃಷಿ ಸಾಲಗಾರರ ಋಣ ಪರಿಹಾರ ಅಧಿನಿಯಮ, 1947ರ 40ನೆಯ ಪ್ರಕರಣದಲ್ಲಿ ಅಥವಾ ರಾಜ್ಯದ ಯಾವುದೇ ಭಾಗದಲ್ಲಿ ತತ್ಕಾಲದಲ್ಲಿ ಜಾರಿಯಲ್ಲಿದ್ದ ಯಾವುದೇ ಸಂವಾದಿ ವಿಧಿಯಲ್ಲಿ ಇರುವುದು ಯಾವುದೂ, [1][ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳ][1] ಪರವಾಗಿನ ಯಾವುದೇ ಪರಭಾರೆಗೆ ಅನ್ವಯಿಸತಕ್ಕುದಲ್ಲ.

**89ಹೆಚ್. ಕೆಲವೊಂದು ನಷ್ಟಗಳನ್ನು ತುಂಬಲು ಆಶ್ವಾಸನಾ ನಿಧಿಗಳ ಏರ್ಪಾಡು:-** (1) ರಾಜ್ಯ ಸರ್ಕಾರವು, ಸ್ಥಿರ ಸ್ವತ್ತಿನ ಹಕ್ಕುಗಳ ಮೇಲೆ [1][ಕೃಷಿ ಹಾಗೂ ಗ್ರಾಮಿಾಣ ಅಭಿವೃದ್ಧಿ ಬ್ಯಾಂಕು][1]ಗಳಿಂದ ಸಾಲಗಳು ಕೊಡಲ್ಪಟ್ಟು ತದನಂತರ ಆ ಹಕ್ಕುಗಳು ದೋಷಯುಕ್ತವಾದವುಗಳೆಂದು ಕಂಡುಬಂದುದರ ಪರಿಣಾಮವಾಗಿ ಉದ್ಭವಿಸಬಹುದಾದ ನಷ್ಟಗಳನ್ನು ತುಂಬುವುದಕ್ಕಾಗಿ ಅಥವಾ ಈ ಅಧ್ಯಾಯದ ಇತರ ಯಾವುದೇ ಉದ್ದೇಶಕ್ಕಾಗಿ ರಾಜ್ಯಸರ್ಕಾರದ ಅಭಿಪ್ರಾಯದಲ್ಲಿ ಒಂದು ಪ್ರತ್ಯೇಕವಾದ ಖಾತರಿ ನಿಧಿಯನ್ನು ಏರ್ಪಡಿಸುವುದು ಅಥವಾ ಸೃಜಿಸುವುದು ಅವಶ್ಯಕವಿದ್ದರೆ ಅದು ಯೋಗ್ಯವೆಂದು ಭಾವಿಸುವಂಥ ನಿರ್ಬಂಧಗಳ ಮತ್ತು ಷರತ್ತುಗಳ ಮೇರೆಗೆ ಅಂಥ ಒಂದು ಅಥವಾ ಹೆಚ್ಚು ಆಶ್ವಾಸನ ನಿಧಿಗಳನ್ನು ರಚಿಸಲು ಸಕ್ಷಮವಾಗಿರತಕ್ಕುದು.

(2) [1][ರಾಜ್ಯ ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಮತ್ತು [1][ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು][1] ಇಂಥ ನಿಧಿಗಳಿಗೆ ನಿಯಮಿಸಲ್ಪಡಬಹುದಾದಂಥ ದರಗಳ ಮೇರೆಗೆ ಕೊಡುಗೆಗಳನ್ನು ಕೊಡತಕ್ಕುದು. ಮತ್ತು ಇಂಥ ನಿಧಿಗಳ ರಚನೆಗೆ, ಪೋಷಣೆಗೆ ಮತ್ತು ಉಪಯೋಗಕ್ಕೆ, ರಾಜ್ಯ ಸರ್ಕಾರದಿಂದ ಈ ಬಗ್ಗೆ ಮಾಡಲ್ಪಡಬಹುದಾದಂಥ ನಿಯಮಗಳು ಅನ್ವಯಿಸತಕ್ಕುದು.][4]

**90. ಅಡಮಾನದ ಸ್ವತ್ತು ನಾಶವಾದಾಗ ಅಥವಾ ಭದ್ರತೆಯು ಸಾಕಾಗುವಷ್ಟು ಆದಾಗ [1][ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಅಧಿಕಾರಗಳು:-** [1][ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][1] ಅಡಮಾನ ಮಾಡಲ್ಪಟ್ಟ ಯಾವುದೇ ಸ್ವತ್ತು ಪೂರ್ತಿಯಾಗಿ ಅಥವಾ ಭಾಗಶಃ ನಾಶವಾದಾಗ ಅಥವಾ ಭದ್ರತೆಯು ಸಾಕಾಗದಷ್ಟು ಆದಾಗ ಮತ್ತು ಸಾಕಷ್ಟಾಗುವಂತೆ ಹೆಚ್ಚಿನ ಭದ್ರತೆಯನ್ನು ಒದಗಿಸಲು ಅಥವಾ ಸಮಿತಿಗಳಿಂದ ನಿರ್ಧರಿಸಲ್ಪಡಬಹುದಾದಷ್ಟು ಸಾಲದ ಭಾಗದ ಮರುಸಂದಾಯ ಮಾಡಲು ಅಡಮಾನಕಾರನಿಗೆ [1][ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಸಮಿತಿಯಿಂದ ಯೋಗ್ಯವಾದ ಅವಕಾಶವನ್ನು ಕೊಟ್ಟಿರುವಾಗ, ಅವನು ಅಂಥ ಭದ್ರತೆಯನ್ನು ಒದಗಿಸಲು ಅಥವಾ ಸಾಲದ ಅಂಥ ಭಾಗವನ್ನು ಮರುಸಂದಾಯ ಮಾಡಲು ತಪ್ಪಿದರೆ, ಪೂರ್ತಿ ಸಾಲವು ಕೂಡಲೇ ಸಲ್ಲತಕ್ಕದ್ದಾಗಿ ಇರುತ್ತದೆಂದು ಭಾವಿಸಲ್ಪಡತಕ್ಕುದು ಮತ್ತು ಅದರ ವಸೂಲಿಯ ಸಲುವಾಗಿ 88ನೇ ಪ್ರಕರಣದ ಅಥವಾ 89ನೇ ಪ್ರಕರಣದ ಮೇರೆಗೆ ಅಡಮಾನಕಾರನ ವಿರುದ್ಧ ಕ್ರಮ ಕೈಕೊಳ್ಳಲು ಸಮಿತಿಗೆ ಹಕ್ಕು ಇರತಕ್ಕುದು.

**ವಿವರಣೆ:-** ಈ ಪ್ರಕರಣದ ಅರ್ಥವ್ಯಾಪ್ತಿಯಲ್ಲಿ, ಅಡಮಾನಮಾಡಿದ ಸ್ವತ್ತಿನ ಮೌಲ್ಯವು ಅಡಮಾನದ ಮೇಲೆ ತತ್ಕಾಲದಲ್ಲಿ ಬಾಕಿ ಇರುವ ಮೊಬಲಗಿಗಿಂತ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಉಪವಿಧಿಗಳಲ್ಲಿ ಉಲ್ಲೇಖಿಸಬಹುದಾದ ದಾಮಾಷಾದಲ್ಲಿ ಹೆಚ್ಚಾಗಿರದಿದ್ದರೆ ಸಾಕಷ್ಟಾಗುವುದಿಲ್ಲ.

**91. ಸ್ವತ್ತಿನ ಜಪ್ತಿ ಮತ್ತು ಮಾರಾಟ ಮೊದಲಾದುವುಗಳನ್ನು ಮಾಡಲು ಮಂಡಲಿಯ ಅಥವಾ ನ್ಯಾಸಧಾರಿಯ ಅಧಿಕಾರ:-** (1) 88ನೆಯ ಪ್ರಕರಣದ, 89ನೆಯ ಪ್ರಕರಣದ ಅಥವಾ 90ನೆಯ ಪ್ರಕರಣದ ಮೇರೆಗೆ ಬಾಕಿದಾರನ ವಿರುದ್ಧಕ್ರಮಕೈಕೊಳ್ಳಲು ಮಂಡಲಿಯು ಅಥವಾ ನ್ಯಾಸಧಾರಿಯು [1][ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಸಮಿತಿಗೆ ನಿರ್ದೇಶಿಸಬಹುದು ಮತ್ತು ಆ ಸಮಿತಿಯು ಹಾಗೆ ಮಾಡಲು ಅಲಕ್ಷಿಸಿದರೆ ಅಥವಾ ತಪ್ಪಿದರೆ, ಮಂಡಲಿಯು ಅಥವಾ ನ್ಯಾಸಧಾರಿಯು ಅಂಥ ಕ್ರಮ ಕೈಕೊಳ್ಳಬಹುದು.

(2) (ಎ) ಮಂಡಲಿಯು ಅಂಥ ಕ್ರಮವನ್ನು ಕೈಕೊಂಡಿರುವಲ್ಲಿ ಈ ಅಧ್ಯಾಯದ ಮತ್ತು ಈ ಬಗ್ಗೆ ಮಾಡಲಾದ ಯಾವುವೇ ನಿಯಮಗಳ ಅಥವಾ ವಿನಿಯಮಗಳ ಉಪಬಂಧಗಳು, ಆ ಉಪಬಂಧದಲ್ಲಿ [1][ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][1] ಅಥವಾ ಅದರ ಸಮಿತಿಗೆ ಮಾಡಲಾದ ಎಲ್ಲಾ ಉಲ್ಲೇಖಗಳು ಅನುಕ್ರಮವಾಗಿ [1][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][1] ಮತ್ತು ಮಂಡಲಿಗೆ ಮಾಡಲಾದ ಉಲ್ಲೇಖಗಳಾಗಿದ್ದರೆ ಹೇಗೋ ಹಾಗೆ ಅನ್ವಯಿಸತಕ್ಕುದು.

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಬಿ) ಅಂಥ ಕ್ರಮವನ್ನು ನ್ಯಾಸಧಾರಿಯು ಕೈಕೊಂಡಿರುವಲ್ಲಿ, ಆ ಬಗ್ಗೆ ಈ ಅಧಿನಿಯಮದ ಮತ್ತು ಇದರ ಮೇರೆಗೆ ಮಾಡಲಾದ ಯಾವುವೇ ನಿಯಮಗಳ ಅಥವಾ ವಿನಿಯಮಗಳ ಉಪಬಂಧಗಳು, ಆ ಉಪಬಂಧಗಳಲ್ಲಿ ಅಡಮಾನ ಬ್ಯಾಂಕಿನ ಅಥವಾ ಅದರ ಸಮಿತಿಗೆ ಮಾಡಲಾದ ಎಲ್ಲ ಉಲ್ಲೇಖಗಳು ನ್ಯಾಸಧಾರಿಗೆ ಮಾಡಲಾದ ಉಲ್ಲೇಖಗಳಾಗಿದ್ದರೆ ಹೇಗೋ ಹಾಗೆ ಅನ್ವಯಿಸತಕ್ಕುದು.

**92. ಅಕ್ರಮ, ಮೊದಲಾದವುಗಳ ಕಾರಣದ ಮೇಲೆ ಖರೀದಿದಾರನ ಹಕ್ಕನ್ನು ಪ್ರಶ್ನಿಸತಕ್ಕುದಲ್ಲ:-** 89ನೇ ಪ್ರಕರಣದ ಮೇರೆಗೆ ಮಾರಾಟದ ಅಧಿಕಾರವನ್ನು ಚಲಾಯಿಸಿ ಅಥವಾ ಚಲಾಯಿಸಿದಂತೆ ಭಾವಿಸುವ ಹಾಗೆ ಯಾವುದೇ ಸ್ವತ್ತು ಮಾರಲ್ಪಟ್ಟಿರುವಲ್ಲಿ, ಖರೀದಿದಾರನ ಹಕ್ಕನ್ನು,-

(ಎ) ಮಾರಾಟವನ್ನು ಅಧಿಕೃತಗೊಳಿಸಲು ಅಗತ್ಯವಾದ ವಿದ್ಯಮಾನಗಳು ಉದ್ಭವಿಸಿರಲಿಲ್ಲವೆಂಬ; ಅಥವಾ

(ಬಿ) ಮಾರಾಟದ ಅಧಿಕಾರವನ್ನು ಅನ್ಯಥಾ ಅನುಚಿತವಾಗಿ ಅಥವಾ ಅಕ್ರಮವಾಗಿ ಚಲಾಯಿಸಲಾಯಿತೆಂಬ

- ಕಾರಣದ ಮೇಲೆ ಪ್ರಶ್ನಿಸತಕ್ಕುದಲ್ಲ;

ಆದರೆ ಅಂಥ ಯಾವುದೇ ಅಧಿಕಾರವನ್ನು ಅನಧಿಕೃತವಾಗಿ, ಅನುಚಿತವಾದ ಅಥವಾ ಅಕ್ರಮವಾದ ಚಲಾವಣೆಯಿಂದಾದ ಯಾವುದೇ ನಷ್ಟವನ್ನು ಅನುಭವಿಸಿರುವ ಯಾವನೇ ವ್ಯಕ್ತಿಯು, [1][ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ವಿರುದ್ಧ ನಷ್ಟದ ಬಗ್ಗೆ ಪರಿಹಾರ ಪಡೆಯಲು ಅವಕಾಶವಿರತಕ್ಕುದು.

**93. ಅಡಮಾನದಾರನ ದಿವಾಳಿಯಿಂದಾಗಿ ಅಡಮಾನವು ಪ್ರಶ್ನಿಸತಕ್ಕುದಲ್ಲ:-** ದಿವಾಳಿಗೆ ಸಂಬಂಧಿಸಿದ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, [1][ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಹೆಸರಿನಲ್ಲಿ ಬರೆದುಕೊಡಲಾದ ಅಡಮಾನವನ್ನು ಮೌಲ್ಯಯುಕ್ತವಾದ ಪ್ರತಿಫಲದ ಸಲುವಾಗಿ ಸದುದ್ದೇಶದಿಂದ ಬರೆದು ಕೊಟ್ಟಿರಲಿಲ್ಲವೆಂಬ ಕಾರಣದ ಮೇಲೆ ಅಥವಾ ಅಡಮಾನಕಾರನ ಇತರ ಲೇಣೇದಾರರ ಮೇಲೆ [1][ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][1] ಪ್ರಾಶಸ್ತ್ಯ ಕೊಡುವ ದೃಷ್ಟಿಯಿಂದ ಬರೆದುಕೊಡಲಾಗಿತ್ತೆಂಬ ಕಾರಣದ ಮೇಲೆ ಪ್ರಶ್ನಿಸತಕ್ಕುದಲ್ಲ.

**94. ರಿಸೀವರನ ನಿಯುಕ್ತಿ ಮತ್ತು ಅಧಿಕಾರಗಳು:-** (1) [1][ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][1] ಅರ್ಜಿಯ ಮೇಲೆ ಮತ್ತು 89ನೇ ಪ್ರಕರಣದಿಂದ ಪ್ರದತ್ತವಾದ ಮಾರಾಟ ಅಧಿಕಾರಗಳನ್ನು ಯಾವ ವಿದ್ಯಮಾನಗಳಲ್ಲಿ ಚಲಾಯಿಸಲ್ಪಡಬಹುದೋ ಆ ವಿದ್ಯಮಾನಗಳಲ್ಲಿ, ಅಡಮಾನದ ಸ್ವತ್ತಿನ ಅಥವಾ ಅವುಗಳ ಯಾವುದೇ ಭಾಗದ ಉತ್ಪನ್ನದ ಮತ್ತು ಆದಾಯದ ಬಗ್ಗೆ ರಿಸೀವರನನ್ನು ಮಂಡಲಿಯು ಲಿಖಿತದ ಆದೇಶದ ಮೂಲಕ ನೇಮಿಸಬಹುದು ಮತ್ತು ಅಂಥ ರಿಸೀವರನು, ಸಂದರ್ಭಾನುಸಾರ, ಸ್ವತ್ತಿನ ಸ್ವಾಧೀನವನ್ನು ತೆಗೆದುಕೊಳ್ಳಲು ಅದರ ಉತ್ಪನ್ನವನ್ನು ಅಥವಾ ಆದಾಯವನ್ನು ವಸೂಲು ಮಾಡಲು, ತಾನು ವಸೂಲು ಮಾಡಿದ ಯಾವುದೇ ಹಣದಿಂದ ತನ್ನ ವ್ಯವಸ್ಥಾಪನೆಯ ಖರ್ಚುಗಳನ್ನು ಮತ್ತು ಮಂಡಲಿಯಿಂದ ತನಗೆ ಯಾವುದಾದರೂ ಪರಿಶ್ರಮಧನ ನಿಗದಿಯಾಗಿದ್ದು ಅದನ್ನು ಸೇರಿಸಿ ತಾನು ಇಟ್ಟುಕೊಳ್ಳಲು ಮತ್ತು ಉಳಿದಿದ್ದನ್ನು ಸ್ವತ್ತಿನ ವರ್ಗಾವಣೆ ಅಧಿನಿಯಮ, 1882ರ (1882ರ ಕೇಂದ್ರ ಅಧಿನಿಯಮ IV) 69ಎ ಪ್ರಕರಣದ (8)ನೇ ಉಪಪ್ರಕರಣದ ಉಪಬಂಧಗಳ ಅನುಸಾರ ಉಪಯೋಗಿಸಲು ಹಕ್ಕುಳ್ಳವನಾಗಿರತಕ್ಕುದು.

(2) (1)ನೆಯ ಉಪಪ್ರಕರಣದ ಮೇರೆಗೆ ನೇಮಿಸಲ್ಪಟ್ಟ ರಿಸೀವರನನ್ನು ಸಾಕಷ್ಟು ಕಾರಣವಿದ್ದಲ್ಲಿ ಮತ್ತು ಅಡಮಾನದಾರನಿಂದ ಮಾಡಲಾದ ಅರ್ಜಿಯ ಮೇಲೆ ಅವನನ್ನು ಮಂಡಲಿಯು ತೆಗೆದುಹಾಕಬಹುದು.

(3) ರಿಸೀವರನ ಪದವು ಖಾಲಿಯಾದಲ್ಲಿ ಅದನ್ನು ಮಂಡಲಿಯು ತುಂಬಬಹುದು.

(4) ಅಡಮಾನದ ಸ್ವತ್ತು, ಸಿವಿಲ್ ನ್ಯಾಯಾಲಯದಿಂದ ನೇಮಿಸಲ್ಪಟ್ಟ ರಿಸೀವರನ ಸ್ವಾಧೀನದಲ್ಲಿ ಈಗಾಗಲೇ ಇದ್ದಲ್ಲಿ, ಈ ಪ್ರಕರಣದಲ್ಲಿರುವುದು ಯಾವುದೂ, ರಿಸೀವರನನ್ನು ನೇಮಿಸುವ ಅಧಿಕಾರವನ್ನು ಮಂಡಲಿಗೆ ಕೊಡತಕ್ಕುದಲ್ಲ.

**95. ಗುತ್ತಿಗೆಗೆ ಕೊಡಲು ಅಡಮಾನದಾರನ ಅಧಿಕಾರಗಳು:-** (1) ಸ್ವತ್ತು ವರ್ಗಾವಣೆ ಅಧಿನಿಯಮ, 1882ರಲ್ಲಿ (1882ರ ಕೇಂದ್ರಾಧಿನಿಯಮ IV) ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಅಡಮಾನದಾರನು ಐದು ವರ್ಷಗಳಿಗೆ ಮೀರುವ ಅವಧಿಗಾಗಿ ಅಡಮಾನದ ಸ್ವತ್ತನ್ನು ಗುತ್ತಿಗೆಗೆ ಕೊಡತಕ್ಕುದಲ್ಲ.

(2) (1)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ನೀಡಲಾದ ಯಾವುದೇ ಗುತ್ತಿಗೆಯು ಶೂನ್ಯವಾಗಿರತಕ್ಕುದು.

**96. ಮಂಡಲಿಯು ಕೆಲವೊಂದು ಅಧಿಕಾರಗಳನ್ನು ಪ್ರತ್ಯಾಯೋಜಿಸುವುದು:-** ಮಂಡಲಿಯು, ತಾನು ಸೂಕ್ತವೆಂದು ಭಾವಿಸಿದರೆ, 89,91 ಮತ್ತು 94 ಈ ಪ್ರಕರಣಗಳ ಮೇರೆಗಿನ ತನ್ನ ಎಲ್ಲ ಅಧಿಕಾರಗಳನ್ನು ಅಥವಾ ಅವುಗಳಲ್ಲಿ ಯಾವುವೇ ಅಧಿಕಾರಗಳನ್ನು ತಾನು ರಚಿಸಿದ, ಮತ್ತು ತನ್ನ ಸದಸ್ಯರಲ್ಲಿ ಇಬ್ಬರು ಅಥವಾ ಹೆಚ್ಚು ಜನ ಸದಸ್ಯರನ್ನೊಳಗೊಂಡ ಕಾರ್ಯನಿರ್ವಾಹಕ ಸಮಿತಿಗೆ ಪ್ರತ್ಯಾಯೋಜಿಸಬಹುದು.

**97. ಸ್ವತ್ತು ವರ್ಗಾವಣೆ ಅಧಿನಿಯಮ, 1882ರ 102, 103 ಮತ್ತು 104ನೇ ಪ್ರಕರಣಗಳು ಈ ಅಧ್ಯಾಯದ ಮೇರೆಗಿನ ನೋಟೀಸುಗಳಿಗೆ ಅನ್ವಯವಾಗುವುದು:-** (1) ಸ್ವತ್ತು ವರ್ಗಾವಣೆ ಅಧಿನಿಯಮ, 1882ರಲ್ಲಿ (1882ರ ಕೇಂದ್ರ ಅಧಿನಿಯಮ IV) 102

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಮತ್ತು 103ನೇ ಪ್ರಕರಣಗಳ ಮತ್ತು ಸದರಿ ಪ್ರಕರಣಗಳ ಉದ್ದೇಶಗಳನ್ನು ಈಡೇರಿಸಲು ಆ ಅಧಿನಿಯಮದ 104ನೇ ಪ್ರಕರಣದ ಮೇರೆಗೆ ಉಚ್ಚ ನ್ಯಾಯಾಲಯವು ರಚಿಸಿದ ಯಾವುವೇ ನಿಯಮಗಳ ಉಪಬಂಧಗಳು, ಈ ಅಧ್ಯಾಯದ ಮೇರೆಗೆ ಜಾರಿ ಮಾಡಬೇಕಾದ ಎಲ್ಲ ನೋಟೀಸುಗಳಿಗೆ ಸಂಬಂಧಿಸಿ ಸಾಧ್ಯವಾದಷ್ಟು ಮಟ್ಟಿಗೆ ಅನ್ವಯವಾಗತಕ್ಕುದು.

[1][**98.** [2][**ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳ**][2] **ಮೇಲ್ವಿಚಾರಣೆ ಮಾಡಲು ಮತ್ತು ವಿನಿಯಮಗಳನ್ನು ರಚಿಸಲು** [2][**ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ**][2] [3][**ಮಂಡಲಿಗೆ**][3] **ಅಧಿಕಾರ:-** [2][ರಾಜ್ಯದ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ][2] [3][ಮಂಡಲಿಯು][3] [2][ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳ][2] ಮೇಲ್ವಿಚಾರಣೆಯ ಸಾಮಾನ್ಯ ಅಧಿಕಾರವನ್ನು ಹೊಂದಿರತಕ್ಕುದು ಮತ್ತು ರಾಜ್ಯಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ, ಈ ಕೆಳಕಂಡ ಎಲ್ಲ ಅಥವಾ ಯಾವುವೇ ವಿಷಯಗಳಿಗಾಗಿ, ಈ ಅಧಿನಿಯಮಕ್ಕೆ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅಸಂಗತವಾಗದಂಥ ವಿನಿಯಮಗಳನ್ನು ರಚಿಸಬಹುದು, ಎಂದರೆ -

(ಎ) [2][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳ][2] ಲೆಕ್ಕದ ಪುಸ್ತಕಗಳನ್ನು ಮತ್ತು ವ್ಯವಹರಣೆಗಳನ್ನು ಪರಿಶೀಲಿಸುವುದು;

(ಬಿ) ಅಂಥ ಬ್ಯಾಂಕುಗಳು ತಮ್ಮ ವ್ಯವಹಾರಗಳ ಸಂಬಂಧದಲ್ಲಿ ವಿವರ ಪಟ್ಟಿಕೆಗಳನ್ನು ಮತ್ತು ವರದಿಗಳನ್ನು ಸಲ್ಲಿಸುವುದು;

(ಸಿ) ಅಂಥ ಬ್ಯಾಂಕುಗಳು [2][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ][2] ವರ್ಗಾಯಿಸಿದ ಅಡಮಾನಗಳ ಮೇಲೆ ವಸೂಲು ಮಾಡಿದ ಮೊಬಲಗುಗಳ ಸಂದಾಯಕ್ಕೆ ಸಂಬಂಧಿಸಿದ ಲೆಕ್ಕಗಳಾಗಿರುವ ಅಂಥ ಬ್ಯಾಂಕುಗಳ ಮತ್ತು [2][ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][2] ಇವುಗಳ ನಡುವಣ ಲೆಕ್ಕಗಳ ನಿಯತಕಾಲಿಕ ಇತ್ಯರ್ಥ;

(ಡಿ) ಸಾಲಗಳಿಗಾಗಿ ಅಂಥ ಬ್ಯಾಂಕುಗಳಿಗೆ ಸಲ್ಲಿಸತಕ್ಕ ಅರ್ಜಿಗಳ ನಮೂನೆ ಮತ್ತು ಅಂಥ ಸಾಲಗಳಿಗಾಗಿ ಭದ್ರತೆಯಾಗಿ ಒದಗಿಸಿದ ಸ್ವತ್ತುಗಳ ಮೌಲ್ಯಮಾಪನ;

(ಇ) ಅಡಮಾನಕಾರರಿಂದ ವಸೂಲು ಮಾಡಿದ ಹಣಗಳ ಹೂಡಿಕೆ;

(ಎಫ್) ಅಂಥ ಬ್ಯಾಂಕುಗಳ ನೌಕರರ ಸೇವಾ ಷರತ್ತುಗಳು;

(ಜಿ) ಅಂಥ ಬ್ಯಾಂಕುಗಳು ಸಾಲಗಳನ್ನು ನೀಡುವಲ್ಲಿ ಅನುಸರಿಸಬೇಕಾದ ಕಾರ್ಯಕ್ರಮ ಮತ್ತು ಕಾರ್ಯನೀತಿ;

(ಹೆಚ್) ಅಂಥ ಬ್ಯಾಂಕುಗಳು ಸಾಲಗಳನ್ನು ನೀಡಲು ಪಡೆದುಕೊಳ್ಳಬೇಕಾದ ಭದ್ರತೆಯ ಮಾದರಿಗಳು ಮತ್ತು ವ್ಯಾಪ್ತಿ;

(ಐ) ಸಾಮಾನ್ಯವಾಗಿ ಪಕ್ಷಕಾರರ ಹಿತಾಸಕ್ತಿಗಳನ್ನು ಸಂರಕ್ಷಿಸುವ ಉದ್ದೇಶಕ್ಕಾಗಿ ಅಂಥ ಬ್ಯಾಂಕುಗಳ ಕಾರ್ಯಚಟುವಟಿಕೆಗಳ ವಿಸ್ತರಣೆ ಮತ್ತು ಈ ಅಧ್ಯಾಯದ ಉದ್ದೇಶಗಳ ನೆರವೇರಿಕೆ.][1]

## ಅಧ್ಯಾಯ - XII

## ಐತೀರ್ಪುಗಳು, ಡಿಕ್ರಿಗಳು, ಆದೇಶಗಳು ಮತ್ತು ತೀರ್ಮಾನಗಳ ಅಮಲ್ಜಾರಿ

**99. ಭಾರದ ಅಮಲ್ಜಾರಿ:-** IXನೇ ಅಧ್ಯಾಯದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಆದರೆ ಈ ಅಧಿನಿಯಮದಲ್ಲಿ ಉಪಬಂಧಿಸಲಾದ ವಸೂಲಿಯ ಇತರ ಯಾವುದೇ ವಿಧಾನಕ್ಕೆ ಪ್ರತಿಕೂಲವಾಗದಂತೆ, ರಿಜಿಸ್ಟ್ರಾರನು ಅಥವಾ ಈ ಬಗ್ಗೆ ರಿಜಿಸ್ಟ್ರಾರನು ಸಮರ್ಥಗೊಳಿಸಿದ ಅವನ ಅಧೀನನಾಗಿರುವ ಯಾರೇ ವ್ಯಕ್ತಿಯು, ಸಹಕಾರ ಸಂಘವು ಅರ್ಜಿ ಸಲ್ಲಿಸಿದ ಮೇಲೆ, ಯಾರೇ ಸದಸ್ಯನಿಂದ ಅಥವಾ ಹಿಂದಿನ ಅಥವಾ ಮೃತ ಸದಸ್ಯನಿಂದ ಸಂಘಕ್ಕೆ ಬಾಕಿಯಾದ ಯಾವುದೇ ಋಣವನ್ನು ಅಥವಾ ಬಾಕಿ ತಗಾದೆಯನ್ನು 32ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಭಾರಕ್ಕೆ ಒಳಪಟ್ಟ ಸ್ವತ್ತನ್ನು ಮಾರಾಟ ಮಾಡುವ ಮೂಲಕ ಸಂದಾಯ ಮಾಡಬೇಕೆಂದು ನಿರ್ದೇಶಿಸುವ ಆದೇಶವನ್ನು ಮಾಡಬಹುದು:

ಪರಂತು, ಈ ಪ್ರಕರಣದ ಮೇರೆಗೆ ಯಾವುದೇ ಆದೇಶವನ್ನು, ಅರ್ಜಿಯ ನೋಟೀಸನ್ನು ಸದಸ್ಯನಿಗೆ, ಹಿಂದಿನ ಸದಸ್ಯನಿಗೆ ಅಥವಾ ಮೃತ ಸದಸ್ಯನ ನಾಮನಿರ್ದೇಶಿತನಿಗೆ, ವಾರಸುದಾರನಿಗೆ ಅಥವಾ ಕಾನೂನು ಸಮ್ಮತ ಪ್ರತಿನಿಧಿಗೆ ಜಾರಿ ಮಾಡಲಾಗಿದ್ದು, ಅಂಥ ಜಾರಿಯ ದಿನಾಂಕದಿಂದ ಏಳು ದಿನಗಳೊಳಗೆ ಆ ಋಣವನ್ನು ಅಥವಾ ಬಾಕಿ ತಗಾದೆಯನ್ನು ಸಂದಾಯಮಾಡಲು ತಪ್ಪಿದ ಹೊರತು, ಮಾಡತಕ್ಕುದಲ್ಲ.

**100. ಸಂಘಗಳಿಗೆ ಬಾಕಿ ಇರುವ ಹಣಗಳ ವಸೂಲಿ:-** 9ನೇ ಅಧ್ಯಾಯದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಬೆಳೆಗಳಿಗೆ ಹಣ ಒದಗಿಸಿದ ಅಥವಾ ಹಂಗಾಮು ನಿಮಿತ್ತ ಹಣ ಒದಗಿಸಿದ ಕಾರಣಕ್ಕಾಗಿ ಸಂಘವು ತನ್ನ ಸದಸ್ಯರಲ್ಲಿ ಯಾರೊಬ್ಬರಿಗೆ ಮುಂಗಡವಾಗಿ ಕೊಟ್ಟ ಯಾವುದೇ ಮೊತ್ತದ ಬಾಕಿಗಳ ವಸೂಲಿ ಕೋರಿ ಅನುಮೋದಿತ ಸಂಘವು ಅರ್ಜಿ ಸಲ್ಲಿಸಿದ ಮೇಲೆ ಮತ್ತು ಅದು ಬಾಕಿಗಳ ಬಗ್ಗೆ ಲೆಕ್ಕಗಳ ತಃಖ್ತೆಯನ್ನು ಒದಗಿಸಿದ ಮೇಲೆ ರಿಜಿಸ್ಟ್ರಾರನು ನಿಯಮಿಸಬಹುದಾದಂಥ

1. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ರೀತಿಯಲ್ಲಿ ವಿಚಾರಣೆ ಮಾಡಿದ ತರುವಾಯ, ಬಾಕಿಯಾಗಿರುವುದಾಗಿ ಅದರಲ್ಲಿ ಹೇಳಲಾದ ಮೊಬಲಗಿನ ವಸೂಲಿಯ ಸಲುವಾಗಿ ಪ್ರಮಾಣಪತ್ರವನ್ನು ನೀಡಬಹುದು:

ಪರಂತು, ಯಾರೇ ವ್ಯಕ್ತಿಯಿಂದ ಸಂಘಕ್ಕೆ ಬಾಕಿ ಇರುವ ಮೊಬಲಗಿನ ನಿರ್ಧರಣೆಯು, ಸಂಗತಿಯ ಅಥವಾ ಕಾನೂನಿನ ತೊಡಕಿನ ಪ್ರಶ್ನೆಗಳ ತೀರ್ಮಾನವನ್ನು ಅವಲಂಬಿಸಿದ್ದರೆ, ರಿಜಿಸ್ಟ್ರಾರನು ಅದನ್ನು 70ನೇ ಪ್ರಕರಣದ ಮೇರೆಗೆ ತೀರ್ಮಾನಕ್ಕಾಗಿ ತನಗೆ ಉಲ್ಲೇಖಿಸಿದ ಠೇವಣಿಯಾಗಿದ್ದರೆ ಹೇಗೋ ಹಾಗೆ 71ನೇ ಪ್ರಕರಣದ ಉಪಬಂಧಗಳ ಮೇರೆಗೆ ಆ ಪ್ರಕರಣವನ್ನು ವಿಲೆ ಮಾಡತಕ್ಕುದು.

(2) (1) ನೇ ಉಪಪ್ರಕರಣದ ಮೇರೆಗೆ ರಿಜಿಸ್ಟ್ರಾರನು ನೀಡಿದ ಪ್ರಮಾಣ ಪತ್ರವು ಅಂತಿಮ ಮತ್ತು ನಿರ್ಣಾಯಕವಾಗಿರತಕ್ಕುದು. ಬಾಕಿಯಾಗಿರುವುದಾಗಿ ಅದರಲ್ಲಿ ಹೇಳಲಾದ ಬಾಕಿಗಳು ಭೂ ಕಂದಾಯದ ಬಾಕಿಗಳಂತೆ ಅಥವಾ 101ನೇ ಪ್ರಕರಣದಲ್ಲಿ ಉಪಬಂಧಿಸಿದ ಪ್ರಕ್ರಿಯೆಗೆ ಅನುಸಾರವಾಗಿ ವಸೂಲೀಯವಾಗಿರತಕ್ಕುದು:

ಪರಂತು, ರಿಜಿಸ್ಟ್ರಾರನು ತಾನಾಗಿಯೇ ಅಥವಾ ಸಂಘವು ಅಥವಾ ಆ ಪ್ರಮಾಣ ಪತ್ರದಿಂದ ಬಾಧಿತನಾದ ಸದಸ್ಯನು ಅರ್ಜಿ ಸಲ್ಲಿಸಿದ ಮೇಲೆ ಅಂಥ ಪ್ರಮಾಣಪತ್ರದಲ್ಲಿನ ಯಾವುದೇ ತಪ್ಪನ್ನು ಸರಿಪಡಿಸಬಹುದು.

(3) ಡೆಪ್ಯುಟಿ ಕಮಿಷನರನು, ಸಂಘಕ್ಕೆ ಸಲ್ಲತಕ್ಕ ಬಾಕಿಗಳನ್ನು, ಬಡ್ಡಿಯ ಮತ್ತು ಅಂಥ ಬಾಕಿಗಳ ವಸೂಲಿಗಾಗಿ ವಹಿಸಿದ ಯಾವುದೇ ಆನುಷಂಗಿಕ ಚಾರ್ಜುಗಳ ಸಹಿತ ಸಂದಾಯ ಮಾಡುವವರೆಗೆ ಅಥವಾ ಅಂಥ ಬಾಕಿಗಳ ಸಂದಾಯಕ್ಕಾಗಿ ರಿಜಿಸ್ಟ್ರಾರನಿಗೆ ಮನದಟ್ಟಾಗುವ ಭದ್ರತೆಯನ್ನು ಒದಗಿಸುವವರೆಗೆ, [1][ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ 1888ನೇ ಪ್ರಕರಣದ][1] ಮೂಲಕ ಅಧಿಕೃತಗೊಳಿಸಿದ ಮುನ್ನೆಚ್ಚರಿಕೆ ಕ್ರಮಗಳನ್ನು ಕೈಗೊಳ್ಳುವುದು ಕಾನೂನುಸಮ್ಮತವಾಗಿರತಕ್ಕುದು.

**ವಿವರಣೆ:-** ಈ ಪ್ರಕರಣದ ಉದ್ದೇಶಕ್ಕಾಗಿ,-

(i) "ಅನುಮೋದಿತ ಸಂಘ" ಎಂದರೆ ಈ ಪ್ರಕರಣದ ಉದ್ದೇಶಗಳಿಗಾಗಿ ನಿಯಮಗಳ ಮೂಲಕ ಅನುಮೋದಿತ ಸಂಘಗಳೆಂದು ಘೋಷಿಸಲಾದ ಸಂಘ ಅಥವಾ ಸಂಘಗಳ ಅಂಥ ವರ್ಗ;

(ii) "ಬೆಳೆಗಳಿಗೆ ಹಣ ಒದಗಿಸುವುದು" ಎಂದರೆ ಉಳುವ ಹಂಗಾಮಿನಲ್ಲಿ ಬೆಳೆ ತೆಗೆಯಲು ಅಥವಾ ಆ ತರುವಾಯ ಉಳಲು, ಕಳೆ ಕೀಳಲು, ಕುಯಿಲು ಮಾಡಲು, ಬೀಜಗಳು ಮತ್ತು ಗೊಬ್ಬರ ಖರೀದಿ ಮಾಡಲು ಅಥವಾ ರಿಜಿಸ್ಟ್ರಾರನು ನಿಯಮಿಸಬಹುದಾದಂಥ ಇತರ ಉದ್ದೇಶಗಳಿಗೆ ಕೊಡಲಾಗುವ ಮತ್ತು ಯಾವ ಬೆಳೆಗಳ ಸಲುವಾಗಿ ಸಾಲ ನೀಡಲಾಗಿದೆಯೋ ಆ ಬೆಳೆಗಳ ಸುಗ್ಗಿಯ ಹಂಗಾಮಿನಲ್ಲಿ ಮರುಸಂದಾಯವಾಗತಕ್ಕಂಥ ಸಾಲಗಳ ನೀಡಿಕೆ;

(iii) "ಹಂಗಾಮು ನಿಮಿತ್ತ ಹಣ ಒದಗಿಸುವುದು" ಎಂದರೆ ರಿಜಿಸ್ಟ್ರಾರನು ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಉದ್ದೇಶಗಳಿಗಾಗಿ ಕೊಡಲಾಗುವ ಮತ್ತು ಮಾರ್ಚ್ 31 ರಂದು ಅಥವಾ ಅದಕ್ಕೆ ಮುಂಚೆ ಅಥವಾ ರಿಜಿಸ್ಟ್ರಾರನು ಅಂಥವೇ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಂದು ಅಥವಾ ಅದಕ್ಕೆ ಮುಂಚೆ ಮರುಸಂದಾಯವಾಗಬೇಕಾದಂಥ ಸಾಲಗಳನ್ನು ನೀಡುವುದು.

**101. ಆದೇಶ, ಮುಂತಾದುವುಗಳ ಜಾರಿ :-** [2][(1)][2] 69ನೇ ಪ್ರಕರಣದ [3][(1)][3]ನೇ ಉಪಪ್ರಕರಣದ ಮೇರೆಗೆ ಅಥವಾ 99ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಪ್ರತಿಯೊಂದು ಆದೇಶವು, 71ನೇ ಪ್ರಕರಣದ ಮೇರೆಗೆ ಮಾಡಿದ ಪ್ರತಿಯೊಂದು ತೀರ್ಮಾನವು ಅಥವಾ ಐತೀರ್ಪು, 74ನೇ ಪ್ರಕರಣದ ಮೇರೆಗೆ ಸಮಾಪಕನು ಮಾಡಿದ ಪ್ರತಿಯೊಂದು ಆದೇಶವು, ಮತ್ತು 105 ಮತ್ತು 107ನೇ ಪ್ರಕರಣಗಳ ಮೇರೆಗೆ ನ್ಯಾಯಾಧಿಕರಣವು ಮಾಡಿದ ಪ್ರತಿಯೊಂದು ಆದೇಶವು ಮತ್ತು 106ನೇ ಅಥವಾ 108ನೇ ಪ್ರಕರಣದ ಮೇರೆಗೆ ಮಾಡಿದ ಪ್ರತಿಯೊಂದು ಆದೇಶವು ಈ ಅಧಿನಿಯಮದ ಇತರ ಯಾವುದೇ ಉಪಬಂಧಕ್ಕೆ ಒಳಪಟ್ಟು, ಆ ಆದೇಶವನ್ನು, ತೀರ್ಮಾನವನ್ನು ಅಥವಾ ಐತೀರ್ಪನ್ನು ಯಾವ ವ್ಯಕ್ತಿಯ ಅಥವಾ ಸಹಕಾರ ಸಂಘದ ವಿರುದ್ಧ ಪಡೆಯಲಾಗಿದೆಯೋ ಅಥವಾ ಮಾಡಲಾಗಿದೆಯೋ ಆ ವ್ಯಕ್ತಿಗೆ ಅಥವಾ ಸಂಘಕ್ಕೆ ಬಂಧನಕಾರಿಯಾಗಿರತಕ್ಕುದು ಮತ್ತು ಅದನ್ನು ಈಡೇರಿಸದಿದ್ದರೆ,-

(ಎ) ರಿಜಿಸ್ಟ್ರಾರನು ಅಥವಾ ಅವನು ಈ ಬಗ್ಗೆ ಅಧಿಕೃತಗೊಳಿಸಿದ ಯಾರೇ ವ್ಯಕ್ತಿಯು ಸಹಿ ಮಾಡಿದ ಪ್ರಮಾಣಪತ್ರಾನುಸಾರ ಅದನ್ನು ಸಿವಿಲ್ ನ್ಯಾಯಾಲಯದ ಡಿಕ್ರಿಯೆಂದು ಭಾವಿಸತಕ್ಕುದು ಮತ್ತು ಅದನ್ನು ನ್ಯಾಯಾಲಯದ ಡಿಕ್ರಿಯೆಂಬಂತೆ ಅದೇ ರೀತಿಯಲ್ಲಿ ಜಾರಿಮಾಡತಕ್ಕುದು; ಅಥವಾ

(ಬಿ) ಭೂ ಕಂದಾಯದ ಬಾಕಿಗಳನ್ನು ವಸೂಲು ಮಾಡಲು ಅದನ್ನು ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿಗೆ ಅನುಸಾರವಾಗಿ ಮತ್ತು ನಿಯಮಗಳ ಮೇರೆಗೆ ಜಾರಿಗೊಳಿಸತಕ್ಕುದು:

ಪರಂತು, ಅಂಥ ಯಾವುದೇ ಮೊತ್ತವನ್ನು ಅಂಥ ರೀತಿಯಲ್ಲಿ ವಸೂಲು ಮಾಡಲು ಅರ್ಜಿಯನ್ನು,-

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಪುನರಂಕಿತಗೊಳಿಸಲಾಗಿದೆ.
3. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ 20.1.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(i) ಡೆಪ್ಯುಟಿ ಕಮೀಷನರನಿಗೆ ಸಲ್ಲಿಸತಕ್ಕುದು ಮತ್ತು ರಿಜಿಸ್ಟ್ರಾರನು ಅಥವಾ ಅವನು ಈ ಬಗ್ಗೆ ಅಧಿಕೃತಗೊಳಿಸಿದ ಯಾರೇ ವ್ಯಕ್ತಿಯು ಸಹಿ ಮಾಡಿದ ಪ್ರಮಾಣ ಪತ್ರವನ್ನು ಅದಕ್ಕೆ ಲಗತ್ತಿಸತಕ್ಕುದು;

(ii) ಆ ಆದೇಶದಲ್ಲಿ, ತೀರ್ಮಾನದಲ್ಲಿ ಅಥವಾ ಐತೀರ್ಪಿನಲ್ಲಿ ನಿಗದಿಪಡಿಸಿದ ದಿನಾಂಕದಿಂದ ಮತ್ತು ಅಂಥ ಯಾವುದೇ ದಿನಾಂಕವನ್ನು ನಿಗದಿಪಡಿಸಿರದಿದ್ದರೆ ಸಂದರ್ಭಾನುಸಾರ, ಆ ಆದೇಶದ, ತೀರ್ಮಾನದ ಅಥವಾ ಐತೀರ್ಪಿನ ದಿನಾಂಕದಿಂದ ಹನ್ನೆರಡು ವರ್ಷಗಳೊಳಗೆ ಸಲ್ಲಿಸತಕ್ಕುದು; ಅಥವಾ

(ಸಿ) ಆ ಆದೇಶದ, ತೀರ್ಮಾನ ಅಥವಾ ಐತೀರ್ಪನ್ನು ಯಾವ ವ್ಯಕ್ತಿಯ ಅಥವಾ ಸಹಕಾರ ಸಂಘದ ವಿರುದ್ಧ ಪಡೆಯಲಾಗಿದೆಯೋ ಅಥವಾ ಮಾಡಲಾಗಿದೆಯೋ ಆ ವ್ಯಕ್ತಿಯ ಅಥವಾ ಸಂಘದ ಯಾವುದೇ ಸ್ವತ್ತಿನ ಜಪ್ತಿ ಮತ್ತು ಮಾರಾಟದ ಮೂಲಕ ಅಥವಾ ಜಪ್ತಿಯಿಲ್ಲದೆ ಮಾರಾಟದ ಮೂಲಕ, ರಿಜಿಸ್ಟ್ರಾರನು ಅಥವಾ ಅವನು ಈ ಬಗ್ಗೆ ಸಮರ್ಥಗೊಳಿಸಿದ ಇತರ ಯಾರೇ ಅಧೀನ ವ್ಯಕ್ತಿಯು ಜಾರಿಗೊಳಿಸತಕ್ಕುದು.

[1][(2) (ಎ) ಈ ಅಧಿನಿಯಮದಲ್ಲಿ ಏನೇ ಇದ್ದರೂ, (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಆದೇಶ, ತೀರ್ಮಾನ ಅಥವಾ ಐತೀರ್ಪಿನ ಜಾರಿ, ನಿರ್ವಹಣೆ ಅಥವಾ ತೀರಿಕೆಗೆ ಸಂಬಂಧಿಸಿದ ಅಥವಾ (1)ನೇ ಉಪಪ್ರಕರಣದ (ಸಿ) ಖಂಡದ ಅನುಸರಣೆಯಲ್ಲಿ ಅಂಥ ಆದೇಶ, ತೀರ್ಮಾನ ಅಥವಾ ಐತೀರ್ಪಿನ ಜಾರಿಯಲ್ಲಿ ನಡೆಸಿದ ಮಾರಾಟದ ಸ್ಥಿರೀಕರಣ ಅಥವಾ ತಳ್ಳಿಹಾಕುವಿಕೆಗೆ ಸಂಬಂಧಿಸಿದ ಅಥವಾ 103ನೇ ಪ್ರಕರಣದ ಮೇರೆಗೆ ಅಥವಾ ಸದರಿ (ಸಿ) ಖಂಡದ ಅನುಸರಣೆಯ ಜಾರಿಯಲ್ಲಿ ಮಾಡಲಾದ ಯಾವುದೇ ಸ್ವತ್ತಿನ ಜಪ್ತಿಗೆ ಸಲ್ಲಿಸಿದ ಯಾವುದೇ ಕ್ಲೇಮು ಅಥವಾ ಆಕ್ಷೇಪಣೆಗೆ ಸಂಬಂಧಿಸಿದ ಪ್ರತಿಯೊಂದು ಪ್ರಶ್ನೆಯನ್ನು, ರಿಜಿಸ್ಟ್ರಾರನು ಅಥವಾ ಸದರಿ (ಸಿ) ಖಂಡದ ಮೇರೆಗೆ ರಿಜಿಸ್ಟ್ರಾರನು ಶಕ್ತಗೊಳಿಸಿದ (ಈ ಪ್ರಕರಣದಲ್ಲಿ ಇನ್ನು ಮುಂದೆ ಅಧಿಕೃತ ವ್ಯಕ್ತಿ ಎಂದು ಕರೆಯಲಾಗುವ) ಅವನಿಗೆ ಅಧೀನನಾದ ಯಾವ ವ್ಯಕ್ತಿಯ ಮುಂದೆ ಅಂಥ ಪ್ರಶ್ನೆಯು ಉದ್ಭವಿಸುವುದೋ ಆ ಯಾರೇ ಇತರ ವ್ಯಕ್ತಿಯು ಆದೇಶದ ಮೂಲಕ ತೀರ್ಮಾನಿಸತಕ್ಕುದು.

(ಬಿ) (i) 103ನೇ ಪ್ರಕರಣದ ಮೇರೆಗೆ ಅಥವಾ (1)ನೇ ಉಪಪ್ರಕರಣದ (ಸಿ) ಖಂಡದ ಅನುಸರಣೆಯ ಜಾರಿಯಲ್ಲಿ ಯಾವುದೇ ಸ್ವತ್ತನ್ನು ಜಪ್ತಿ ಮಾಡಿರುವಲ್ಲಿ ಸದರಿ ಸ್ವತ್ತು ಅಂಥ ಜಪ್ತಿಗೆ ಒಳಪಡತಕ್ಕುದಲ್ಲ ಎಂಬ ಕಾರಣದ ಮೇಲೆ ಅಂಥ ಜಪ್ತಿಯ ವಿರುದ್ಧ ಯಾವುದೇ ಕ್ಲೇಮನ್ನು ಸಲ್ಲಿಸಿರುವಲ್ಲಿ ಅಥವಾ ಯಾವುದೇ ಆಕ್ಷೇಪಣೆ ಮಾಡಿರುವಲ್ಲಿ ರಿಜಿಸ್ಟ್ರಾರನು ಅಥವಾ ಅಧಿಕೃತ ವ್ಯಕ್ತಿಯು ಆ ಕ್ಲೇಮು ಅಥವಾ ಆಕ್ಷೇಪಣೆಯನ್ನು ತನಿಖೆ ಮಾಡಲು ಕ್ರಮ ಕೈಗೊಳ್ಳತಕ್ಕುದು:

ಪರಂತು, ರಿಜಿಸ್ಟ್ರಾರನು ಅಥವಾ ಅಧಿಕೃತ ವ್ಯಕ್ತಿಯು ಆ ಕ್ಲೇಮು ಅಥವಾ ಆಕ್ಷೇಪಣೆಯನ್ನು ಉದ್ದೇಶಪೂರ್ವಕವಾಗಿ ಅಥವಾ ಅನಾವಶ್ಯಕವಾಗಿ ವಿಳಂಬಿಸಲಾಯಿತೆಂದು ಪರಿಗಣಿಸಿದರೆ, ಅವನು ಅಂಥ ತನಿಖೆಯನ್ನು ನಿರಾಕರಿಸುವ ಆದೇಶವನ್ನು ಮಾಡತಕ್ಕುದು.

(ii) ಸದರಿ ತನಿಖೆಯ ತರುವಾಯ, ರಿಜಿಸ್ಟ್ರಾರನಿಗೆ ಅಥವಾ ಅಧಿಕೃತ ವ್ಯಕ್ತಿಗೆ ಆ ಕ್ಲೇಮು ಅಥವಾ ಆಕ್ಷೇಪಣೆಯಲ್ಲಿ ಹೇಳಲಾದ ಕಾರಣಗಳಿಗಾಗಿ ಅಂಥ ಸ್ವತ್ತು ಜಪ್ತಿಯ ದಿನಾಂಕದಂದು ಯಾವ ವ್ಯಕ್ತಿಯ ಅಥವಾ ಸಹಕಾರ ಸಂಘದ ವಿರುದ್ಧ ಆದೇಶ, ತೀರ್ಪು ಅಥವಾ ಐತೀರ್ಪನ್ನು ಪಡೆಯಲಾಯಿತೋ ಅಥವಾ ಮಾಡಲಾಯಿತೋ ಆ ವ್ಯಕ್ತಿ ಅಥವಾ ಸಹಕಾರ ಸಂಘದ (ಈ ಪ್ರಕರಣದಲ್ಲಿ ಇನ್ನುಮುಂದೆ ನಿರ್ಣೀತ ಋಣಿ ಎಂದು ಉಲ್ಲೇಖಿಸಲಾಗಿದೆ) ಅಥವಾ ನಿರ್ಣೀತ ಋಣಿಯ ನ್ಯಾಸವಾಗಿ ಯಾವೊಬ್ಬ ವ್ಯಕ್ತಿಯ ಸ್ವಾಧೀನದಲ್ಲಿ, ಅಥವಾ ನಿರ್ಣೀತ ಋಣಿಗೆ ಬಾಡಿಗೆ ಸಂದಾಯ ಮಾಡುತ್ತಿರುವ ಬಾಡಿಗೆದಾರ ಅಥವಾ ಇತರ ವ್ಯಕ್ತಿಯ ಅನುಭೋಗದಲ್ಲಿ ಇರಲಿಲ್ಲವೆಂದು ಅಥವಾ ಆ ದಿನಾಂಕದಂದು ನಿರ್ಣೀತ ಋಣಿಯ ಸ್ವಾಧೀನದಲ್ಲಿ ಇದ್ದರೂ ಅವನ ಸ್ವಂತ ಖಾತೆಯಲ್ಲಿ ಇಲ್ಲದೆಯೇ ಅಥವಾ ಅವನ ಸ್ವಂತ ಸ್ವತ್ತಾಗಿ ಇಲ್ಲದೆಯೇ ಆದರೆ ಇನ್ನೊಬ್ಬ ವ್ಯಕ್ತಿಯ ಖಾತೆಯಲ್ಲಿ ಅಥವಾ ನ್ಯಾಸದಲ್ಲಿ ಅಥವಾ ಭಾಗಶಃ ಅವನ ಖಾತೆಯಲ್ಲಿ ಮತ್ತು ಇನ್ನೊಬ್ಬ ವ್ಯಕ್ತಿಯ ಖಾತೆಯಲ್ಲಿ ಹಾಗೆ ಅವನ ಸ್ವಾಧೀನದಲ್ಲಿತ್ತೆಂದು ಮನದಟ್ಟಾದಲ್ಲಿ, ರಿಜಿಸ್ಟ್ರಾರನು ಅಥವಾ ಅಧಿಕೃತ ವ್ಯಕ್ತಿಯು ಜಪ್ತಿಯಿಂದ ಸ್ವತ್ತನ್ನು ಪೂರ್ಣವಾಗಿ ಅಥವಾ ತಾನು ಸೂಕ್ತವೆಂದು ಭಾವಿಸುವಷ್ಟರಮಟ್ಟಿಗೆ ಬಿಡುಗಡೆಗೊಳಿಸುವ ಆದೇಶವನ್ನು ಮಾಡತಕ್ಕುದು.

(iii) ರಿಜಿಸ್ಟ್ರಾರನಿಗೆ ಅಥವಾ ಅಧಿಕೃತ ವ್ಯಕ್ತಿಗೆ ಸದರಿ ದಿನಾಂಕದಂದು ಆ ಸ್ವತ್ತು ನಿರ್ಣೀತ ಋಣಿಯ ಸ್ವಾಧೀನದಲ್ಲಿ ಇದೆಯೆಂದು ಮತ್ತು ಯಾರೇ ಇತರ ವ್ಯಕ್ತಿಯ ಖಾತೆಯಲ್ಲಿಲ್ಲವೆಂದು ಅಥವಾ ಅವನಿಗೆ ಬಾಡಿಗೆ ಸಂದಾಯ ಮಾಡುತ್ತಿರುವ ಒಬ್ಬ ಬಾಡಿಗೆದಾರ ಅಥವಾ ಇತರ ವ್ಯಕ್ತಿಯ ಅನುಭೋಗದಲ್ಲಿ ಇದೆಯೆಂದು ಮನದಟ್ಟಾದರೆ, ರಿಜಿಸ್ಟ್ರಾರನು ಅಥವಾ ಅಧಿಕೃತ ವ್ಯಕ್ತಿಯು ಆ ಕ್ಲೇಮನ್ನು ತಳ್ಳಿಹಾಕತಕ್ಕುದು.

(iv) ಕ್ಲೇಮು ಅಥವಾ ಆಕ್ಷೇಪಣೆಯನ್ನು ಸಲ್ಲಿಸಿರುವಲ್ಲಿ, ಯಾವ ಪಕ್ಷಕಾರನ ವಿರುದ್ಧ ಆದೇಶವನ್ನು ಮಾಡಲಾಗಿದೆಯೋ ಆ ಪಕ್ಷಕಾರನು ಅಂಥ ಆದೇಶದ ದಿನಾಂಕದಿಂದ ಒಂದು ವರ್ಷದ ಅವಧಿಯೊಳಗೆ ವಿವಾದದ ಸ್ವತ್ತಿನಲ್ಲಿ ಅವನು ಕ್ಲೇಮುಮಾಡುವಂಥ ಹಕ್ಕನ್ನು ಸ್ಥಾಪಿಸಲು ಸಿವಿಲ್ ನ್ಯಾಯಾಲಯದಲ್ಲಿ ದಾವೆಯನ್ನು ಹೂಡಬಹುದು, ಆದರೆ ಅಂಥ ದಾವೆಯ ಫಲಿತಾಂಶ, ಯಾವುದಾದರೂ ಇದ್ದರೆ, ಅದಕ್ಕೆ ಒಳಪಟ್ಟು, ರಿಜಿಸ್ಟ್ರಾರನ ಅಥವಾ ಅಧಿಕೃತ ವ್ಯಕ್ತಿಯ ಆದೇಶವು ನಿರ್ಣಾಯಕವಾಗಿರತಕ್ಕುದು.][1]

1. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 1.6.1960 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**101ಎ. ಪ್ರಮಾಣಪತ್ರ ಕೊಟ್ಟ ತರುವಾಯ ಮಾಡಲಾದ ಸ್ವತ್ತಿನ ವರ್ಗಾವಣೆಯು ಸಹಕಾರ ಸಂಘದ ವಿರುದ್ಧ ಶೂನ್ಯವಾಗಿರುವುದು:-** 101ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಅಥವಾ ಅವನಿಂದ ಈ ಬಗ್ಗೆ ಅಧಿಕೃತನಾದ ಯಾರೇ ವ್ಯಕ್ತಿಯು ಪ್ರಮಾಣಪತ್ರ ನೀಡಿದ ತರುವಾಯ, ಸ್ವತ್ತಿನ ಯಾವುದೇ ಖಾಸಗಿ ವರ್ಗಾವಣೆ ಅಥವಾ ವಶಾವಣೆ ಅಥವಾ ಅದರ ಮೇಲೆ ನಿರ್ಮಿಸಲಾದ ಯಾವುದೇ ಋಣಭಾರ ಅಥವಾ ಭಾರವು, ಯಾವ ಸಹಕಾರ ಸಂಘದ ಅರ್ಜಿಯ ಮೇಲೆ ಪ್ರಮಾಣಪತ್ರ ನೀಡಲಾಯಿತೋ ಅದರ ವಿರುದ್ಧ ಶೂನ್ಯವಾಗಿರತಕ್ಕುದು.

**101ಬಿ. ಮಾರಾಟ ಮಾಡಲಾಗದ ಸ್ವತ್ತಿನ ವರ್ಗಾವಣೆ:-** (1) 101ನೇ ಪ್ರಕರಣದ ಮೇರೆಗೆ ಜಾರಿ ಕೋರಲಾದ ಆದೇಶದ ಯಾವುದೇ ಅಮಲ್ಜಾರಿಯಲ್ಲಿ, ಅಂಥ ಸ್ವತ್ತು ಸುಸ್ತಿದಾರನ ಅಥವಾ ಅವನ ಪರವಾಗಿ ಯಾವೊಬ್ಬ ವ್ಯಕ್ತಿಯ, ಅಥವಾ 101ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಅಥವಾ ಈ ಬಗ್ಗೆ ಅವನು ಅಧಿಕೃತಗೊಳಿಸಿದ ಯಾರೇ ವ್ಯಕ್ತಿಯು ಪ್ರಮಾಣಪತ್ರ ನೀಡಿದ ತರುವಾಯ, ಸುಸ್ತಿದಾರನು ನಿರ್ಮಿಸಿದ ಹಕ್ಕಿನ ಅಡಿಯಲ್ಲಿ ಕ್ಲೇಮು ಮಾಡುವ ವ್ಯಕ್ತಿಯ ಅಧಿಭೋಗದಲ್ಲಿದ್ದ ಕಾರಣದಿಂದಾಗಿ ಖರೀದಿದಾರರ ಅಭಾವದಿಂದ ಅಂಥ ಸ್ವತ್ತನ್ನು ಮಾರಾಟಮಾಡಲು ಸಾಧ್ಯವಾಗದಿದ್ದರೆ, ಸಂದರ್ಭಾನುಸಾರ, ನ್ಯಾಯಾಲಯ, ಡೆಪ್ಯುಟಿ ಕಮೀಷನರ್ ಅಥವಾ ರಿಜಿಸ್ಟ್ರಾರನು ತತ್ಕಾಲದಲ್ಲಿ ಜಾರಿಯಲ್ಲಿದ್ದ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಸದರಿ ಆದೇಶದ ಜಾರಿಗಾಗಿ ಯಾವ ಸಹಕಾರಸಂಘವು ಅರ್ಜಿ ಸಲ್ಲಿಸಿದೆಯೋ ಅದಕ್ಕೆ ಆ ಸ್ವತ್ತನ್ನು ಅಥವಾ ಅದರ ಯಾವುದೇ ಭಾಗವನ್ನು ನಿಯಮಿಸಲಾದ ರೀತಿಯಲ್ಲಿ ವರ್ಗಾಯಿಸತಕ್ಕದ್ದೆಂದು ನಿರ್ದೇಶಿಸಬಹುದು.

(2) ಸ್ವತ್ತನ್ನು (1)ನೇ ಉಪಪ್ರಕರಣದ ಮೇರೆಗೆ ಸಹಕಾರ ಸಂಘಕ್ಕೆ ವರ್ಗಾಯಿಸಿರುವಲ್ಲಿ ಅಥವಾ ಸ್ವತ್ತನ್ನು 101ನೇ ಪ್ರಕರಣದ ಮೇರೆಗೆ ಮಾರಾಟ ಮಾಡಿರುವಲ್ಲಿ, ಸಂದರ್ಭಾನುಸಾರ, ನ್ಯಾಯಾಲಯ, ಡೆಪ್ಯುಟಿ ಕಮೀಷನರ್ ಅಥವಾ ರಿಜಿಸ್ಟ್ರಾರನು ವರ್ಗಾಯಿಸಲಾದ ಅಥವಾ ಮಾರಾಟಮಾಡಲಾದ ಸ್ವತ್ತನ್ನು ನಿಯಮಗಳಿಗೆ ಅನುಸಾರವಾಗಿ, ಸಂದರ್ಭಾನುಸಾರ, ಸಂಘ ಅಥವಾ ಖರೀದಿದಾರನ ಸ್ವಾಧೀನದಲ್ಲಿರಿಸಬಹುದು.

(3) ಈ ಬಗ್ಗೆ ಮಾಡಬಹುದಾದ ನಿಯಮಗಳಿಗೆ ಒಳಪಟ್ಟು, ಮತ್ತು ಯಾರೇ ವ್ಯಕ್ತಿಯ ಹೆಸರಿನಲ್ಲಿ ಕಾನೂನುಸಮ್ಮತವಾಗಿ ಅಸ್ತಿತ್ವದಲ್ಲಿರುವ ಯಾವುವೇ ಹಕ್ಕುಗಳಿಗೆ, ಋಣಭಾರಗಳಿಗೆ ಅಥವಾ ಈಕ್ವಿಟಿಗಳಿಗೆ ಒಳಪಟ್ಟು, ಸಂದರ್ಭಾನುಸಾರ, ನ್ಯಾಯಾಲಯ, ಡೆಪ್ಯುಟಿ ಕಮೀಷನರ್ ಅಥವಾ ರಿಜಿಸ್ಟ್ರಾರ್ ಮತ್ತು ಸದರಿ ಸಂಘ ಇವರ ನಡುವೆ ಒಪ್ಪಿಕೊಳ್ಳಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಸದರಿ ಸಂಘವು (1)ನೇ ಉಪಪ್ರಕರಣದ ಮೇರೆಗೆ ಅಂಥ ಸ್ವತ್ತನ್ನು ಅಥವಾ ಅದರ ಯಾವುದೇ ಭಾಗವನ್ನು ಧಾರಣಮಾಡತಕ್ಕುದು.

(4) ಡೆಪ್ಯುಟಿ ಕಮೀಷನರನು ಅಥವಾ ರಿಜಿಸ್ಟ್ರಾರನು, ರಾಜ್ಯ ಸರ್ಕಾರದ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೆ ಒಳಪಟ್ಟು, ಈ ಪ್ರಕರಣದ ಮೇರೆಗೆ ಡೆಪ್ಯುಟಿ ಕಮೀಷನರ್ ಅಥವಾ ರಿಜಿಸ್ಟ್ರಾರನು ಚಲಾಯಿಸುವ ಅಧಿಕಾರಗಳನ್ನು ಸಹಾಯಕ ಕಮೀಷನರನ ಅಥವಾ ಸಹಾಯಕ ರಿಜಿಸ್ಟ್ರಾರನ ದರ್ಜೆಗಿಂತ ಕಡಿಮೆಯಿಲ್ಲದ ಅಧಿಕಾರಿಗೆ ಪ್ರತ್ಯಾಯೋಜಿಸಿ ಕೊಡಬಹುದು.][1]

[2][**101ಸಿ.** xxx][2]

**102. ರಿಜಿಸ್ಟ್ರಾರನು ಅಥವಾ ಅವನಿಂದ ಶಕ್ತಗೊಳಿಸಲಾದ ವ್ಯಕ್ತಿಯು ಕೆಲವು ಉದ್ದೇಶಗಳಿಗಾಗಿ ಸಿವಿಲ್ ನ್ಯಾಯಾಲಯವಾಗಿರುವುದು:-** ರಿಜಿಸ್ಟ್ರಾರನು ಅಥವಾ ಈ ಬಗ್ಗೆ ಅವನಿಂದ ಶಕ್ತಗೊಳಿಸಲಾದ ಯಾರೇ ವ್ಯಕ್ತಿಯು, ಸ್ವತ್ತನ್ನು ಜಪ್ತಿಮಾಡುವ ಮತ್ತು ಮಾರಾಟಮಾಡುವ ಮೂಲಕ ಅಥವಾ ಜಪ್ತಿ ಮಾಡದೆಯೇ ಮಾರಾಟ ಮಾಡುವ ಮೂಲಕ, ಯಾವುದೇ ಮೊಬಲಗಿನ ವಸೂಲಿಯ ಸಲುವಾಗಿ ಈ ಅಧಿನಿಯಮದ ಮೇರೆಗೆ ಯಾವುವೇ ಅಧಿಕಾರಗಳನ್ನು ಚಲಾಯಿಸುವಾಗ ಅಥವಾ ಅಂಥ ವಸೂಲಿಯ ಬಗ್ಗೆ ಅಥವಾ ಅಂಥ ವಸೂಲಿಗೆ ಸಹಾಯಕ ಕ್ರಮಗಳನ್ನು ಕೈಗೊಳ್ಳುವ ಸಲುವಾಗಿ ಅವನಿಗೆ ಸಲ್ಲಿಸಲಾದ ಯಾವುವೇ ಅರ್ಜಿಯ ಮೇಲೆ ಯಾವುದೇ ಆದೇಶಗಳನ್ನು ಮಾಡುವಾಗ [3][ಕಾಲಪರಿಮಿತಿ ಅಧಿನಿಯಮ, 1963][3]ರ ಒಂದನೇ ಅನುಸೂಚಿಯ 182ನೇ ಅನುಚ್ಛೇದದ ಉದ್ದೇಶಕ್ಕಾಗಿ ಸಿವಿಲ್ ನ್ಯಾಯಾಲಯವಾಗಿರುವುದಾಗಿ ಭಾವಿಸತಕ್ಕುದು.

**103. ಐತೀರ್ಪಿಗೆ ಅಥವಾ ಆದೇಶಕ್ಕೆ ಮುಂಚೆ ಸ್ವತ್ತಿನ ಜಪ್ತಿ:-** [4][(1)][4] ಯಾರೇ ವ್ಯಕ್ತಿಯು ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ತನ್ನ ವಿರುದ್ಧ ಮಾಡಬಹುದಾಗಿರುವ ಯಾವುದೇ ಆದೇಶ, ತೀರ್ಪು ಅಥವಾ ಐತೀರ್ಪಿನ ಜಾರಿಯಲ್ಲಿ ವಿಳಂಬ ಮಾಡುವ, ಅಡ್ಡಿ ಮಾಡುವ ಆಶಯದಿಂದ,-

(ಎ) ತನ್ನ ಎಲ್ಲ ಸ್ವತ್ತನ್ನು ಅಥವಾ ಅದರ ಯಾವುದೇ ಭಾಗವನ್ನು ವಿಲೆ ಮಾಡಲಿರುವನೆಂದು; ಅಥವಾ

(ಬಿ) ತನ್ನ ಎಲ್ಲ ಸ್ವತ್ತನ್ನು ಅಥವಾ ಅದರ ಯಾವುದೇ ಭಾಗವನ್ನು, ಸಂದರ್ಭಾನುಸಾರ, ರಿಜಿಸ್ಟ್ರಾರನ, ಮಧ್ಯಸ್ಥಗಾರನ ಅಥವಾ ಸಮಾಪಕನ ಅಧಿಕಾರ ವ್ಯಾಪ್ತಿಯಿಂದ ಹೊರಗೆ ಒಯ್ಯಲಿರುವನೆಂದು

- ರಿಜಿಸ್ಟ್ರಾರನಿಗೆ ಅರ್ಜಿ, ವರದಿ, ವಿಚಾರಣೆ ಅಥವಾ ಅನ್ಯಥಾ ರೀತಿಯಿಂದ ಮನದಟ್ಟಾದರೆ, ಸಾಕಷ್ಟು ಭದ್ರತೆಯನ್ನು ಒದಗಿಸಿದ ಹೊರತು ಅವನ ಸದರಿ ಸ್ವತ್ತಿನ ಜಪ್ತಿಯನ್ನು ನಿರ್ದೇಶಿಸಬಹುದು; ಮತ್ತು ಅಂಥ ಜಪ್ತಿಯು ಸಕ್ಷಮ ಸಿವಿಲ್ ನ್ಯಾಯಾಲಯದಿಂದ ಮಾಡಲಾದ ಜಪ್ತಿಯಂತೆಯೇ ಪ್ರಭಾವವನ್ನು ಹೊಂದಿರತಕ್ಕುದು.

1. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1991ರ ಅಧಿನಿಯಮ ಸಂಖ್ಯೆ 34ರ ಮೂಲಕ 10.12.1991 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
3. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
4. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಪುನರಂಕಿತಗೊಳಿಸಲಾಗಿದೆ.

[1][(2) ರಿಜಿಸ್ಟ್ರಾರನು, (1)ನೆಯ ಉಪಪ್ರಕರಣದ ಮೇರೆಗೆ ಸ್ವತ್ತಿನ ಜಪ್ತಿಗೆ ನಿರ್ದೇಶಿಸುವಲ್ಲಿ, ಯಾವ ವ್ಯಕ್ತಿಯ ಸ್ವತ್ತನ್ನು ಹಾಗೆ ಜಪ್ತಿ ಮಾಡಲಾಗಿದೆಯೋ ಆ ವ್ಯಕ್ತಿಗೆ ಅವನು ತನಗೆ ಸಾಕಷ್ಟೆನಿಸುವ ಭದ್ರತೆಯನ್ನು ನಿರ್ದಿಷ್ಟಪಡಿಸಲಾದ ಅವಧಿಯೊಳಗಾಗಿ ಒದಗಿಸಬೇಕೆಂದು ಕರೆ ನೀಡಿ, ನೋಟೀಸನ್ನು ಹೊರಡಿಸತಕ್ಕುದು, ಮತ್ತು ಹಾಗೆ ಕೇಳಿದ ಭದ್ರತೆಯನ್ನು ಒದಗಿಸಲು ಆ ವ್ಯಕ್ತಿಯು ತಪ್ಪಿದರೆ, ರಿಜಿಸ್ಟ್ರಾರನು ಆ ಆದೇಶವನ್ನು ಸ್ಥಿರೀಕರಿಸಬಹುದು; ಮತ್ತು ವಿವಾದದಲ್ಲಿ ತೀರ್ಮಾನವಾದ ಅಥವಾ ಈ ಹಿಂದಿನ ಉಪಪ್ರಕರಣದಲ್ಲಿ ಉಲ್ಲೇಖಿಸಿದ ವ್ಯವಹರಣೆಗಳು ಮುಕ್ತಾಯವಾದ ತರುವಾಯ ಕ್ಲೇಮನ್ನು ಐತೀರ್ಪು ಮಾಡಿದರೆ ಆ ಬಗ್ಗೆ ಹಾಗೆ ಜಪ್ತಿ ಮಾಡಲಾದ ಸ್ವತ್ತನ್ನು ವಿಲೆ ಮಾಡಲು ನಿರ್ದೇಶಿಸಬಹುದು.

(3) ಈ ಪ್ರಕರಣದ ಮೇರೆಗೆ ಮಾಡಿದ ಜಪ್ತಿಯು, ಆ ಜಪ್ತಿಗೆ ಸಂಬಂಧಿಸಿದ ವ್ಯವಹರಣೆಗಳಲ್ಲಿ ಪಕ್ಷಕಾರರಾಗಿರುವ ವ್ಯಕ್ತಿಗಳು ಅಂಥ ಜಪ್ತಿಗಿಂತ ಮುಂಚೆ ಹೊಂದಿದ್ದು ಅಸ್ತಿತ್ವದಲ್ಲಿರುವ ಅಧಿಕಾರಗಳನ್ನು ಬಾಧಿಸತಕ್ಕುದಲ್ಲ; ಅಥವಾ ಯಾವ ವ್ಯಕ್ತಿಯ ಸ್ವತ್ತನ್ನು ಹಾಗೆ ಜಪ್ತಿ ಮಾಡಲಾಗಿದೆಯೋ ಆ ವ್ಯಕ್ತಿಯ ವಿರುದ್ಧ ಡಿಕ್ರಿ ಧಾರಣ ಮಾಡಿದ ವ್ಯಕ್ತಿಯನ್ನು, ಜಪ್ತಿಯಾಗಿದ್ದ ಸ್ವತ್ತನ್ನು ಅಂಥ ಡಿಕ್ರಿಯ ಜಾರಿಯಲ್ಲಿ ಮಾರಾಟ ಮಾಡಿಸುವ ಸಲುವಾಗಿ ಅರ್ಜಿ ಸಲ್ಲಿಸದಂತೆ ಅಡ್ಡಿಪಡಿಸತಕ್ಕುದಲ್ಲ.][1]

**104. ಸರ್ಕಾರಕ್ಕೆ ಸಲ್ಲಬೇಕಾದ ಮೊಬಲಗುಗಳ ವಸೂಲಿ:–** (1) ಈ ಅಧಿನಿಯಮದ ಯಾವುದೇ ಉಪಬಂಧದ ಅಡಿಯಲ್ಲಿ ಸರ್ಕಾರಕ್ಕೆ ಐತೀರ್ಪಿನಿಂದ ಕೊಡಲಾದ ಯಾವುವೇ ಖರ್ಚುಗಳೂ ಸೇರಿ ಸರ್ಕಾರಕ್ಕೆ ಸಹಕಾರ ಸಂಘದಿಂದ ಅಥವಾ ಸಹಕಾರ ಸಂಘದ [2][ಪದಾಧಿಕಾರಿಗಳಿಂದ][2] ಅಥವಾ ಸದಸ್ಯನಿಂದ ಅಥವಾ ಆ ಸಂಘದ ಸದಸ್ಯನಾಗಿ ಹಿಂದಿನ ಸದಸ್ಯನಿಂದ ಸರ್ಕಾರಕ್ಕೆ ಸಲ್ಲತಕ್ಕ ಎಲ್ಲಾ ಮೊಬಲಗುಗಳನ್ನು ಈ ಬಗ್ಗೆ ರಿಜಿಸ್ಟ್ರಾರನಿಂದ [3][ಅಥವಾ [4][ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕನು][4]][3] ಕೊಟ್ಟ ಪ್ರಮಾಣಪತ್ರದ ಮೇಲೆ ಭೂ ಕಂದಾಯದ ಬಾಕಿಗಳನ್ನು ವಸೂಲು ಮಾಡುವ ರೀತಿಯಲ್ಲಿ ವಸೂಲು ಮಾಡಬಹುದು.

(2) ಸರ್ಕಾರಕ್ಕೆ ಸಂಘದಿಂದ ಸಲ್ಲತಕ್ಕ ಮತ್ತು (1)ನೇ ಉಪಪ್ರಕರಣದ ಮೇರೆಗೆ ವಸೂಲಾಗಬೇಕಾದ ಮೊಬಲಗುಗಳನ್ನು, ಮೊದಲನೆಯದಾಗಿ ಸಂಘದ ಸ್ವತ್ತಿನಿಂದ; ಎರಡನೆಯದಾಗಿ, ಯಾವ ಸಂಘದ ಸದಸ್ಯರ ಹೊಣೆಯು ನಿಯಮಿತವಾಗಿದೆಯೋ ಅಂಥ ಸಂಘದ ಸಂದರ್ಭದಲ್ಲಿ ಸದಸ್ಯರಿಂದ, ಹಿಂದಿನ ಸದಸ್ಯರಿಂದ ಅಥವಾ ಮೃತಪಟ್ಟ ಸದಸ್ಯರ ಎಸ್ಟೇಟುಗಳಿಂದ ಅವರವರ ಹೊಣೆಯ ಪರಿಮಿತಿಗೊಳಪಟ್ಟು; ಮತ್ತು, ಮೂರನೆಯದಾಗಿ, ಬೇರೆ ಸಂಘಗಳ ಸಂದರ್ಭದಲ್ಲಿ ಸದಸ್ಯರಿಂದ, ಹಿಂದಿನ ಸದಸ್ಯರಿಂದ ಅಥವಾ ಮೃತಪಟ್ಟ ಸದಸ್ಯರ ಎಸ್ಟೇಟುಗಳಿಂದ ವಸೂಲು ಮಾಡಬಹುದು:

ಪರಂತು, ಹಿಂದಿನ ಸದಸ್ಯರ ಹೊಣೆಯು ಮತ್ತು ಮೃತಪಟ್ಟ ಸದಸ್ಯರ ಎಸ್ಟೇಟುಗಳ ಹೊಣೆಯು ಎಲ್ಲ ಸಂದರ್ಭಗಳಲ್ಲಿ 25ನೇ ಪ್ರಕರಣದ ಉಪಬಂಧಗಳಿಗೊಳಪಟ್ಟಿರತಕ್ಕುದು.

[3][(3) ಹಿಂದಿನ ಉಪಪ್ರಕರಣಗಳಲ್ಲಿ ಏನೇ ಇದ್ದರೂ, ಒಂದು ಸಹಕಾರ ಸಂಘದಿಂದ ಸಲ್ಲತಕ್ಕ ಲೆಕ್ಕಪರಿಶೋಧನಾ ಫೀಜನ್ನು ನಿಯಮಿಸಬಹುದಾದಂತಹ ರೀತಿಯಲ್ಲಿ ವಸೂಲಿ ಮಾಡಬಹುದು.][3]

[1][**104ಎ. ಬೇರೆ ರಾಜ್ಯಗಳಲ್ಲಿರುವ ಸಹಕಾರ ಸಂಘಗಳಿಗೆ ಈ ಅಧ್ಯಾಯದ ಅನ್ವಯ:–** 103ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಮೊಬಲಗಿನ ವಸೂಲಿಗೆ ಸಂಬಂಧಿಸಿದ ಅಥವಾ ಯಾವುದೇ ರೀತಿಯಲ್ಲಿ ಅದಕ್ಕೆ ಸಂಬಂಧಪಟ್ಟ ಈ ಅಧ್ಯಾಯದ ಮತ್ತು ಈ ಅಧಿನಿಯಮದ ಮೇರೆಗೆ ಮಾಡಲಾದ ಎಲ್ಲ ನಿಯಮಗಳ ಉಪಬಂಧಗಳು ರಾಜ್ಯ ಸರ್ಕಾರವು ಈ ಬಗ್ಗೆ ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ಭಾರತದ ಯಾವುದೇ ರಾಜ್ಯದಲ್ಲಿ ತತ್ಕಾಲದಲ್ಲಿ ಜಾರಿಯಲ್ಲಿದ್ದ ಯಾವುದೇ ಕಾನೂನಿನ ಮೇರೆಗೆ ನೋಂದಾಯಿತವಾದ ಅಥವಾ ನೋಂದಾಯಿಸಲಾಗಿದೆಯೆಂದು ಭಾವಿಸಲಾದಂಥ ಸಹಕಾರ ಸಂಘಗಳಿಗೆ ಸಲ್ಲತಕ್ಕ ಅಂಥವೇ ಮೊಬಲಗುಗಳ ವಸೂಲಿಯ ಸಂಬಂಧದಲ್ಲಿ, ಈ ಅಧಿನಿಯಮದ ಮೇರೆಗೆ [5][ಕರ್ನಾಟಕ ರಾಜ್ಯ][5]ದಲ್ಲಿ ಅಂಥ ಸಹಕಾರ ಸಂಘಗಳು ನೋಂದಾಯಿತವಾಗಿದ್ದಿದ್ದರೆ ಹೇಗೋ ಹಾಗೆ, ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂಥ ಮಾರ್ಪಾಟುಗಳು, ಯಾವುದಾದರೂ ಇದ್ದರೆ, ಅಂಥ ಮಾರ್ಪಾಟುಗಳೊಂದಿಗೆ ಅನ್ವಯಿಸತಕ್ಕುದು.][1]

## ಅಧ್ಯಾಯ - XIII

## ಅಪೀಲುಗಳು, ಪುನರೀಕ್ಷಣೆ ಮತ್ತು ಪುನರ್ವಿಲೋಕನ

**105. ನ್ಯಾಯಾಧಿಕರಣಕ್ಕೆ ಅಪೀಲುಗಳು:–** ಯಾರೇ ವ್ಯಕ್ತಿಯು,-

(ಎ) 71ನೇ ಪ್ರಕರಣದ (1)ನೇ ಉಪಪ್ರಕರಣದ (ಎ) ಖಂಡದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಯಾವುದೇ ತೀರ್ಮಾನದಿಂದ; ಅಥವಾ

(ಬಿ) 71ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದ ಮೇರೆಗೆ ಸರ್ಕಾರವು ಆ ಬಗ್ಗೆ ಅಧಿಕಾರಗಳನ್ನು ನಿಹಿತಗೊಳಿಸಿದ ವ್ಯಕ್ತಿಯ ಯಾವುದೇ ತೀರ್ಮಾನದಿಂದ;

1. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1980ರ ಅಧಿನಿಯಮ ಸಂಖ್ಯೆ 3ರ ಮೂಲಕ 11.8.1977 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(ಸಿ) 71ನೇ ಪ್ರಕರಣದ (1)ನೇ ಉಪಪ್ರಕರಣದ (ಸಿ) ಖಂಡದ ಮೇರೆಗೆ ಮಧ್ಯಸ್ಥಗಾರನ ಯಾವುದೇ ಐತೀರ್ಪಿನಿಂದ; ಅಥವಾ

(ಡಿ) 74ನೇ ಪ್ರಕರಣದ (2)ನೇ ಉಪಪ್ರಕರಣದ (ಎಫ್) ಖಂಡದ ಮೇರೆಗೆ ಸಮಾಪಕನ ಯಾವುದೇ ನಿರ್ಧಾರದಿಂದ;

(ಇ) [1][69ನೇ ಮತ್ತು 71ನೇ ಪ್ರಕರಣದ ಮೇರೆಗೆ ಮಾಡಬಹುದಾದ ಯಾವುದೇ ಆದೇಶದ, ತೀರ್ಮಾನದ ಅಥವಾ ಐತೀರ್ಪಿನ ಜಾರಿಗೆ][1] ಆದ ಯಾವುದೇ ವಿಳಂಬವನ್ನು ಅಥವಾ ಅಡ್ಡಿಯನ್ನು ಪ್ರತಿಬಂಧಿಸುವ ದೃಷ್ಟಿಯಿಂದ 103ನೇ ಪ್ರಕರಣದ ಮೇರೆಗೆ ಮಾಡಲಾದ ಯಾವುದೇ ಆದೇಶದಿಂದ;

[2][(ಎಫ್) 69ನೇ ಪ್ರಕರಣದ ಮೇರೆಗೆ ಮಾಡಲಾದ ಯಾವುದೇ ಆದೇಶದಿಂದ][2]

- ಬಾಧಿತನಾದರೆ, ಸಂದರ್ಭಾನುಸಾರ ತೀರ್ಮಾನ, ಐತೀರ್ಪು ಅಥವಾ ಆದೇಶದ ದಿನಾಂಕದಿಂದ ಅರವತ್ತು ದಿನಗಳೊಳಗಾಗಿ ನ್ಯಾಯಾಧಿಕರಣಕ್ಕೆ ಅಪೀಲು ಸಲ್ಲಿಸಬಹುದು.

[3][**105ಎ. ಸಂಘಗಳಿಗೆ ಸದಸ್ಯರ ಪ್ರವೇಶಕ್ಕೆ ಸಂಬಂಧಿಸಿದ ಅಪೀಲುಗಳು:-** (1)16ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ ಸದಸ್ಯನಾಗಿ ಪ್ರವೇಶ ಕೋರಿ ಅರ್ಜಿ ಸಲ್ಲಿಸಿದ ಯಾರೇ ವ್ಯಕ್ತಿಯು, ಸದಸ್ಯನಾಗಿ ತನಗೆ ಪ್ರವೇಶ ಕೊಡಲು ಸಹಕಾರ ಸಂಘವು ಮಾಡಿದ ಯಾವುದೇ ನಿರಾಕರಣೆಯ ವಿರುದ್ಧ ಅಥವಾ 16ನೇ ಪ್ರಕರಣದ (4)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಅವಧಿಯೊಳಗಾಗಿ ತನಗೆ ಅದು ಸದಸ್ಯನಾಗಿ ಪ್ರವೇಶ ಕೊಡಲು ಅಥವಾ ಪ್ರವೇಶ ನಿರಾಕರಣೆಯ ನೋಟೀಸು ನೀಡಲು ತಪ್ಪಿದರೆ ಆ ಯಾವುದೇ ತಪ್ಪಿನ ವಿರುದ್ಧ ರಿಜಿಸ್ಟ್ರಾರನಿಗೆ ಅಪೀಲು ಸಲ್ಲಿಸಬಹುದು.

(2) (1)ನೇ ಉಪಪ್ರಕರಣದ ಮೇರೆಗೆ ಸಲ್ಲಿಸಲಾಗುವ ಪ್ರತಿಯೊಂದು ಅಪೀಲನ್ನು ಸಂದರ್ಭಾನುಸಾರ, ನಿರಾಕರಣೆಯ ತಿಳಿವಳಿಕೆಯ ದಿನಾಂಕದಿಂದ ಅರವತ್ತು ದಿನಗಳೊಳಗಾಗಿ ಅಥವಾ 10ನೇ ಪ್ರಕರಣದ (4)ನೇ ಉಪಪ್ರಕರಣದ ಮೇರೆಗೆ ಪ್ರವೇಶವನ್ನು ನಿರಾಕರಿಸಲಾಗಿದೆಯೆಂದು ಭಾವಿಸತಕ್ಕ ದಿನಾಂಕದಿಂದ ಅರವತ್ತು ದಿನಗಳೊಳಗಾಗಿ ಪ್ರವೇಶ ಬಯಸುವ ವ್ಯಕ್ತಿಯು, ಲಿಖಿತ ಅರ್ಜಿಯ ಮೂಲಕ ಸಲ್ಲಿಸತಕ್ಕುದು.[4][xxxxx][4]

(3) ರಿಜಿಸ್ಟ್ರಾರನು, ಸಹಕಾರ ಸಂಘಕ್ಕೆ ಮತ್ತು ಪ್ರವೇಶವನ್ನು ಬಯಸುವ ವ್ಯಕ್ತಿಗೆ ಸಹ ಯುಕ್ತ ನೋಟೀಸನ್ನು ಕೊಡಿಸಿ ಮತ್ತು ಅವರ ಮನವಿಗಳು, ಯಾವುದಾದರೂ ಇದ್ದರೆ, ಅವುಗಳನ್ನು ಬರಹದಲ್ಲಿ ಸಲ್ಲಿಸಲು ಯುಕ್ತ ಅವಕಾಶವನ್ನು ಕೊಟ್ಟ ತರುವಾಯ, ಆ ವ್ಯಕ್ತಿಗೆ ಸಹಕಾರ ಸಂಘಕ್ಕೆ ಪ್ರವೇಶ ಕೊಡತಕ್ಕುದೆಂದು ಅಥವಾ ಅವನಿಗೆ ಸಹಕಾರ ಸಂಘವು ಪ್ರವೇಶ ಕೊಡುವ ಅಗತ್ಯವಿಲ್ಲವೆಂದು ಆದೇಶದ ಮೂಲಕ ನಿರ್ದೇಶಿಸಬಹುದು; ಮತ್ತು ಮೊದಲನೆಯ ಸಂದರ್ಭದಲ್ಲಿ ಸಹಕಾರ ಸಂಘವು ಆದೇಶವನ್ನು ಸ್ವೀಕರಿಸಿದ ಹತ್ತು ದಿನಗಳೊಳಗಾಗಿ ಆ ತೀರ್ಮಾನವನ್ನು ಕಾರ್ಯಗತಗೊಳಿಸತಕ್ಕುದು.

(4) ಒಬ್ಬ ವ್ಯಕ್ತಿಗೆ ಸದಸ್ಯನಾಗಿ ಪ್ರವೇಶ ಕೊಡಲು ಸಹಕಾರ ಸಂಘದ ಯಾವುದೇ ನಿರಾಕರಣೆಯ ವಿರುದ್ಧ ಸಲ್ಲಿಸಿದ ಅಪೀಲಿನ ಮೇಲೆ (3)ನೇ ಉಪಪ್ರಕರಣದ ಮೇರೆಗೆ ಆದೇಶ ಮಾಡುವುದಕ್ಕೆ ಮೊದಲು ರಿಜಿಸ್ಟ್ರಾರನು, ಅಂಥ ನಿರಾಕರಣೆಯ ಕಾರಣಗಳನ್ನು ತನಗೆ ತಿಳಿಸುವಂತೆ ಸಹಕಾರ ಸಂಘವನ್ನು ಅಗತ್ಯಪಡಿಸಬಹುದು; ಮತ್ತು ಆ ಸಹಕಾರ ಸಂಘವು ಅಂಥ ಕಾರಣಗಳನ್ನು ಬಹಿರಂಗಪಡಿಸಲು ತಪ್ಪಿದರೆ ಅಥವಾ ನಿರಾಕರಿಸಿದರೆ, ಅಂಥ ಬಹಿರಂಗಪಡಿಸುವಿಕೆಯು ಸಹಕಾರ ಸಂಘಕ್ಕೆ ಪ್ರತಿಕೂಲವಾಗಬಹುದೆಂದು ರಿಜಿಸ್ಟ್ರಾರನು ಪೂರ್ವಭಾವನೆ ಮಾಡಿಕೊಳ್ಳಬಹುದು. [5][ರಿಜಿಸ್ಟ್ರಾರನು ಪ್ರತಿಯೊಂದು ಅಪೀಲನ್ನು ಸಾಧ್ಯವಾದಷ್ಟು ಬೇಗ ವಿಲೆ ಮಾಡತಕ್ಕುದು.][5]

(5) ಈ ಪ್ರಕರಣದ ಮೇರೆಗೆ ಅಥವಾ ಅದಕ್ಕೆ ಸಂಬಂಧಿಸಿದ ಅಪೀಲುಗಳಲ್ಲಿ ಜರುಗುವ ಎಲ್ಲ ವ್ಯವಹರಣೆಗಳು ರಹಸ್ಯವಾಗಿರತಕ್ಕುದು ಮತ್ತು ಅಂಥ ವ್ಯವಹರಣೆಗಳಲ್ಲಿ ಬಾಯಿ ಮಾತಿನಲ್ಲಾಗಲಿ ಅಥವಾ ಬೇರೆ ರೀತಿಯಲ್ಲಾಗಲಿ ಮಾಡಲಾದ ಯಾವುದೇ ಆರೋಪದ ಸಂಬಂಧದಲ್ಲಿ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡಲು ಅವಕಾಶವಿರತಕ್ಕುದಲ್ಲ.][3]

**106. ಇತರ ಪ್ರಾಧಿಕಾರಿಗಳಿಗೆ ಅಪೀಲುಗಳು:-** (1) [6][108ಎ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು][6] ,-

(ಎ) ಸಹಕಾರ ಸಂಘವನ್ನು ನೋಂದಾಯಿಸಲು ನಿರಾಕರಿಸಿ 7ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಆದೇಶ;

[7][(ಬಿ) 12ನೇ ಪ್ರಕರಣದ (4) ಅಥವಾ (6)ನೇ ಉಪ ಪ್ರಕರಣದ ಅಡಿಯಲ್ಲಿ ರಿಜಿಸ್ಟ್ರಾರನು ಮಾಡಿದ ಆದೇಶ;][7]

[8][(ಸಿ) 17ನೇ ಪ್ರಕರಣದ ಮೇರೆಗಿನ ರಿಜಿಸ್ಟ್ರಾರನ ಆದೇಶ;

(ಸಿ1) 31ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ವಿಶೇಷ ಅಧಿಕಾರಿಯನ್ನು ನೇಮಿಸುವ ರಿಜಿಸ್ಟ್ರಾರನ ಆದೇಶ;][8]

---

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ 20.1.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
5. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
6. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
7. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಪ್ರತಿಯೋಜಿಸಲಾಗಿದೆ.
8. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಸೇರಿಸಲಾಗಿದೆ.

[1][(ಸಿ) x x x ][1]

(ಡಿ) 27ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಆದೇಶ;

[2][(ಡಿ-1) 29ಸಿ ಪ್ರಕರಣದ ಮೇರೆಗಿನ ರಿಜಿಸ್ಟ್ರಾರನ ಆದೇಶ;][2]

(ಇ) ಸಹಕಾರ ಸಂಘದ ಸಮಿತಿಯನ್ನು ತೆಗೆದುಹಾಕಲು 30ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಆದೇಶ;

(ಎಫ್) 66ನೇ ಪ್ರಕರಣದ ಮೇರೆಗೆ ಪುಸ್ತಕಗಳನ್ನು ಅಥವಾ ಸ್ವತ್ತನ್ನು ಅಭಿಗ್ರಹಣ ಮಾಡುವುದು ಮತ್ತು ಪರಿಬದ್ಧಗೊಳಿಸುವುದು;

(ಜಿ) 64ನೇ ಪ್ರಕರಣದ ಮೇರೆಗೆ ಮಾಡಲಾದ ತನಿಖೆಯ ಅಥವಾ 65ನೇ ಪ್ರಕರಣದ ಮೇರೆಗೆ ಮಾಡಲಾದ ಪರಿಶೀಲನೆಯ ಖರ್ಚುಗಳನ್ನು ಹಂಚಿಹಾಕಿ 67ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಆದೇಶ;

(ಹೆಚ್) 68ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರನ ಆದೇಶ;

[3][(ಐ) x x x][3]

(ಜೆ) ಸಹಕಾರ ಸಂಘದ ಸಮಾಪನವನ್ನು ನಿರ್ದೇಶಿಸಿ 72ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಆದೇಶ;

(ಕೆ) ಸಹಕಾರ ಸಂಘದ ಸಮಾಪಕನು 74ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಮಾಡಿದ ಆದರೆ, ಆ ಪ್ರಕರಣದ (2)ನೇ ಉಪಪ್ರಕರಣದ (ಎಫ್) ಖಂಡದ ಮೇರೆಗಿನ ನಿರ್ಧಾರದ ಹೊರತಾದ ಯಾವುದೇ ಆದೇಶ;

(ಎಲ್) 101ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಆದೇಶ; ಅಥವಾ

(ಎಂ) 105ನೇ ಪ್ರಕರಣದ (ಇ) ಖಂಡದಲ್ಲಿ ಉಲ್ಲೇಖಿಸಿದ ಆದೇಶದ ಹೊರತಾದ ಯಾವುದೇ ಸ್ವತ್ತಿನ ಬಗ್ಗೆ 103ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರನು ಮಾಡಿದ ಯಾವುದೇ ಜಪ್ತಿ ಆದೇಶ;

[4][(ಎನ್) xxx ][4]

- ಇವುಗಳ ವಿರುದ್ಧ ಈ ಪ್ರಕರಣದ ಮೇರೆಗೆ ಅಪೀಲು ಸಲ್ಲಿಸಲು ಅವಕಾಶವಿರತಕ್ಕುದು.

(2) (1)ನೇ ಪ್ರಕರಣದ ಮೇರೆಗಿನ ಯಾವುದೇ ಕಾರ್ಯ, ತೀರ್ಮಾನ ಅಥವಾ ಆದೇಶದ ವಿರುದ್ಧ ಸಲ್ಲಿಸಲಾಗುವ ಅಪೀಲನ್ನು ಆ ಕಾರ್ಯ, ತೀರ್ಮಾನ ಅಥವಾ ಆದೇಶದ ದಿನಾಂಕದಿಂದ ಅರವತ್ತು ದಿನಗಳೊಳಗಾಗಿ,-

[5][(ಎ) ಆ ಕಾರ್ಯ, ತೀರ್ಮಾನ ಅಥವಾ ಆದೇಶವನ್ನು ರಿಜಿಸ್ಟ್ರಾರನು ಮಾಡಿದ್ದರೆ, ರಾಜ್ಯ ಸರ್ಕಾರಕ್ಕೆ;

(ಬಿ) ಆ ಕಾರ್ಯ, ತೀರ್ಮಾನ ಅಥವಾ ಆದೇಶವನ್ನು ಯಾರೇ ಇತರ ಅಧಿಕಾರಿಯು ಮಾಡಿದ್ದರೆ, ಅಧಿಕಾರಿಯ ನಿಕಟ ವರಿಷ್ಠ ಅಧಿಕಾರಿಗೆ

- ಸಲ್ಲಿಸತಕ್ಕುದು.][5]

[6][ಪರಂತು, ಆ ಕಾರ್ಯ ತೀರ್ಮಾನ ಅಥವಾ ಆದೇಶವನ್ನು ಸ್ವತಃ ವರಿಷ್ಠ ಅಧಿಕಾರಿಯೇ ಮಾಡಿದ್ದರೆ, ಅಪೀಲನ್ನು ಅವನಿಗಿಂತ ಮೇಲಿನ ಅಧಿಕಾರಿಗೆ ಅಥವಾ ಪ್ರಾಧಿಕಾರಕ್ಕೆ ಸಲ್ಲಿಸಲು ಅವಕಾಶವಿರತಕ್ಕುದು ಮತ್ತು ಅದು ಇತ್ಯರ್ಥದಲ್ಲಿದ್ದರೆ ಅವನಿಗಿಂತ ವರಿಷ್ಠ ಅಧಿಕಾರಿ ಅಥವಾ ಪ್ರಾಧಿಕಾರಕ್ಕೆ ವರ್ಗಾವಣೆಯಾಗತಕ್ಕುದು ಮತ್ತು ಅಂಥ ವರಿಷ್ಠ ಅಧಿಕಾರಿ ಅಥವಾ ಪ್ರಾಧಿಕಾರವು ಅದನ್ನು ವಿಲೆ ಮಾಡತಕ್ಕುದು.][6]

[7][ಮತ್ತೂ ಪರಂತು, ಸದರಿ ಅವಧಿಯೊಳಗೆ ಅಪೀಲು ಸಲ್ಲಿಸದಿರುವುದಕ್ಕೆ ಅಪೀಲುದಾರನಿಗೆ ಸಾಕಷ್ಟು ಕಾರಣಗಳಿದ್ದುವೆಂದು ಅಪೀಲು ಪ್ರಾಧಿಕಾರಕ್ಕೆ ಮನವರಿಕೆಯಾದರೆ, ಅರವತ್ತು ದಿನಗಳ ಸದರಿ ಅವಧಿಯ ತರುವಾಯ ಅದು ಅಪೀಲನ್ನು ಅಂಗೀಕರಿಸಬಹುದು".

[1][ವಿವರಣೆ x x x x ][1]

1. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ
2. 1976ರ ಅಧಿನಿಯಮ ಸಂಖ್ಯೆ 70ರ ಮೂಲಕ 19.7.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ 20.1.1976 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
4. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
5. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
6. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
7. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಸೇರಿಸಲಾಗಿದೆ.

(3) ಅಪೀಲನ್ನು ಸಲ್ಲಿಸಿದಾಗ, ಅಪೀಲು ಪ್ರಾಧಿಕಾರವು ನ್ಯಾಯೋದ್ದೇಶಗಳು ವಿಫಲವಾಗುವುದನ್ನು ತಡೆಯಲು ಅಪೀಲಿನ ಅಂತಿಮ ಮುಕ್ತಾಯವು ಇತ್ಯರ್ಥದಲ್ಲಿರುವಾಗ ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ವಾದಕಾಲೀನ ಆದೇಶಗಳನ್ನು ಹೊರಡಿಸಬಹುದು".

(4) ಈ ಪ್ರಕರಣದ ಅಡಿಯಲ್ಲಿ ಒಂದು ಅಪೀಲನ್ನು ವಿಲೆ ಮಾಡುವಲ್ಲಿ ಅಪೀಲು ಪ್ರಾಧಿಕಾರವು, ಪಕ್ಷಕಾರರಿಗೆ ಅವರ ಮನವಿಗಳನ್ನು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟ ತರುವಾಯ ತಾನು ಸೂಕ್ತವೆಂದು ಭಾವಿಸಬಹುದಾದಂತೆ ಅದರ ಮೇಲೆ ಅಂಥ ಆದೇಶವನ್ನು ಜಾರಿಗೊಳಿಸಬಹುದು.][7]

**107. ನ್ಯಾಯಾಧಿಕರಣದಿಂದ ಪುನರೀಕ್ಷಣೆ:-** [1][108ಎ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ನ್ಯಾಯಾಧಿಕರಣವು][1] ಸ್ವಪ್ರೇರಣೆಯಿಂದ ಅಥವಾ ಬಾಧಿತನಾದ ಯಾರೇ ವ್ಯಕ್ತಿಯ ಅರ್ಜಿಯ ಮೇಲೆ ಯಾವ ವ್ಯವಹರಣೆಗಳಲ್ಲಿ ಅದಕ್ಕೆ ಅಪೀಲು ಸಲ್ಲಿಸಲು ಅವಕಾಶವಿರುವುದೋ ಆ ಯಾವುದೇ ವ್ಯವಹರಣೆಗಳ ದಾಖಲೆಯನ್ನು ಮಾಡಲಾದ ಯಾವುದೇ ತೀರ್ಮಾನದ ಅಥವಾ ಆದೇಶದ ಕಾನೂನು ಮಾನ್ಯತೆ ಅಥವಾ ಔಚಿತ್ಯವನ್ನು ತಾನು ಮನದಟ್ಟು ಮಾಡಿಕೊಳ್ಳುವ ಉದ್ದೇಶದಿಂದ ತರಿಸಿಕೊಳ್ಳಬಹುದು ಮತ್ತು ಪರೀಕ್ಷಿಸಬಹುದು, ಮತ್ತು ಯಾವುದೇ ಸಂದರ್ಭದಲ್ಲಿ ಅಂಥ ತೀರ್ಮಾನವನ್ನು ಅಥವಾ ಆದೇಶವನ್ನು ಮಾರ್ಪಡಿಸತಕ್ಕುದೆಂದು, ಶೂನ್ಯಗೊಳಿಸತಕ್ಕುದೆಂದು ಅಥವಾ ಪುನರೀಕ್ಷಿಸತಕ್ಕದ್ದೆಂದು ನ್ಯಾಯಾಧಿಕರಣಕ್ಕೆ ಕಂಡುಬಂದರೆ ಅದರ ಬಗ್ಗೆ ನ್ಯಾಯಾಧಿಕರಣವು ತಾನು ಯುಕ್ತವೆಂದು ಭಾವಿಸುವಂಥ ಆದೇಶ ಮಾಡಬಹುದು.

**108. ರಾಜ್ಯಸರ್ಕಾರದ ಪುನರೀಕ್ಷಣೆಯ ಅಧಿಕಾರಗಳು:-** [1][108ಎ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ರಾಜ್ಯ ಸರ್ಕಾರವು][1] ಸ್ವಪ್ರೇರಣೆಯಿಂದ ಯಾವುದೇ ಕಾಲಕ್ಕೆ, ಮತ್ತು ಯಾವುದೇ ಆದೇಶದ ದಿನಾಂಕದಿಂದ ಆರು ತಿಂಗಳೊಳಗಾಗಿ, ಬಾಧಿತನಾದ ಯಾರೇ ವ್ಯಕ್ತಿಯು ಅರ್ಜಿ ಸಲ್ಲಿಸಿದ ಮೇಲೆ, ತನಗೆ ಅಧೀನವಾದ ಯಾರೇ ಅಧಿಕಾರಿಯ ಯಾವುದೇ ಪ್ರಕರಣದ ಅಥವಾ ವ್ಯವಹರಣೆಗಳ ದಾಖಲೆಗಳನ್ನು, ನ್ಯಾಯಾಧಿಕರಣಕ್ಕೆ ಮಾಡಲಾದ ಅಪೀಲಿಗೆ ಅಥವಾ ಅದರ ಪುನರೀಕ್ಷಣೆಗೆ ಒಳಪಟ್ಟವುಗಳನ್ನು ಅಥವಾ 106ನೇ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರಕ್ಕೆ ಸಲ್ಲಿಸಿದ ಅಪೀಲಿಗೆ ಸಂಬಂಧಿಸಿದವುಗಳನ್ನು ಹೊರತುಪಡಿಸಿ, ತರಿಸಿಕೊಳ್ಳಬಹುದು ಮತ್ತು ಪರೀಕ್ಷಿಸಬಹುದು; ಮತ್ತು ರಾಜ್ಯ ಸರ್ಕಾರಕ್ಕೆ ತನಗೆ ಯೋಗ್ಯವೆನಿಸುವಂಥ ತನಿಖೆ ನಡೆಸಿದ ತರುವಾಯ ಅಧಿಕಾರಿಯ ಆದೇಶವು ಕಾನೂನು ವಿರುದ್ಧವಾಗಿದೆಯೆಂದು ಮತ್ತು ನ್ಯಾಯ ವೈಫಲ್ಯದಲ್ಲಿ ಪರಿಣಮಿಸಿದೆಯೆಂದು ಮನದಟ್ಟಾದರೆ, ಆದರ ಮೇಲೆ ರಾಜ್ಯ ಸರ್ಕಾರವು ತನಗೆ ನ್ಯಾಯವೆಂದೆನಿಸುವಂಥ ಆದೇಶ ಮಾಡಬಹುದು:

ಪರಂತು, ಈ ಪ್ರಕರಣದ ಮೇರೆಗೆ ಯಾರೇ ವ್ಯಕ್ತಿಗೆ ಬಾಧಕವಾಗುವಂಥ ಯಾವುದೇ ಆದೇಶವನ್ನು, ಅವನಿಗೆ ಸುನಾವಣೆಯ ಯುಕ್ತ ಅವಕಾಶವನ್ನು ಕೊಟ್ಟ ಹೊರತು ಮಾಡತಕ್ಕುದಲ್ಲ.

[2]**[108ಎ. ಕೆಲವು ಪ್ರಕರಣಗಳಲ್ಲಿ ಯಾವುದೇ ಅಪೀಲಿಗೆ ಅಥವಾ ಪುನರೀಕ್ಷಣೆಗೆ ಅವಕಾಶವಿಲ್ಲದಿರುವುದು:-** ಈ ಅಧಿನಿಯಮದಲ್ಲಿ ಏನೇ ಇದ್ದರೂ, ರಿಸರ್ವ್ ಬ್ಯಾಂಕಿನ ಲಿಖಿತಪೂರ್ವ ಮಂಜೂರಾತಿ ಪಡೆದು ಅಥವಾ ಕೋರಿಕೆಯ ಮೇಲೆ,-

(i) ಸಹಕಾರ ಬ್ಯಾಂಕನ್ನು ಸಮಾಪನಗೊಳಿಸಲು ಆದೇಶಿಸಿದ್ದರೆ; ಅಥವಾ

(ii) ಸಹಕಾರ ಬ್ಯಾಂಕಿನ ಸಮ್ಮಿಲನ ಅಥವಾ ಪುನರ್ ಸಂಘಟನೆಯ ಯೋಜನೆಯನ್ನು ಜಾರಿಗೆ ತಂದಿದ್ದರೆ; ಅಥವಾ

(iii) ಸಹಕಾರ ಸಂಘದ ಸಂಬಂಧದಲ್ಲಿ ಸಮಿತಿಯನ್ನು ತೆಗೆದುಹಾಕುವ ಮತ್ತು ಆಡಳಿತಗಾರನನ್ನು [3][ಮತ್ತು ವಿಶೇಷಾಧಿಕಾರಿಯನ್ನು][3] ನೇಮಿಸುವ ಆದೇಶವನ್ನು ಮಾಡಿದ್ದರೆ

- ಅಂಥ ಆದೇಶ ಅಥವಾ ಕ್ರಮದ ವಿರುದ್ಧ ಯಾವುದೇ ಅಪೀಲು ಅಥವಾ

ಪುನರೀಕ್ಷಣೆಗೆ ಅವಕಾಶವಿರತಕ್ಕುದಲ್ಲ ಮತ್ತು ರಿಸರ್ವ್ ಬ್ಯಾಂಕಿನ ಮಂಜೂರಾತಿ ಅಥವಾ ಕೋರಿಕೆಯನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸಲು ಅವಕಾಶವಿರತಕ್ಕುದಲ್ಲ.][2]

1. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## ಅಧ್ಯಾಯ - XIV

## ಅಪರಾಧಗಳು ಮತ್ತು ದಂಡನೆಗಳು

**109. ಅಪರಾಧಗಳು:-** (1) "ಸಹಕಾರ" ಅಥವಾ ಯಾವುದೇ ಭಾರತೀಯ ಭಾಷೆಯಲ್ಲಿನ ಅದರ ಸಮಾನ ಪದವು ಯಾವ ಹೆಸರಿನ ಅಥವಾ ಶೀರ್ಷಿಕೆಯ ಭಾಗವಾಗಿರುವುದೋ ಆ ಯಾವುದೇ ಹೆಸರಿನಲ್ಲಿ ಅಥವಾ ಶೀರ್ಷಿಕೆಯಲ್ಲಿ, ರಾಜ್ಯ ಸರ್ಕಾರದ ಮಂಜೂರಾತಿ ಇಲ್ಲದೆಯೇ ವ್ಯವಹಾರ ನಡೆಸುವ ಸಹಕಾರ ಸಂಘದ ಹೊರತಾದ ಯಾರೇ ವ್ಯಕ್ತಿಯು [1][ಎರಡು ಸಾವಿರ][1] ರೂಪಾಯಿಗಳವರೆಗಿನ ಜುಲ್ಮಾನೆಯಿಂದ ದಂಡನೀಯನಾಗತಕ್ಕುದು.

[2][(1-ಎ) 105-ಎ ಪ್ರಕರಣದ (3)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಅವಧಿಯೊಳಗಾಗಿ ರಿಜಿಸ್ಟ್ರಾರನ ಆದೇಶವನ್ನು ಕಾರ್ಯರೂಪಕ್ಕೆ ತರಲು ತಪ್ಪಿದರೆ, ಸಹಕಾರ ಸಂಘವು ಮತ್ತು ಸಂಘದ ಕರ್ತವ್ಯಲೋಪ ಮಾಡಿದ ಪ್ರತಿಯೊಬ್ಬ [3][ಪದಾಧಿಕಾರಿಯು][3] ಒಂದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ, ಮತ್ತು ಮೊದಲ ಕರ್ತವ್ಯಲೋಪದ ತರುವಾಯ, ಕರ್ತವ್ಯ ಲೋಪವು ಮುಂದುವರಿದ ಅವಧಿಯ ಪ್ರತಿದಿನಕ್ಕೆ ಒಂದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಇನ್ನಷ್ಟು ಜುಲ್ಮಾನೆಯಿಂದ ದಂಡನೀಯನಾಗತಕ್ಕುದು.][2]

(2) 32ನೇ ಅಥವಾ 33ನೇ ಪ್ರಕರಣದ ಮೇರೆಗೆ ಯಾವ ಸ್ವತ್ತಿನ ಬಗ್ಗೆ ಸಹಕಾರ ಸಂಘವು ಪ್ರಥಮ ಚಾರ್ಜನ್ನು ಹೊಂದಿರಲು ಹಕ್ಕು ಹೊಂದಿರುವುದೋ ಆ ಸ್ವತ್ತನ್ನು ಸದರಿ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ವಿಲೆ ಮಾಡುವ ಅಥವಾ ಅಂಥ ಕ್ಲೇಮಿಗೆ ಬಾಧಕವಾಗುವ ಯಾವುದೇ ಇತರ ಕೃತ್ಯವನ್ನು ಮಾಡುವ ಸಂಘದ ಯಾರೇ ಸದಸ್ಯ ಅಥವಾ ಹಿಂದಿನ ಸದಸ್ಯ ಅಥವಾ ಮೃತ ಸದಸ್ಯನ ನಾಮನಿರ್ದೇಶಿತನು, ವಾರಸುದಾರನು ಅಥವಾ ಕಾನೂನುಸಮ್ಮತ ಪ್ರತಿನಿಧಿಯು, [1][ಐದು ಸಾವಿರ][1] ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕುದು.

(3) ಬುದ್ಧಿಪೂರ್ವಕವಾಗಿ ಸುಳ್ಳು ವಿವರಪತ್ರ ತಯಾರಿಸುವ ಅಥವಾ ಸುಳ್ಳು ಮಾಹಿತಿಯನ್ನು ಒದಗಿಸುವ ಸಹಕಾರ ಸಂಘವು ಅಥವಾ ಅದರ [3][ಪದಾಧಿಕಾರಿಯು][3] ಅಥವಾ ಸದಸ್ಯನು, ಅಥವಾ ಈ ಅಧಿನಿಯಮದ ಉಪಬಂಧಗಳ ಮೇರೆಗೆ ಹೊರಡಿಸಲಾದ ಯಾವುದೇ ಸಮನನ್ನು, ಕೋರಿಕೆಯನ್ನು ಅಥವಾ ಕಾನೂನುಸಮ್ಮತ ಲಿಖಿತ ಆದೇಶವನ್ನು ಬುದ್ಧಿಪೂರ್ವಕವಾಗಿ ಅಥವಾ ಯಾವುದೇ ಯುಕ್ತ ಕಾರಣವಿಲ್ಲದೆ ಪಾಲಿಸದ ಅಥವಾ ಈ ಅಧಿನಿಯಮದ ಉಪಬಂಧಗಳ ಮೇರೆಗೆ ಈ ಬಗ್ಗೆ ಅಧಿಕೃತನಾದ ವ್ಯಕ್ತಿಯಿಂದ ಅಥವಾ ವ್ಯಕ್ತಿಗಳ ನಿಕಾಯದಿಂದ ಕೇಳಲಾಗುವ ಯಾವುದೇ ಮಾಹಿತಿಯನ್ನು ಬುದ್ಧಿಪೂರ್ವಕವಾಗಿ ಒದಗಿಸದ ಅಥವಾ ಯಾವುದೇ ದಸ್ತಾವೇಜುಗಳನ್ನು ಅಥವಾ ಸ್ವತ್ತನ್ನು ಒಪ್ಪಿಸಿಕೊಡದ ಯಾರೇ ವ್ಯಕ್ತಿಯು, [1][ಮೂರು ತಿಂಗಳಿಗೆ ಕಡಿಮೆಯಿಲ್ಲದ ಆದರೆ ಎರಡು ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಮತ್ತು ಐದು ನೂರು ರೂಪಾಯಿಗಳಿಗೆ ಕಡಿಮೆಯಿಲ್ಲದ ಆದರೆ ಮೂರು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯವಾಗತಕ್ಕುದು.][1]

(4) 34ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗಿನ ಕಳೆತವನ್ನು ಮಾಡಲು ಸಾಕಷ್ಟು ಕಾರಣವಿಲ್ಲದೆ ತಪ್ಪುವ ಅಥವಾ 34ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ತಾನು ಕಳೆತ ಮಾಡಿದ ಮೊಬಲಗನ್ನು ಅಂಥ ಕಳೆತವನ್ನು ಮಾಡಿದ ದಿನಾಂಕದಿಂದ ಹದಿನಾಲ್ಕು ದಿವಸಗಳ ಅವಧಿಯೊಳಗೆ ಆ ಸಹಕಾರ ಸಂಘಕ್ಕೆ ಸಂದಾಯ ಮಾಡಲು ತಪ್ಪುವ ಯಾರೇ ನಿಯೋಜಕನು, ಅವನು, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನು ಮೇರೆಗೆ ಅವನ ವಿರುದ್ಧ ಕೈಕೊಳ್ಳಬಹುದಾದ ಯಾವುದೇ ಕ್ರಮಕ್ಕೆ ಪ್ರತಿಕೂಲವಾಗದಂತೆ, [1][ಮೂರು ತಿಂಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಮೂರು ಸಾವಿರ ರೂಪಾಯಿವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕುದು.][1]

(5) 16ನೇ ಪ್ರಕರಣದ [4][(4)ನೇ ಉಪಪ್ರಕರಣ][4]ದ, 24ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದ (ii)ನೇ ಉಪಖಂಡದ, 28ನೇ ಪ್ರಕರಣದ (1)ನೇ ಉಪಪ್ರಕರಣದ, 56ನೇ ಪ್ರಕರಣದ, 58ನೇ ಪ್ರಕರಣದ, 59ನೇ ಪ್ರಕರಣದ, 60ನೇ ಪ್ರಕರಣದ ಅಥವಾ 62ನೇ ಪ್ರಕರಣದ ಉಪಬಂಧಗಳನ್ನು ಪಾಲಿಸಲು ಕರ್ತವ್ಯಲೋಪ ಮಾಡುವ ಕರ್ತವ್ಯಲೋಪ ಮಾಡಿದ ಸಹಕಾರ ಸಂಘ, ಮತ್ತು ಕರ್ತವ್ಯಲೋಪ ಮಾಡಿದ ಆ ಸಂಘದ ಪ್ರತಿಯೊಬ್ಬ [3][ಪದಾಧಿಕಾರಿಯು][3] ಅಥವಾ ಅದರ ಸಮಿತಿಯ ಸದಸ್ಯನು, [1][ಮೂರು][1] ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯವಾಗತಕ್ಕುದು.

(6) ಯಾರೇ ವ್ಯಕ್ತಿಯು -

(i) 17ನೇ ಪ್ರಕರಣದ ಮೇರೆಗೆ ಸದಸ್ಯನಾಗಲು ಅರ್ಹನಲ್ಲದ ವ್ಯಕ್ತಿಯು ಸದಸ್ಯನಾಗಿ ಪ್ರವೇಶ ಕೋರಿ ಸಹಕಾರ ಸಂಘಕ್ಕೆ ಅರ್ಜಿ ಸಲ್ಲಿಸಿದರೆ ಅಥವಾ ಸದಸ್ಯನಾದರೆ ಅಥವಾ ಆ ಪ್ರಕರಣದ [5][(2)ನೇ ಉಪಪ್ರಕರಣದ ಮೇರೆಗೆ

---

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1976ರ ಅಧಿನಿಯಮ ಸಂಖ್ಯೆ 71ರ ಮೂಲಕ 3.11.1976 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಸದಸ್ಯನಾಗಿರುವುದು ಮುಕ್ತಾಯವಾದ ತರುವಾಯ ಅಂಥ ಯಾವುದೇ ಸಹಕಾರ ಸಂಘದ ಸದಸ್ಯನಾಗಿ ವರ್ತಿಸಿದರೆ ಅಥವಾ ಸದಸ್ಯನ ಯಾವುವೇ ಹಕ್ಕುಗಳನ್ನು ಅಥವಾ ವಿಶೇಷಾಧಿಕಾರಗಳನ್ನು ಚಲಾಯಿಸಿದರೆ;][5]

(ii) 19ನೇ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ಸದಸ್ಯನ ಹಕ್ಕುಗಳನ್ನು ಚಲಾಯಿಸಿದರೆ;

(iii) 87ನೇ ಪ್ರಕರಣದ (3)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ಮಾಹಿತಿಯನ್ನು ಅಥವಾ ದಸ್ತಾವೇಜನ್ನು ಒದಗಿಸಲು ಬುದ್ಧಿಪೂರ್ವಕವಾಗಿ ತಪ್ಪಿದರೆ;

(iv) 95ನೇ ಪ್ರಕರಣದ (1)ನೇ ಉಪಪ್ರಕರಣವನ್ನು ಉಲ್ಲಂಘಿಸಿ, ಅಡಮಾನ ಸ್ವತ್ತನ್ನು ಗುತ್ತಿಗೆಗೆ ಕೊಟ್ಟರೆ

- ಅವನು [1][ಮೂರು ತಿಂಗಳ ಅವಧಿಯವರೆಗೆ ವಿಸ್ತರಿಸಬಹುದಾದ ಕಾರಾವಾಸ ದಿಂದ ಅಥವಾ ಮೂರು ಸಾವಿರ ರೂಪಾಯಿವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ][1] ದಂಡನೀಯನಾಗತಕ್ಕುದು.

[2][(7) 26ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಮತನೀಡಲು ಅರ್ಹನಲ್ಲದ ಯಾವನೇ ವ್ಯಕ್ತಿಯು ಅಂಥ ಮತವನ್ನು ಚಲಾಯಿಸಿದರೆ, ಅವನು [1][ಮೂರು ಸಾವಿರ][1] ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯವಾಗತಕ್ಕುದು.][2]

[3][(8) ರೂಪುಗೊಳ್ಳುತ್ತಿರುವ ಸಹಕಾರ ಸಂಘದ ಸಲುವಾಗಿ ಷೇರು ಹಣವೆಂದು ಯಾವುದೇ ಹಣವನ್ನು ಸಂಗ್ರಹಿಸುತ್ತಿರುವ ಯಾರೇ ವ್ಯಕ್ತಿಯು ಆ ಹಣವನ್ನು, ರೂಪುಗೊಳ್ಳುತ್ತಿರುವ ಆ ಸಹಕಾರ ಸಂಘದ ಹೆಸರಿನಲ್ಲಿ ಈ ಬಗ್ಗೆ ರಿಜಿಸ್ಟ್ರಾರನು ನಿರ್ದಿಷ್ಟಪಡಿಸಬಹುದಾದ ಸಹಕಾರ ಬ್ಯಾಂಕಿನಲ್ಲಿ ಅದನ್ನು ಸಂಗ್ರಹಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಠೇವಣಿ ಇಡದೇ ಇದ್ದರೆ, ಅವನು ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಮೂರು ಸಾವಿರ ರೂಪಾಯಿವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕುದು.

(9) ಯಾವುದೇ ಮಾಹಿತಿ, ಪುಸ್ತಕಗಳು ಮತ್ತು ದಾಖಲೆಗಳನ್ನು ತನ್ನ ವಶದಲ್ಲಿ ಹೊಂದಿರುವ ಸಹಕಾರ ಸಂಘದ ಯಾರೇ [4][ಪದಾಧಿಕಾರಿ][4] ಅಥವಾ ಸದಸ್ಯನು 30,[4][31][4], 63,64,65, 65ಬಿ ಅಥವಾ 73 - ಈ ಪ್ರಕರಣಗಳ ಮೇರೆಗೆ ರಾಜ್ಯಸರ್ಕಾರದಿಂದ ಅಥವಾ ರಿಜಿಸ್ಟ್ರಾರನಿಂದ ಅಥವಾ ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕನಿಂದ ನೇಮಿಸಲಾದ ಅಥವಾ ಅಧಿಕೃತನಾದ ಮತ್ತು ಅವುಗಳ ಸ್ವಾಧೀನ ಪಡೆಯಲು ಹಕ್ಕುದಾರನಾದ ವ್ಯಕ್ತಿಗೆ ಅಂಥ ಮಾಹಿತಿ ನೀಡಲು ಅಥವಾ ಅಂಥ ಪುಸ್ತಕ ಇಲ್ಲವೇ ದಾಖಲೆಯನ್ನು ಹಾಜರುಪಡಿಸಲು ಅಥವಾ ನೆರವು ನೀಡಲು ತಪ್ಪಿದಲ್ಲಿ, ಅವನು ಮೂರು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕುದು.

(10) ಸಹಕಾರ ಸಂಘಕ್ಕೆ ಸೇರಿದ ಪುಸ್ತಕಗಳು, ದಾಖಲೆಗಳು, ನಗದು, ಭದ್ರತೆಗಳು ಮತ್ತು ಇತರ ಸ್ವತ್ತು - ಇವುಗಳ ಅಭಿರಕ್ಷೆಯನ್ನು, 30, [4][31][4] ಅಥವಾ 73 - ಈ ಪ್ರಕರಣಗಳ ಮೇರೆಗೆ ನೇಮಿಸಲಾದ ವ್ಯಕ್ತಿಗೆ ಅಥವಾ ಅವುಗಳ ಸ್ವಾಧೀನವನ್ನು ಪಡೆಯಲು ಹಕ್ಕುದಾರನಾದ ಯಾರೇ ಇತರ ವ್ಯಕ್ತಿಗೆ ಅಥವಾ [4][ಪದಾಧಿಕಾರಿಗೆ][4] ಒಪ್ಪಿಸಿ ಕೊಡಲು ತಪ್ಪಿದ ಸಹಕಾರ ಸಂಘದ ಯಾರೇ [4][ಪದಾಧಿಕಾರಿ][4] ಅಥವಾ ಇತರ ವ್ಯಕ್ತಿಯು ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಮೂರು ಸಾವಿರ ರೂಪಾಯಿವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕುದು.

(11) ರಿಜಿಸ್ಟ್ರಾರನು ಅಥವಾ ಮಧ್ಯಸ್ಥಗಾರ ಅಥವಾ ನ್ಯಾಯಾಧಿಕರಣವು ಮಾಡಿದ ನಿರ್ಧಾರ, ಐತೀರ್ಪು ಅಥವಾ ಆದೇಶವನ್ನು ಪಾಲಿಸಲು ಬುದ್ಧಿಪೂರ್ವಕವಾಗಿ ತಪ್ಪುವ, ಸಹಕಾರ ಸಂಘದ ಯಾರೇ [4][ಪದಾಧಿಕಾರಿ][4] ಅಥವಾ ಸದಸ್ಯನು ಒಂದು ವರ್ಷದವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಮೂರು ಸಾವಿರ ರೂಪಾಯಿವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕುದು.

(12) ತನ್ನ ಸ್ವಂತ ಬಳಕೆಗಾಗಿ ಅಥವಾ ಪ್ರಯೋಜನಕ್ಕಾಗಿ ಅಥವಾ ತನಗೆ ಹಿತಾಸಕ್ತಿ ಇರುವ ವ್ಯಕ್ತಿಯ ಬಳಕೆ ಅಥವಾ ಪ್ರಯೋಜನಕ್ಕಾಗಿ ಯಾರೇ ಇತರ ವ್ಯಕ್ತಿಯ ಹೆಸರಿನಲ್ಲಿ ಬುದ್ಧಿಪೂರ್ವಕವಾಗಿ ಸಾಲ ಮಂಜೂರಾತಿಗೆ ಶಿಫಾರಸು ಮಾಡುವ ಅಥವಾ ಅದನ್ನು ಮಂಜೂರು ಮಾಡುವ, ಸಹಕಾರ ಸಂಘಗಳ ಯಾರೇ [4][ಪದಾಧಿಕಾರಿ][4] ಅಥವಾ ಸದಸ್ಯನು, ಒಂದು ವರ್ಷದವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಮೂರು ಸಾವಿರ ರೂಪಾಯಿವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕುದು.

[5][(12ಎ) 63ನೇ ಪ್ರಕರಣದ ಮೇರೆಗೆ ಲೆಕ್ಕ ಪರಿಶೋಧನೆಯನ್ನು ಅಥವಾ 64ನೇ ಪ್ರಕರಣದ ಮೇರೆಗೆ ವಿಚಾರಣೆಯನ್ನು ಅಥವಾ 65ನೇ ಪ್ರಕರಣದ ಅಥವಾ 65ಬಿ ಪ್ರಕರಣದ ಮೇರೆಗೆ ಪರಿಶೀಲನೆಯನ್ನು ನಡೆಸುತ್ತಿರುವ ಯಾರೇ ವ್ಯಕ್ತಿಯು;

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1976ರ ಅಧಿನಿಯಮ ಸಂಖ್ಯೆ 71ರ ಮೂಲಕ 3.11.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ
3. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(i) ಅವನು ಲೆಕ್ಕ ಪರಿಶೋಧನೆ, ವಿಚಾರಣೆ ಅಥವಾ ಪರಿಶೀಲನೆಯ ಸಮಯದಲ್ಲಿ ಗಮನಿಸಿದ ಅಥವಾ ಆ ಸಮಯದಲ್ಲಿ ಸರಿಯಾಗಿ ಶ್ರದ್ಧೆ ವಹಿಸಿದ್ದರೆ ಗಮನಕ್ಕೆ ಬರಬಹುದಾಗಿದ್ದ ಯಾವುದೇ ದೋಷಗಳು ಅಥವಾ ಅಕ್ರಮವನ್ನು ಅವನ ವರದಿಯಲ್ಲಿ ಉದ್ದೇಶಪೂರ್ವಕವಾಗಿ ನಮೂದಿಸುವುದನ್ನು ಬಿಟ್ಟರೆ, ಅಥವಾ

(ii) ಅವನ ವರದಿಯಲ್ಲಿ ಉದ್ದೇಶಪೂರ್ವಕವಾಗಿ ತಪ್ಪು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರೆ; ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ಅವನ ವಿರುದ್ಧ ತೆಗೆದುಕೊಳ್ಳಬಹುದಾದ ಯಾವುದೇ ಇತರ ಕ್ರಮಕ್ಕೆ ಪ್ರತಿಕೂಲವಾಗದಂತೆ ಆರುತಿಂಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಮೂರು ಸಾವಿರ ರೂ.ಗಳ ವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕುದು.

(12ಬಿ) ಒಬ್ಬ ಮುಖ್ಯ ಕಾರ್ಯನಿರ್ವಾಹಕನು ನಗದು ಪುಸ್ತಕಗಳ ನಿಯಮ ಕಾಲಿಕ ಉದ್ಧೃತಗಳನ್ನು ಮತ್ತು ಸಾಮಾನ್ಯ ಸಭೆಗಳ ಮತ್ತು ಸಮಿತಿ ಸಭೆಗಳ ವ್ಯವಹರಣೆಗಳ ಪ್ರಮಾಣಿತ ಪ್ರತಿಗಳನ್ನು 29ನೇ ಪ್ರಕರಣದ (6)ನೇ ಉಪ-ಪ್ರಕರಣದ ಮೇರೆಗೆ ನಿರ್ದಿಷ್ಟಪಡಿಸಿದ ಅವಧಿಯೊಳಗೆ ರಿಜಿಸ್ಟ್ರಾರರಿಗೆ ಮತ್ತು ಹಣಕಾಸು ನೀಡಿಕೆ ಬ್ಯಾಂಕಿಗೆ ಅಥವಾ ಸಾಲನೀಡಿಕೆ ಏಜೆನ್ಸಿಗೆ ಕಳುಹಿಸಲು ವಿಫಲವಾದಲ್ಲಿ ಅವನು ಆರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಗೆ ಕಾರಾವಾಸದಿಂದ ಅಥವಾ ಮೂರು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕುದು.][5]

(13) ಸಮುಚಿತ ಅಪೀಲು ಪ್ರಾಧಿಕಾರವು ನೀಡಿದ ಆದೇಶ ಯಾವುದಾದರೂ ಇದ್ದರೆ ಅದೂ ಸೇರಿದಂತೆ, 71ನೇ ಪ್ರಕರಣದ ಮೇರೆಗಿನ ಯಾವುದೇ ತೀರ್ಮಾನ ಅಥವಾ ಐತೀರ್ಪನ್ನು ಜಾರಿಗೆ ತರುವಲ್ಲಿ ತಪ್ಪುವ ಯಾವುದೇ ಸಹಕಾರ ಸಂಘ ಅಥವಾ ಅದರ ಯಾರೇ [1][ಪದಾಧಿಕಾರಿ][1] ಅಥವಾ ನಿಯೋಜಿತ ಅಥವಾ ವೇತನ ಪಡೆಯುವ ನೌಕರನು ಅಂಥ ನಿರ್ಧಾರ ಇಲ್ಲವೇ ಐತೀರ್ಪು ಹಣದ ಡಿಕ್ರಿಯಾಗಿಲ್ಲದಿರುವಲ್ಲಿ, ಅಂಥ ಕರ್ತವ್ಯಲೋಪವನ್ನು,-

(ಎ) ಮಂಡಲಿಯು ಮಾಡಿರುವಲ್ಲಿ, ಐದು ಸಾವಿರ ರೂಪಾಯಿವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕುದು, ಮತ್ತು

(ಬಿ) ಅಂಥ ಸಹಕಾರ ಸಂಘದ [1][ಪದಾಧಿಕಾರಿ][1] ಅಥವಾ ನಿಯೋಜಿತ ಅಥವಾ ವೇತನ ಪಡೆಯುವ ನೌಕರನು ಮಾಡಿರುವಲ್ಲಿ, ಅವನು ಆರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಐದು ಸಾವಿರ ರೂಪಾಯಿವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕುದು.

(14) ಯಾವೊಂದು ಸಹಕಾರ ಸಂಘದ ಸ್ವತ್ತುಗಳು ಅಥವಾ ನಿಧಿಗಳನ್ನು ಈ ಅಧಿನಿಯಮ, ಸಂಘದ ನಿಯಮಗಳು ಅಥವಾ ಉಪವಿಧಿಗಳ ಉಪಬಂಧಗಳಿಗನುಸಾರವಾಗಿ ಹೊರತು ಅನ್ಯಥಾ ಬಳಸುವ ಅಥವಾ ಬಳಸಲು ಅವಕಾಶ ನೀಡುವ ಆ ಸಹಕಾರ ಸಂಘದ ಸಮಿತಿಯ ಸದಸ್ಯನು ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕುದು.

(15) ಸಹಕಾರ ಸಂಘದ [1][ಪದಾಧಿಕಾರಿ][1], ನಿಯೋಜಿತ, ವೇತನ ಪಡೆದ ನೌಕರ ಅಥವಾ ಸದಸ್ಯನು ಬೇನಾಮಿ ಸಾಲವನ್ನು ಪಡೆದಿರುವಲ್ಲಿ ಅಥವಾ ಮಂಜೂರು ಮಾಡಿರುವಲ್ಲಿ, ಯಾವುದೇ ಅಧಿಕೃತ ಕಾರ್ಯವನ್ನು ಮಾಡಲು ಅಥವಾ ಮಾಡದೇ ಇರಲು, ತನ್ನ ಅಧಿಕೃತ ಪ್ರಕಾರ್ಯಗಳನ್ನು ಚಲಾಯಿಸಲು ಯಾರೇ ವ್ಯಕ್ತಿಗೆ ಅನುಗ್ರಹ ಅಥವಾ ಅನುಗ್ರಹ ಕೋರಲು ಇಲ್ಲವೇ ತೋರದೆ ಇರಲು ಪ್ರೇರಣೆ ಅಥವಾ ಬಹುಮಾನವಾಗಿ ಕಾನೂನುಬದ್ಧ ಸಂಭಾವನೆಯಲ್ಲದ ಯಾವುದೇ ಬಗೆಯ ಪರಿತೋಷವನ್ನು ಯಾರೇ ವ್ಯಕ್ತಿಯಿಂದ ತನಗೆ ಅಥವಾ ಇತರ ಯಾರೇ ವ್ಯಕ್ತಿಗಾಗಿ ಸ್ವೀಕರಿಸಿದಲ್ಲಿ ಅಥವಾ ಪಡೆಯುವಲ್ಲಿ ಅಥವಾ ಸ್ವೀಕರಿಸಲು ಒಪ್ಪಿದಲ್ಲಿ ಅಥವಾ ಪಡೆಯಲು ಪ್ರಯತ್ನಿಸಿದಲ್ಲಿ ಅಥವಾ ಈ ಅಧಿನಿಯಮ, ಸಹಕಾರ ಸಂಘದ ನಿಯಮಗಳು ಅಥವಾ ಉಪವಿಧಿಗಳ ಉಪಬಂಧಗಳಿಗನುಸಾರವಾಗಿ ಅಲ್ಲದೆ ಯಾವೊಂದು ಸಹಕಾರ ಸಂಘದ ಸ್ವತ್ತುಗಳನ್ನು ಅಥವಾ ನಿಧಿಗಳನ್ನು ಬಳಸಿದಲ್ಲಿ ಅಥವಾ ಬಳಸಲು ಅವಕಾಶ ನೀಡುವಲ್ಲಿ; ಅಥವಾ ಸಹಕಾರ ಸಂಘದ ಯಾರೇ [1][ಪದಾಧಿಕಾರಿ][1] ಸಭೆಗಳಿಗೆ ವಾಸ್ತವವಾಗಿ ಹಾಜರಾಗದೆ ಮಂಡಳಿಯ ಅಥವಾ ಇತರ ಸಮಿತಿಯ ಸಭೆಯ ನಡವಳಿಗಳಲ್ಲಿ ಸಹಿ ಹಾಕಿದಲ್ಲಿ, ಅವನು ಭ್ರಷ್ಟ ಆಚರಣೆಯ ತಪ್ಪಿತಸ್ಥನಾಗಿದ್ದಾನೆ ಎಂದು ಭಾವಿಸತಕ್ಕುದು, ಮತ್ತು -

(i) ಯಾವುದೇ ಭ್ರಷ್ಟಾಚಾರ ಎಸಗಿ ತಪ್ಪಿತಸ್ಥನಾಗಿದ್ದಾನೆ ಎಂದು ಕಂಡುಬರುವ ಪ್ರತಿಯೊಬ್ಬ ವ್ಯಕ್ತಿಯು ಒಂದು ವರ್ಷದವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಐದು ಸಾವಿರ ರೂಪಾಯಿವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕುದು;

(ii) (i)ನೇ ಖಂಡದ ಮೇರೆಗೆ ಅಪರಾಧದ ಬಗ್ಗೆ ಅಪರಾಧ ನಿರ್ಣೀತನಾದ ಪ್ರತಿಯೊಬ್ಬ ವ್ಯಕ್ತಿಯು ಯಾವುದೇ ಸಹಕಾರ ಸಂಘದ [1][ಪದಾಧಿಕಾರಿ][1] ಅಥವಾ ನಿಯೋಜಿತ ಅಥವಾ ವೇತನ ಪಡೆಯುವ ನೌಕರನಾಗಿರಲು ಖಾಯಂ ಆಗಿ ಅನರ್ಹನಾಗತಕ್ಕುದು.

(16) ಬೇರೆಡೆಗಳಲ್ಲಿ ಯಾವ ದಂಡನೆಯನ್ನೂ ಉಪಬಂಧಿಸಿರದ ಈ ಅಧಿನಿಯಮದ ಉಪಬಂಧಗಳ ಯಾವುದೇ ಉಲ್ಲಂಘನೆಗಾಗಿ ತಪ್ಪಿತಸ್ಥನಾದ ಯಾವುದೇ ಸಹಕಾರ ಸಂಘ ಅಥವಾ ಅದರ ಸಮಿತಿಯ ಸದಸ್ಯ ಅಥವಾ ಅದರ ಯಾರೇ ನಿಯೋಜಿತನು ಮೂರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಐದು ಸಾವಿರ ರೂಪಾಯಿವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕುದು.][3]

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**110. ಕಂಪನಿಗಳಿಂದ ಅಪರಾಧಗಳು:-** (1) 109ನೇ ಪ್ರಕರಣದ (1)ನೇ ಉಪಪ್ರಕರಣದ ಅಥವಾ (4)ನೇ ಉಪಪ್ರಕರಣದ ಮೇರೆಗೆ ಅಥವಾ ಯಾವುದೇ ನಿಯಮದ ಮೇರೆಗೆ ಕಂಪನಿಯು ಅಪರಾಧವನ್ನು ಎಸಗಿರುವಲ್ಲಿ, ಆ ಅಪರಾಧವನ್ನು ಎಸಗಲಾದ ಕಾಲಕ್ಕೆ, ಕಂಪನಿಯ ವ್ಯವಹಾರಗಳ ನಿರ್ವಹಣೆಯ ಬಗ್ಗೆ ಕಂಪನಿಯ ಪ್ರಭಾರದಲ್ಲಿದ್ದ ಅಥವಾ ಅದಕ್ಕೆ ಹೊಣೆಗಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯು ಮತ್ತು ಕಂಪೆನಿಯೂ ಸಹ, ಆ ಅಪರಾಧದ ತಪ್ಪಿತಸ್ಥರೆಂದು ಭಾವಿಸತಕ್ಕುದು ಮತ್ತು ತದನುಸಾರ ಅವರ ವಿರುದ್ಧದ ವ್ಯವಹರಣೆಗಳಿಗೆ ಗುರಿಯಾಗಲು ಮತ್ತು ದಂಡಿತರಾಗಲು ಬದ್ಧರಾಗತಕ್ಕುದು:

ಪರಂತು, ಅಂಥ ಯಾರೇ ವ್ಯಕ್ತಿಯು ಆ ಅಪರಾಧವು ತನ್ನ ಅರಿವಿಗೆ ಬಾರದಂತೆ ನಡೆಯಿತೆಂದು ಅಥವಾ ಅಂಥ ಅಪರಾಧವು ನಡೆಯುವುದನ್ನು ತಡೆಯಲು ಎಲ್ಲಾ ಯುಕ್ತ ಜಾಗರೂಕತೆಯನ್ನು ವಹಿಸಿದ್ದೆನೆಂದು ರುಜುವಾತುಪಡಿಸಿದರೆ, ಈ ಉಪಪ್ರಕರಣದಲ್ಲಿರುವುದು ಯಾವುದೂ, ಅಂಥ ವ್ಯಕ್ತಿಯನ್ನು ಈ ಹಿಂದೆ ಹೇಳಿದ ಉಪಪ್ರಕರಣದಲ್ಲಿ ಅಥವಾ ಯಾವುದೇ ನಿಯಮಗಳಲ್ಲಿ ಉಪಬಂಧಿಸಲಾದ ಯಾವುದೇ ಶಿಕ್ಷೆಗೆ ಗುರಿಪಡಿಸತಕ್ಕುದಲ್ಲ.

(2) (1)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ, 109ನೇ ಪ್ರಕರಣದ (1)ನೇ ಅಥವಾ (4)ನೇ ಉಪಪ್ರಕರಣದ ಅಥವಾ ಯಾವುದೇ ನಿಯಮದ ಮೇರೆಗಿನ ಅಪರಾಧವನ್ನು ಯಾವುದೇ ಕಂಪೆನಿಯು ಎಸಗಿರುವಲ್ಲಿ ಮತ್ತು ಆ ಅಪರಾಧವು ಕಂಪೆನಿಯ ಯಾರೇ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ಅಥವಾ ಪರೋಕ್ಷ ಸಮ್ಮತಿಯಿಂದ ನಡೆಯಿತೆಂದು ಅಥವಾ ಅವರ ಯಾವುದೇ ನಿರ್ಲಕ್ಷ್ಯತೆಗೆ ಆರೋಪಿಸಬಹುದಾಗಿದೆಯೆಂದು ರುಜುವಾತಾಗಿರುವಲ್ಲಿ, ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯನ್ನು ಸಹ, ಆ ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕುದು ಮತ್ತು ತದನುಸಾರವಾಗಿ ಅವರು ವ್ಯವಹರಣೆಗೆ ಗುರಿಯಾಗತಕ್ಕುದು ಮತ್ತು ದಂಡನೀಯರಾಗತಕ್ಕುದು.

ವಿವರಣೆ:- ಈ ಪ್ರಕರಣದ ಉದ್ದೇಶಗಳಿಗಾಗಿ,-

(ಎ) 'ಕಂಪನಿ' ಎಂದರೆ ನಿಗಮಿತ ನಿಕಾಯ ಮತ್ತು ಅದು ಫರ್ಮು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಫರ್ಮಿನ ಸಂಬಂಧದಲ್ಲಿ 'ನಿರ್ದೇಶಕ' ಅಂದರೆ, ಫರ್ಮಿನ ಪಾಲುಗಾರ.

[1][**110ಎ. ಅಪರಾಧಗಳ ರಾಜಿಗೆ ಅಧಿಕಾರ:-** (1) ರಿಜಿಸ್ಟ್ರಾರನು, ಒಬ್ಬ ವ್ಯಕ್ತಿಯು [2][63ನೇ ಪ್ರಕರಣದ ಉಲ್ಲಂಘನೆಯ ಸಂಬಂಧದಲ್ಲಿ ಒಂದು ಅಪರಾಧವನ್ನು ಹೊರತುಪಡಿಸಿ][2] 109ನೇ ಪ್ರಕರಣದ (1), (1ಎ), (2), (5) (7) (8) (13) ಮತ್ತು (14)ನೇ ಉಪ-ಪ್ರಕರಣಗಳ ಮೇರೆಗೆ ದಂಡನೀಯವಾದ ಯಾವುದೇ ಅಪರಾಧವನ್ನು ಮಾಡಿದ್ದಾನೆಂದು ಯುಕ್ತ ಅನುಮಾನ ಉಂಟಾದ ಯಾರೇ ವ್ಯಕ್ತಿಯಿಂದ, ಅಂಥ ವ್ಯಕ್ತಿಯು ಅಪರಾಧ ಮಾಡಿದ್ದಾನೆಂದು ಅನುಮಾನಿಸಲಾದ ಅಪರಾಧಕ್ಕಾಗಿ ರಾಜಿ ರೂಪದಲ್ಲಿ ಒಂದು ಸಾವಿರ ರೂಪಾಯಿಗಳಿಗಿಂತ ಹೆಚ್ಚಿಲ್ಲದಂತಹ ಮೊತ್ತವನ್ನು ಸ್ವೀಕರಿಸಬಹುದು.

[2][(1ಎ) ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕನು, 109ನೇ ಪ್ರಕರಣದ (9)ನೇ ಉಪಪ್ರಕರಣದ ಅಡಿಯಲ್ಲಿ ದಂಡನೀಯವಾದ ಮತ್ತು 63ನೇ ಪ್ರಕರಣದ ಉಲ್ಲಂಘನೆಯ ಸಂಬಂಧದಲ್ಲಿನ ಒಂದು ಅಪರಾಧ ಮಾಡಿದ್ದಾನೆಂದು ಅನುಮಾನಿಸಲಾದ ಒಬ್ಬ ವ್ಯಕ್ತಿಯಿಂದ ಅಂಥ ವ್ಯಕ್ತಿಯು ಎಸಗಿದ್ದಾನೆಂದು ಅನುಮಾನಿಸಲಾದ ಅಪರಾಧಕ್ಕೆ ರಾಜಿ ರೂಪದಲ್ಲಿ ಒಂದು ಸಾವಿರ ರೂಪಾಯಿಗಳಿಗೆ ಮೀರದ ಮೊತ್ತದ ಮೊಬಲಗನ್ನು ಸ್ವೀಕರಿಸಬಹುದು.][2]

(2) ಅಂಥ ಹಣವನ್ನು ರಿಜಿಸ್ಟ್ರಾರನಿಗೆ [2][ಅಥವಾ ಸಂದರ್ಭಾನುಸಾರ ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕನಿಗೆ][2] ಸಂದಾಯ ಮಾಡಿದ ನಂತರ ಅನುಮಾನಿತ ವ್ಯಕ್ತಿಯು ಬಂಧನದಲ್ಲಿದ್ದರೆ, ಅವನನ್ನು ಬಿಟ್ಟುಬಿಡತಕ್ಕುದು. ಯಾವುದಾದರೂ ಸ್ವತ್ತನ್ನು ಆಸ್ತಿ ಮಾಡಿದ್ದರೆ ಅದನ್ನು ಬಿಡುಗಡೆ ಮಾಡತಕ್ಕುದು ಮತ್ತು ಅಂಥ ವ್ಯಕ್ತಿಯ ಅಥವಾ ಸ್ವತ್ತಿನ ವಿರುದ್ಧ ಯಾವ ಮುಂದಿನ ವ್ಯವಹರಣೆಯನ್ನು ನಡೆಸತಕ್ಕುದಲ್ಲ.][1]

**111. ಅಪರಾಧಗಳ ಸಂಜ್ಞಾನ:-** (1) ಮೊದಲ ದರ್ಜೆಯ ಮ್ಯಾಜಿಸ್ಟ್ರೇಟನ ನ್ಯಾಯಾಲಯಕ್ಕಿಂತ ಕಡಿಮೆಯಲ್ಲದ ಯಾವ ನ್ಯಾಯಾಲಯವೂ, ಈ ಅಧಿನಿಯಮದ ಮೇರೆಗೆ ಯಾವುದೇ ಅಪರಾಧಗಳ ಅಧಿವಿಚಾರಣೆ ಮಾಡತಕ್ಕುದಲ್ಲ.

[3][(2) (ಎ) ಲೆಕ್ಕ ಪರಿಶೋಧನೆಯ ಕಾರಣದಿಂದ ಉದ್ಭವಿಸುವ ವಿಷಯಗಳಲ್ಲಿ [4][ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕನಿಂದ;][4]

(ಬಿ) ಇತರ ವಿಷಯಗಳ ಸಂಬಂಧದಲ್ಲಿ ರಿಜಿಸ್ಟ್ರಾರನಿಂದ

- ಪೂರ್ವ ಮಂಜೂರಾತಿ ಇಲ್ಲದೆ ಈ ಅಧಿನಿಯಮದ ಮೇರೆಗೆ ಯಾವ ಪ್ರಾಸಿಕ್ಯೂಷನನ್ನೂ ಹೂಡತಕ್ಕುದಲ್ಲ.

(3) (2)ನೇ ಉಪಪ್ರಕರಣದ ಮೇರೆಗಿನ ಮಂಜೂರಾತಿಯನ್ನು,-

(i) ಸಂಬಂಧಪಟ್ಟ ವ್ಯಕ್ತಿಗೆ ತನ್ನ ಪ್ರಕರಣದ ಬಗ್ಗೆ ಅಹವಾಲು ಹೇಳಿಕೊಳ್ಳಲು ಅವಕಾಶ ಕೊಟ್ಟ ಹೊರತು; ಮತ್ತು

(ii) ಸಂದರ್ಭಾನುಸಾರ [4][ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕ][4] ನಿಗೆ ಅಥವಾ ರಿಜಿಸ್ಟ್ರಾರನಿಗೆ ಸಂಬಂಧಪಟ್ಟ ವ್ಯಕ್ತಿಯು ಸದ್ಭಾವನೆಯಿಂದ ವರ್ತಿಸಿದನೆಂದು ಮನದಟ್ಟಾದ ಹೊರತು

- ಕೊಡತಕ್ಕುದಲ್ಲ.][3]

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 2004ರ ಅಧಿನಿಯಮ ಸಂಖ್ಯೆ 13ರ ಮೂಲಕ ಸೇರಿಸಲಾಗಿದೆ.
3. 1980ರ ಅಧಿನಿಯಮ ಸಂಖ್ಯೆ 3ರ ಮೂಲಕ 11.8.1977 ರಂತೆ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

## ಅಧ್ಯಾಯ - XV

### ಸಂಕೀರ್ಣ

[1][[2][111ಎ xxx][2]

**111ಬಿ. ದಾಖಲೆಗಳ ಸಂರಕ್ಷಣೆ:-** ಸಹಕಾರ ಸಂಘದ ಪುಸ್ತಕಗಳು ಮತ್ತು ಪ್ರತಿಯೊಂದು ದಾಖಲೆಗಳನ್ನು, ರಿಜಿಸ್ಟ್ರಾರನು ಕಾಲಕಾಲಕ್ಕೆ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ನಿರ್ದೇಶಿಸಬಹುದಾದಂಥ ಅವಧಿಯವರೆಗೆ ಸಂರಕ್ಷಿಸತಕ್ಕುದು. [3][ಮುಖ್ಯ ಕಾರ್ಯ ನಿರ್ವಾಹಕನು][3], ನಾಶಪಡಿಸಿದ ದಾಖಲೆಗಳ ಪಟ್ಟಿಯೊಂದನ್ನು ತಯಾರಿಸಿ ಇಟ್ಟುಕೊಳ್ಳತಕ್ಕುದು.][1]

**112. "ಸಹಕಾರ" ಪದದ ಉಪಯೋಗದ ವಿರುದ್ಧ ಪ್ರತಿಷೇಧ:-** ಸಹಕಾರ ಸಂಘವಲ್ಲದ ಇತರ ಯಾವನೇ ವ್ಯಕ್ತಿಯು, "ಸಹಕಾರ" ಎಂಬ ಪದವು ಅಥವಾ ಭಾರತದ ಯಾವುದೇ ಭಾಷೆಯಲ್ಲಿ ಅದಕ್ಕೆ ಸಮಾನವಾದ ಪದವು ಯಾವ ಹೆಸರಿನ ಅಥವಾ ಶೀರ್ಷಿಕೆಯ ಭಾಗವಾಗಿರುವುದೋ ಆ ಯಾವುದೇ ಹೆಸರಿನ ಅಥವಾ ಶೀರ್ಷಿಕೆಯ ಅಡಿಯಲ್ಲಿ ಯಾವುದೇ ವ್ಯಾಪಾರ ಮಾಡತಕ್ಕುದಲ್ಲ ಅಥವಾ ವ್ಯವಹಾರ ನಡೆಸತಕ್ಕುದಲ್ಲ:

ಪರಂತು, ಸಹಕಾರ ಸಂಘಗಳ ಅಧಿನಿಯಮ, 1912 (1912ರ ಕೇಂದ್ರ ಅಧಿನಿಯಮII) ಇದು ಪ್ರವರ್ತನೆಯಲ್ಲಿ ಬಂದ ದಿನಾಂಕದಂದು ಯಾವ ಹೆಸರಿನಲ್ಲಿ ಅಥವಾ ಶೀರ್ಷಿಕೆಯಲ್ಲಿ ಯಾರೇ ವ್ಯಕ್ತಿಯು ಅಥವಾ ಹಿತಾಸಕ್ತಿಯುಳ್ಳ ಅವನ ವಾರಸುದಾರನು ವ್ಯವಹಾರವನ್ನು ನಡೆಸಿದ್ದನೋ ಅಂಥ ಯಾವುದೇ ಹೆಸರನ್ನು ಅಥವಾ ಶೀರ್ಷಿಕೆಯನ್ನು ಅವನು ಉಪಯೋಗಿಸುವುದಕ್ಕೆ, ಈ ಪ್ರಕರಣದಲ್ಲಿರುವುದು ಯಾವುದೂ ಅನ್ವಯವಾಗತಕ್ಕುದಲ್ಲ.

**113. ಸಹಕಾರ ಸಂಘದ ವಿಳಾಸ:-** [4][(1)][4] ಎಲ್ಲ ನೋಟೀಸುಗಳನ್ನು ಮತ್ತು ತಿಳಿವಳಿಕೆಗಳನ್ನು ಕಳುಹಿಸಿಕೊಡಬಹುದಾದ ಮತ್ತು ನಿಯಮಗಳ ಮೇರೆಗೆ [3][ನೋಂದಾಯಿತ ಕಚೇರಿ ಮತ್ತು ವಿಳಾಸವನ್ನು][3] ಪ್ರತಿಯೊಂದು ಸಹಕಾರ ಸಂಘವು ಹೊಂದಿರತಕ್ಕುದು ಮತ್ತು ಅದರ ಯಾವುದೇ ಬದಲಾವಣೆಯ ಬಗ್ಗೆ ಅಂಥ ಬದಲಾವಣೆಯ ದಿನದಿಂದ ಮೂವತ್ತು ದಿನಗಳೊಳಗೆ ರಿಜಿಸ್ಟ್ರಾರನಿಗೆ ನೋಟೀಸನ್ನು ಕಳುಹಿಸತಕ್ಕುದು.

[5][(2) ಸರ್ವಸದಸ್ಯರ ಸಭೆಯೂ ಸೇರಿದಂತೆ ಸಹಕಾರ ಸಂಘದ ಎಲ್ಲ ಸಭೆಗಳನ್ನೂ ಅದರ ನೋಂದಾಯಿತ ಕಚೇರಿಯಲ್ಲಿ ನಡೆಸತಕ್ಕುದು:

ಪರಂತು, ಅಂಥ ಯಾವುದೇ ಸಭೆಯನ್ನು ನೋಂದಾಯಿತ ಕಚೇರಿಯಲ್ಲಿ ನಡೆಸಲು ಸಾಕಷ್ಟು ಸ್ಥಳಾವಕಾಶ ಇಲ್ಲದಿದ್ದರೆ ನೋಂದಾಯಿತ ಕಚೇರಿಯು ಇರುವ ನಗರ, ಪಟ್ಟಣ ಅಥವಾ ಹಳ್ಳಿಯ ಒಳಗೆ ಇತರ ಯಾವುದೇ ಸ್ಥಳದಲ್ಲಿ ರಿಜಿಸ್ಟ್ರಾರನ ಪೂರ್ವ ಅನುಮತಿ ಪಡೆದು ನಡೆಸಬಹುದು.][5]

**114. ಅಧಿನಿಯಮದ, ನಿಯಮಗಳ ಮತ್ತು ಉಪವಿಧಿಗಳ ಪ್ರತಿಯು ಪರಿಶೀಲನೆಗೆ ಮುಕ್ತವಾಗಿರುವುದು:-** ಪ್ರತಿಯೊಂದು ಸಹಕಾರ ಸಂಘವು ಸಂಘದ [3][ನೋಂದಾಯಿತ ಕಚೇರಿಯಲ್ಲಿ][3] ಎಲ್ಲ ಯುಕ್ತ ಕಾಲಗಳಲ್ಲಿಯೂ ಈ ಅಧಿನಿಯಮದ, ನಿಯಮಗಳ ಮತ್ತು ಅದರ ಉಪವಿಧಿಗಳ ಪ್ರತಿಯನ್ನು ಯಾವುದೇ ಶುಲ್ಕವಿಲ್ಲದೆ ಪರಿಶೀಲನೆಗಾಗಿ ಇಡತಕ್ಕುದು.

[6][**115.** (x x x x )][6]

**116. ಆದೇಶಗಳ ಉಚ್ಚರಿಸುವಿಕೆ:-** ಈ ಅಧಿನಿಯಮದ ಮೇರೆಗೆ ರಿಜಿಸ್ಟ್ರಾರನು ಅಥವಾ ಯಾರೇ ಅಧಿಕಾರಿಯು ಅಥವಾ ಇತರ ವ್ಯಕ್ತಿಯು ಅಥವಾ ಸಮಾಪಕನು ಮಾಡಿದ ಅಥವಾ ಕೊಟ್ಟ ಪ್ರತಿಯೊಂದು ಆದೇಶ, ತೀರ್ಮಾನ ಅಥವಾ ಐತೀರ್ಪನ್ನು, ಮೊಕದ್ದಮೆಯು ಕೊನೆಯದಾಗಿ ಸುನಾವಣೆಯಾದ ದಿನಾಂಕದಂದು ಅಥವಾ ಪಕ್ಷಕಾರರಿಗೆ ಯುಕ್ತ ನೋಟೀಸು ಕೊಟ್ಟು ಯಾವುದೇ ಮುಂದಿನ ದಿನದಂದು ಉಚ್ಚರಿಸತಕ್ಕುದು.

[7][**117. ವಿವಾದಗಳ ಇತ್ಯರ್ಥದ ಸಲುವಾಗಿ ಪ್ರಕ್ರಿಯೆ ಮತ್ತು 70ನೇ ಪ್ರಕರಣದ ಮೇರೆಗೆ ವಿವಾದವನ್ನು ತೀರ್ಮಾನಕ್ಕಾಗಿ ಯಾರಿಗೆ ಉಲ್ಲೇಖಿಸಲಾಯಿತೋ ಆ ರಿಜಿಸ್ಟ್ರಾರನ ಅಥವಾ ಯಾರೇ ಇತರ ವ್ಯಕ್ತಿಯ ಅಧಿಕಾರ:-** 70ನೇ ಪ್ರಕರಣದ ಮೇರೆಗೆ ತೀರ್ಮಾನಕ್ಕಾಗಿ ವಿವಾದವನ್ನು ಯಾರಿಗೆ ಉಲ್ಲೇಖಿಸಲಾಗಿದೆಯೋ ಆ ರಿಜಿಸ್ಟ್ರಾರನು ಅಥವಾ ಯಾರೇ ಇತರ ವ್ಯಕ್ತಿಯು 71ನೇ ಪ್ರಕರಣದ ಮೇರೆಗೆ ವಿವಾದವನ್ನು ಸುನಾವಣೆ ಮಾಡುವಾಗ ನಿಯಮಿಸಲಾದ ರೀತಿಯಲ್ಲಿ ಆ ವಿವಾದವನ್ನು ಸುನಾವಣೆ ಮಾಡತಕ್ಕುದು ಮತ್ತು ಸಿವಿಲ್ ಪ್ರಕ್ರಿಯೆ ಸಂಹಿತೆ, 1908ರ ಮೂಲಕ ಸಿವಿಲ್ ನ್ಯಾಯಾಲಯದ ಸಂಬಂಧದಲ್ಲಿ ಉಪಬಂಧಿಸಲಾದಂತೆ ಅದೇ ಉಪಾಯಗಳ

1. 1976ರ ಅಧಿನಿಯಮ ಸಂಖ್ಯೆ 19ರ ಮೂಲಕ 20.1.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 27.10.1998 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1976ರ ಅಧಿನಿಯಮ ಸಂಖ್ಯೆ 71ರ ಮೂಲಕ 3.11.1976 ರಿಂದ ಜಾರಿಗೆ ಬರುವಂತೆ ಮರು ಸಂಖ್ಯೆ ನೀಡಲಾಗಿದೆ.
5. 1976ರ ಅಧಿನಿಯಮ ಸಂಖ್ಯೆ 71ರ ಮೂಲಕ 3.11.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ
6. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
7. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಮೂಲಕ ಮತ್ತು ಸಾಧ್ಯವಾದಷ್ಟು ಮಟ್ಟಿಗೆ ಅದೇ ರೀತಿಯಲ್ಲಿ ಹಿತಾಸಕ್ತಿಯುಳ್ಳ ಪಕ್ಷಕಾರರು ಅಥವಾ ಅವರಲ್ಲಿ ಯಾರೊಬ್ಬರು ಸೇರಿ ಸಾಕ್ಷಿಗಳನ್ನು ಸಮನು ಮಾಡುವ ಮತ್ತು ಅವರ ಹಾಜರಾತಿಯನ್ನು ಒತ್ತಾಯಪಡಿಸುವ ಮತ್ತು ಪ್ರಮಾಣ, ದೃಢೀಕರಣ ಅಥವಾ ಶಪಥ ಪತ್ರದ ಮೇಲೆ ಸಾಕ್ಷ್ಯವನ್ನು ಕೊಡುವಂತೆ ಒತ್ತಾಯಪಡಿಸುವ ಮತ್ತು ದಸ್ತಾವೇಜುಗಳನ್ನು ಹಾಜರುಪಡಿಸಲು ಒತ್ತಾಯಪಡಿಸುವ ಅಧಿಕಾರಗಳನ್ನು ಹೊಂದಿರತಕ್ಕುದು.

(2) ಸಂದರ್ಭಾನುಸಾರ, ವಿವಾದವನ್ನು ತೀರ್ಮಾನಿಸುವ ರಿಜಿಸ್ಟ್ರಾರನ ಅಥವಾ ಇತರ ಯಾರೇ ವ್ಯಕ್ತಿಯ ಅನುಮತಿ ಇದ್ದ ಹೊರತು, ವಿವಾದದ ಸುನಾವಣೆಯಲ್ಲಿ, ಯಾರೇ ಪಕ್ಷಕಾರನು ವಕೀಲನಿಂದ ಪ್ರತಿನಿಧಿಸಲ್ಪಡತಕ್ಕುದಲ್ಲ.

(3) (ಎ) ಸಹಕಾರ ಸಂಘದ ಸದಸ್ಯನಾಗಿ ಇರುವ ಅಥವಾ ಇರದ ವ್ಯಕ್ತಿಯು, ವಿವಾದದ ಪಕ್ಷಕಾರನಾಗಿರುವ ಬೇರೊಬ್ಬ ವ್ಯಕ್ತಿಯ ಸ್ವತ್ತಿನಲ್ಲಿ ಯಾವುದೇ ಹಿತಾಸಕ್ತಿಯನ್ನು ಆರ್ಜಿಸಿದ್ದಾನೆಂದು ವಿವಾದವನ್ನು ಯಾರಿಗೆ ಉಲ್ಲೇಖಿಸಲಾಗಿದೆಯೋ ಆ ರಿಜಿಸ್ಟ್ರಾರನಿಗೆ ಅಥವಾ ಇತರ ಯಾರೇ ವ್ಯಕ್ತಿಗೆ ಮನದಟ್ಟಾದರೆ, ಸ್ವತ್ತಿನಲ್ಲಿ ಹಿತಾಸಕ್ತಿ ಆರ್ಜಿಸಿರುವ ಆ ವ್ಯಕ್ತಿಯು ವಿವಾದಕ್ಕೆ ಪಕ್ಷಕಾರನಾಗಿ ಸೇರಬಹುದೆಂದು ಅವನು ಆದೇಶ ಮಾಡಬಹುದು; ಮತ್ತು ರಿಜಿಸ್ಟ್ರಾರನು ಅಥವಾ ಅವನ ನಾಮನಿರ್ದೇಶಿತನು ಅಥವಾ ಇತರ ಯಾರೇ ವ್ಯಕ್ತಿಯು ಆ ಉಲ್ಲೇಖದ ಮೇಲೆ ಮಾಡಬಹುದಾದಂಥ ಯಾವುದೇ ತೀರ್ಮಾನವು ಹಾಗೆ ಸೇರಿಸಲಾದ ಪಕ್ಷಕಾರನಿಗೆ ಅವನು ವಿವಾದದ ಮೂಲ ಪಕ್ಷಕಾರನಾಗಿದ್ದರೆ ಹೇಗೋ ಹಾಗೆ ಬಂಧನಕಾರಿಯಾಗತಕ್ಕುದು.

(ಬಿ) ವಿವಾದವನ್ನು ತಪ್ಪು ವ್ಯಕ್ತಿಯ ಹೆಸರಿನಲ್ಲಿ ಹೂಡಿರುವಲ್ಲಿ, ಅಥವಾ ಎಲ್ಲಾ ಪ್ರತಿವಾದಿಗಳನ್ನು ಸೇರಿಸಿಲ್ಲದಿರುವಲ್ಲಿ, 70ನೇ ಪ್ರಕರಣದ ಮೇರೆಗೆ ವಿವಾದವನ್ನು ತೀರ್ಮಾನಕ್ಕಾಗಿ ಯಾರಿಗೆ ಉಲ್ಲೇಖಿಸಲಾಗಿದೆಯೋ ಆ ರಿಜಿಸ್ಟ್ರಾರನಿಗೆ ಅಥವಾ ಇತರ ಯಾರೇ ವ್ಯಕ್ತಿಗೆ ವಿವಾದದ ಸುನಾವಣೆಯ ಯಾವುದೇ ಹಂತದಲ್ಲಿ ಆ ತಪ್ಪು ಸದ್ಭಾವನಾಪೂರ್ವಕವಾಗಿದ್ದಿತೆಂದು ಮನದಟ್ಟಾದರೆ, ಅವನು ತನಗೆ ನ್ಯಾಯವೆನಿಸುವ ನಿಬಂಧನೆಗಳ ಮೇಲೆ ಬೇರೆ ಯಾರೇ ಇತರ ವ್ಯಕ್ತಿಯನ್ನು ವಾದಿಯೆಂದು ಅಥವಾ ಪ್ರತಿವಾದಿಯೆಂದು ಪ್ರತಿಸ್ಥಾಪಿಸಲು ಅಥವಾ ಜೊತೆಗೆ ಸೇರಿಸಲು ಆದೇಶ ಮಾಡಬಹುದು.

(ಸಿ) 70ನೇ ಪ್ರಕರಣದ ಮೇರೆಗೆ ವಿವಾದವನ್ನು ತೀರ್ಮಾನಕ್ಕಾಗಿ ಯಾರಿಗೆ ಉಲ್ಲೇಖಿಸಲಾಗಿದೆಯೋ ಆ ರಿಜಿಸ್ಟ್ರಾರನು ಅಥವಾ ಯಾರೇ ಇತರ ವ್ಯಕ್ತಿಯು, ವ್ಯವಹರಣೆಗಳ ಯಾವುದೇ ಹಂತದಲ್ಲಿ ಪಕ್ಷಕಾರನ ಅರ್ಜಿಯ ಮೇಲೆ ಅಥವಾ ಅರ್ಜಿ ಇಲ್ಲದೆಯೆ, ಮತ್ತು ಸಂದರ್ಭಾನುಸಾರ, ವಿವಾದವನ್ನು ತೀರ್ಮಾನಿಸುವ ರಿಜಿಸ್ಟ್ರಾರನಿಗೆ ಅಥವಾ ಯಾರೇ ಇತರ ವ್ಯಕ್ತಿಗೆ ನ್ಯಾಯವೆಂದು ಕಂಡುಬರಬಹುದಾದಂಥ ನಿಬಂಧನೆಗಳ ಮೇಲೆ ವಾದಿಯೆಂದು ಅಥವಾ ಪ್ರತಿವಾದಿಯೆಂದು ಅನುಚಿತವಾಗಿ ಸೇರಿಸಲಾದ ಯಾರೇ ಪಕ್ಷಕಾರನ ಹೆಸರನ್ನು ತೆಗೆದುಹಾಕತಕ್ಕುದೆಂದು ಮತ್ತು ವಾದಿಯೆಂದು ಅಥವಾ ಪ್ರತಿವಾದಿಯೆಂದು ಸೇರಿಸಬೇಕಾಗಿದ್ದ ಯಾರೇ ವ್ಯಕ್ತಿಯ ಹೆಸರನ್ನು ಸೇರಿಸತಕ್ಕುದೆಂದು ಅಥವಾ ರಿಜಿಸ್ಟ್ರಾರನು ಅಥವಾ ಸಂದರ್ಭಾನುಸಾರ 70ನೇ ಪ್ರಕರಣದ ಮೇರೆಗೆ ವಿವಾದವನ್ನು ತೀರ್ಮಾನಿಸುವ ಯಾರೇ ಇತರ ವ್ಯಕ್ತಿಯ ಮುಂದೆ ಯಾವ ವ್ಯಕ್ತಿಯ ಹಾಜರಾತಿಯು ರಿಜಿಸ್ಟ್ರಾರನಿಗೆ ಅಥವಾ ಅಂಥ ವ್ಯಕ್ತಿಗೆ ಆ ವಿವಾದದಲ್ಲಿ ಒಳಗೊಂಡ ಎಲ್ಲ ಪ್ರಶ್ನೆಗಳನ್ನು ಕುರಿತು ಪರಿಣಾಮಕಾರಿಯಾಗಿ ಮತ್ತು ಸಂಪೂರ್ಣವಾಗಿ ನ್ಯಾಯನಿರ್ಣಯ ಮಾಡಲು ಮತ್ತು ಇತ್ಯರ್ಥಗೊಳಿಸಲು ಅವಶ್ಯವಾಗಬಹುದೋ ಆ ವ್ಯಕ್ತಿಯ ಹೆಸರನ್ನು ಸೇರಿಸತಕ್ಕುದೆಂದು ಆದೇಶ ಮಾಡುವುದು.

(ಡಿ) ವಿವಾದಕ್ಕೆ ಪಕ್ಷಕಾರನಾಗಿದ್ದು ಒಂದೇ ವ್ಯಾಜ್ಯ ಕಾರಣದ ಸಂಬಂಧದಲ್ಲಿ ಒಂದಕ್ಕಿಂತ ಹೆಚ್ಚು ಪರಿಹಾರಗಳಿಗೆ ಹಕ್ಕಿರುವ ಯಾರೇ ವ್ಯಕ್ತಿಯು ಅಂಥ ಎಲ್ಲ ಅಥವಾ ಅವುಗಳಲ್ಲಿ ಯಾವುವೇ ಪರಿಹಾರಗಳನ್ನು ಕ್ಲೇಮು ಮಾಡಬಹುದು, ಆದರೆ ಅಂಥ ಎಲ್ಲಾ ಪರಿಹಾರಗಳನ್ನು ಕ್ಲೇಮು ಮಾಡುವುದನ್ನು ಅವನು ಬಿಟ್ಟಿದ್ದರೆ, 70ನೇ ಪ್ರಕರಣದ ಮೇರೆಗೆ ವಿವಾದವನ್ನು ತೀರ್ಮಾನಕ್ಕಾಗಿ ಯಾರಿಗೆ ಉಲ್ಲೇಖಿಸಲಾಗಿದೆಯೋ ಆ ರಿಜಿಸ್ಟ್ರಾರನ ಅಥವಾ ಇತರ ಯಾರೇ ವ್ಯಕ್ತಿಯ ಅನುಮತಿ ಪಡೆದ ಹೊರತು, ಹಾಗೆ ಬಿಟ್ಟ ಯಾವುದೇ ಪರಿಹಾರದ ಸಲುವಾಗಿ ಅವನು ಕ್ಲೇಮು ಸಲ್ಲಿಸತಕ್ಕುದಲ್ಲ.][7]

**118. ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಗೆ ಪ್ರತಿಷೇಧ:-** (1) ಈ ಅಧಿನಿಯಮದಲ್ಲಿ ಉಪಬಂಧಿಸಿರುವುದನ್ನುಳಿದು, [1][ಯಾವುದೇ ಸಿವಿಲ್ ಕಾರ್ಮಿಕ ಅಥವಾ ರೆವಿನ್ಯೂ ನ್ಯಾಯಾಲಯವು ಅಥವಾ ಕೈಗಾರಿಕಾ ನ್ಯಾಯಾಧಿಕರಣವು][1],-

(ಎ) ಸಹಕಾರ ಸಂಘದ ಅಥವಾ ಉಪವಿಧಿಗಳ ಅಥವಾ ಯಾವುದೇ ಉಪವಿಧಿಯ ತಿದ್ದುಪಡಿಯ ನೋಂದಣಿಗೆ;

(ಬಿ) [2][ಅಥವಾ ಅದರ ಸದಸ್ಯರನ್ನು][2] ತೆಗೆದುಹಾಕುವುದು;

(ಸಿ) 70ನೇ ಪ್ರಕರಣದ ಮೇರೆಗೆ ರಿಜಿಸ್ಟ್ರಾರನಿಗೆ ಉಲ್ಲೇಖಿಸಬೇಕಾದ ಯಾವುದೇ ವಿವಾದಕ್ಕೆ ಅಥವಾ 100ನೇ ಪ್ರಕರಣದ ಮೇರೆಗೆ ಯಾವುದೇ ಹಣಗಳ ವಸೂಲಿಗೆ;

1. 2000ದ ಅಧಿನಿಯಮ ಸಂಖ್ಯೆ 2ರ ಮೂಲಕ 20.6.2000 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 2000ದ ಅಧಿನಿಯಮ ಸಂಖ್ಯೆ 2ರ ಮೂಲಕ 20.6.2000 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಡಿ) ಸಹಕಾರ ಸಂಘದ ಸಮಾಪನಕ್ಕೆ ಮತ್ತು ವಿಘಟನೆಗೆ ಸಂಬಂಧಿಸಿದ ಯಾವುದೇ ವಿಷಯಕ್ಕೆ

- ಸಂಬಂಧಪಟ್ಟಂತೆ ಯಾವುದೇ ಅಧಿಕಾರ ವ್ಯಾಪ್ತಿಯನ್ನು ಹೊಂದಿರತಕ್ಕುದಲ್ಲ.

(2) ಸಹಕಾರ ಸಂಘವು ಸಮಾಪನಗೊಳ್ಳುತ್ತಿರುವಾಗ, ರಿಜಿಸ್ಟ್ರಾರನ ಅನುಮತಿಯ ಹೊರತು ಮತ್ತು ಅವನು ವಿಧಿಸಬಹುದಾದ ನಿಬಂಧನೆಗಳಿಗೆ ಒಳಪಟ್ಟು, ಅಂಥ ಸಂಘದ ವ್ಯವಹಾರಗಳಿಗೆ ಸಂಬಂಧಿಸಿದ ಯಾವುದೇ ದಾವೆಯನ್ನು ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಮುಂದುವರಿಸತಕ್ಕುದಲ್ಲ ಅಥವಾ ಆ ಸಮಾಪಕನ ವಿರುದ್ಧ ಅಥವಾ ಆ ಸಂಘದ ಅಥವಾ ಅದರ ಯಾರೇ ಸದಸ್ಯನ ವಿರುದ್ಧ ಹೂಡತಕ್ಕುದಲ್ಲ.

(3) ಈ ಅಧಿನಿಯಮದಲ್ಲಿ ಉಪಬಂಧಿಸಿರುವುದನ್ನುಳಿದು, ಈ ಅಧಿನಿಯಮದ ಮೇರೆಗೆ ಮಾಡಲಾದ ಯಾವುದೇ ಆದೇಶ, ತೀರ್ಮಾನ ಅಥವಾ ಐತೀರ್ಪನ್ನು ಯಾವುದೇ ನ್ಯಾಯಾಲಯದಲ್ಲಿ ಯಾವುದೇ ಕಾರಣದ ಮೇಲೆ ಪ್ರಶ್ನಿಸತಕ್ಕುದಲ್ಲ.

**119. ಕಾಲಪರಿಮಿತಿ ಅಧಿನಿಯಮದ ಅನ್ವಯ:-** ಭಾರತೀಯ ಕಾಲ ಪರಿಮಿತಿ ಅಧಿನಿಯಮ, 1908ರ 4ನೇ, 5ನೇ, 12ನೇ ಮತ್ತು 14ನೇ ಪ್ರಕರಣಗಳ ಉಪಬಂಧಗಳು, ಈ ಅಧಿನಿಯಮದ ಮೇರೆಗೆ ಪುನರೀಕ್ಷಣೆ ಕೋರಿ ಯಾವುದೇ ಅಪೀಲಿನ ಅಥವಾ ಅರ್ಜಿಯ ಸಲ್ಲಿಕೆಗೆ ಅನ್ವಯವಾಗತಕ್ಕುದು.

**120. ನೋಂದಣಿಯ ಷರತ್ತುಗಳಿಂದ ಸಂಘಗಳನ್ನು ವಿನಾಯಿತಿಗೊಳಿಸುವ ಅಧಿಕಾರ:-** ಈ ಅಧಿನಿಯಮದಲ್ಲಿ ಏನೇ ಇದ್ದರೂ, ರಾಜ್ಯ ಸರ್ಕಾರವು, ಪ್ರತಿಯೊಂದು ಸಂದರ್ಭದಲ್ಲಿ ಮತ್ತು ಅದು ವಿಧಿಸಬಹುದಾದಂಥ ಷರತ್ತುಗಳು, ಯಾವುದಾದರೂ ಇದ್ದರೆ, ಅವುಗಳಿಗೊಳಪಟ್ಟು, ರಾಜಪತ್ರದಲ್ಲಿ ಪ್ರಕಟಿಸಿದ ವಿಶೇಷ ಆದೇಶದ ಮೂಲಕ ನೋಂದಣಿಗೆ ಸಂಬಂಧಿಸಿ ಈ ಅಧಿನಿಯಮದ ಯಾವುದೇ ಅಗತ್ಯಗಳಿಂದ ಯಾವುದೇ ಸಹಕಾರ ಸಂಘವನ್ನು ವಿನಾಯಿತಿಗೊಳಿಸಬಹುದು.

[1][**121. ಸಂಘಗಳಿಗೆ ವಿನಾಯಿತಿ ನೀಡುವ ಅಧಿಕಾರ:-** ರಾಜ್ಯ ಸರ್ಕಾರವು ರಾಜ್ಯಪತ್ರದಲ್ಲಿ ಸಾಮಾನ್ಯ ಅಥವಾ ವಿಶೇಷ ಆದೇಶವನ್ನು ಪ್ರಕಟಿಸುವ ಮೂಲಕ ಯಾವುದೇ ಸಹಕಾರ ಸಂಘವನ್ನು ಅಥವಾ ಸಹಕಾರ ಸಂಘಗಳ ಯಾವುದೇ ವರ್ಗವನ್ನು ಈ ಅಧಿನಿಯಮದ ಯಾವುದೇ ಉಪಬಂಧಗಳಿಂದ ವಿನಾಯಿತಿಗೊಳಿಸಬಹುದು ಅಥವಾ ಅಂಥ ಉಪಬಂಧಗಳು ಅಂಥ ಸಂಘಕ್ಕೆ ಅಥವಾ ಸಂಘಗಳ ವರ್ಗಕ್ಕೆ ಆ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಮಾರ್ಪಾಟುಗಳೊಂದಿಗೆ ಅನ್ವಯವಾಗತಕ್ಕುದೆಂದು ನಿರ್ದೇಶಿಸಬಹುದು.][1]

**122. ಸದಸ್ಯರ ರಿಜಿಸ್ಟರು:-** ಯಾವುದೇ ಸಹಕಾರ ಸಂಘವು ಇಟ್ಟುಕೊಂಡಿರುವ ಸದಸ್ಯರ ಅಥವಾ ಷೇರುಗಳ ಯಾವುದೇ ರಿಜಿಸ್ಟರು ಅಥವಾ ಪಟ್ಟಿಯು, ಅದರಲ್ಲಿ ನಮೂದಿಸಲಾದ ಈ ಕೆಳಕಂಡ ಯಾವುವೇ ವಿವರಗಳ ಬಗ್ಗೆ ಮೊದಲ ನೋಟದ ಸಾಕ್ಷ್ಯವಾಗಿರತಕ್ಕುದು:-

(ಎ) ಯಾರೇ ವ್ಯಕ್ತಿಯ ಹೆಸರನ್ನು ಸದಸ್ಯನೆಂದು ಅಂಥ ರಿಜಿಸ್ಟರಿನಲ್ಲಿ ಅಥವಾ ಪಟ್ಟಿಯಲ್ಲಿ ನಮೂದಿಸಿದ ದಿನಾಂಕ;

(ಬಿ) ಅಂಥ ಯಾರೇ ವ್ಯಕ್ತಿಯು ಸದಸ್ಯನಾಗಿದ್ದುದು ಕೊನೆಗೊಂಡ ದಿನಾಂಕ.

**123. ಸಹಕಾರ ಸಂಘಗಳ ಪುಸ್ತಕಗಳಲ್ಲಿರುವ ನಮೂದುಗಳ ರುಜುವಾತು:-** (1) ಸಹಕಾರ ಸಂಘವು ತನ್ನ ವ್ಯವಹಾರ ಕ್ರಮದಲ್ಲಿ ನಿಯತವಾಗಿ ಇಟ್ಟಿರುವ ಸಂಘದ ಪುಸ್ತಕದಲ್ಲಿನ ಯಾವುದೇ ನಮೂದಿನ ಪ್ರತಿಯನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಪ್ರಮಾಣೀಕರಿಸಿದರೆ, ಯಾವುದೇ ದಾವೆಯಲ್ಲಿ ಅಥವಾ ಕಾನೂನು ವ್ಯವಹರಣೆಗಳಲ್ಲಿ ಅಂಥ ನಮೂದಿನ ಮೊದಲ ನೋಟದ ಸಾಕ್ಷ್ಯವಾಗಿ ಸ್ವೀಕರಿಸತಕ್ಕುದು ಮತ್ತು ಅದರಲ್ಲಿ ದಾಖಲಿಸಿದ ವಿಷಯಗಳ, ವ್ಯವಹರಣೆಗಳ ಮತ್ತು ಲೆಕ್ಕಗಳ ಮೂಲ ನಮೂದನ್ನೆ ಸ್ವೀಕರಿಸಿದ್ದರೆ ಹೇಗೋ ಹಾಗೆ ಅದೇ ರೀತಿಯಲ್ಲಿ ಮತ್ತು ಅಷ್ಟರಮಟ್ಟಿಗೆ ಸಾಕ್ಷ್ಯವಾಗಿ ಸ್ವೀಕರಿಸತಕ್ಕುದು.

(2) ಸಹಕಾರ ಸಂಘವು ತನ್ನ ವ್ಯವಹಾರ ಕ್ರಮದಲ್ಲಿ ತಾನು ಪಡೆದುಕೊಂಡ ಮತ್ತು ತಾನು ಇಟ್ಟುಕೊಂಡ ಯಾವುದೇ ದಸ್ತಾವೇಜಿನ ಪ್ರತಿಗಳನ್ನು ಅಥವಾ ಅಂಥ ದಸ್ತಾವೇಜಿನ ಯಾವುವೇ ನಮೂದುಗಳ ಪ್ರತಿಗಳನ್ನು ಕೊಡಬಹುದು ಮತ್ತು ಹೀಗೆ ಕೊಡಲಾದ ಯಾವುದೇ ಪ್ರತಿಯು, ಅದನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಪ್ರಮಾಣೀಕರಿಸಿದರೆ, ಸಂದರ್ಭಾನುಸಾರ, ಮೂಲ ದಸ್ತಾವೇಜು ಅಥವಾ ಅದರಲ್ಲಿ ನಮೂದುಗಳನ್ನು ಯಾವ ರೀತಿಯಲ್ಲಿ ಮತ್ತು ಎಷ್ಟರಮಟ್ಟಿಗೆ ಯಾವುದೇ ಉದ್ದೇಶಕ್ಕಾಗಿ ಸಾಕ್ಷ್ಯದಲ್ಲಿ ಸ್ವೀಕರಿಸಬಹುದೋ ಅದೇ ರೀತಿಯಲ್ಲಿ ಮತ್ತು ಅಷ್ಟೇ ಮಟ್ಟಿಗೆ ಸ್ವೀಕರಿಸತಕ್ಕುದು.

(3) ಸಹಕಾರ ಸಂಘದ [2][ಯಾರೇ ಪದಾಧಿಕಾರಿಯನ್ನು][2] ಮತ್ತು ಸಮಾಪನದ ತರುವಾಯ ಯಾವ ಅಧಿಕಾರಿಯ ಕಚೇರಿಯಲ್ಲಿ ಸಹಕಾರ ಸಂಘದ ಪುಸ್ತಕಗಳನ್ನು ಇಡಲಾಗಿದೆಯೋ ಆ ಸಂಘವು ಅಥವಾ ಸಮಾಪಕನು ಪಕ್ಷಕಾರನಾಗಿಲ್ಲದ ಯಾವುದೇ ಕಾನೂನು ವ್ಯವಹರಣೆಗಳಲ್ಲಿ, ಈ ಪ್ರಕರಣದ ಮೇರೆಗೆ ಸಂಘದ ಯಾವ ಪುಸ್ತಕಗಳು ಅಥವಾ ದಸ್ತಾವೇಜುಗಳಲ್ಲಿರುವ ಒಳಾಂಶಗಳನ್ನು ರುಜುವಾತುಪಡಿಸಬಹುದೋ ಅವುಗಳನ್ನು ಹಾಜರುಪಡಿಸುವಂತೆ ಅಥವಾ ಅವುಗಳಲ್ಲಿ ದಾಖಲಾದ ವಿಷಯಗಳನ್ನು, ವಹಿವಾಟುಗಳನ್ನು ಮತ್ತು ಲೆಕ್ಕಗಳನ್ನು ರುಜುವಾತುಪಡಿಸಲು ಸಾಕ್ಷೀದಾರನಾಗಿ ಹಾಜರಾಗುವಂತೆ, ವಿಶೇಷ ಕಾರಣಕ್ಕಾಗಿ ನ್ಯಾಯಾಲಯ, ನ್ಯಾಯಾಧಿಕರಣ ಅಥವಾ ಮಧ್ಯಸ್ಥಗಾರನ ಆದೇಶದ ಮೇರೆಗಲ್ಲದೆ ಒತ್ತಾಯಿಸತಕ್ಕುದಲ್ಲ.

1. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಸೇರಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಂತೆ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**124. ಈ ಅಧಿನಿಯಮದ ಮೇರೆಗೆ ನೋಟೀಸಿನ ಜಾರಿ:-** ಈ ಅಧಿನಿಯಮದ ಮೇರೆಗೆ ಹೊರಡಿಸಲಾದ ಪ್ರತಿಯೊಂದು ನೋಟೀಸನ್ನು ಅಥವಾ ಮಾಡಲಾದ ಪ್ರತಿಯೊಂದು ಆದೇಶವನ್ನು ಯಾವ ವ್ಯಕ್ತಿಗೆ ಜಾರಿ ಮಾಡಬೇಕಾಗಿದೆಯೋ ಆ ವ್ಯಕ್ತಿಯ ಕೊನೆಯ ವಾಸದ ಅಥವಾ ವ್ಯವಹಾರ ಸ್ಥಳವೆಂದು ತಿಳಿಯಲಾದ ಸ್ಥಳದ ವಿಳಾಸಕ್ಕೆ ಸರಿಯಾಗಿ ಬರೆದ ಮತ್ತು ಆ ನೋಟೀಸನ್ನು ಅಥವಾ ಆದೇಶವನ್ನು ಒಳಗೊಂಡಿದ್ದ ಪತ್ರವನ್ನು ಮುಂಚಿತ ಹಣ ಸಂದಾಯ ಮಾಡಿದ ನೋಂದಾಯಿತ ಅಂಚೆಯ ಮೂಲಕ ಜಾರಿ ಮಾಡಬಹುದು ಮತ್ತು ಅದಕ್ಕೆ ವಿರುದ್ಧವಾಗಿ ರುಜುವಾತಾಗದಿದ್ದರೆ, ಅಂಥ ಜಾರಿಯು, ಪತ್ರವು ಸಾಮಾನ್ಯವಾಗಿ ಯಾವ ಕಾಲಕ್ಕೆ ತಲುಪಬಹುದೋ ಆ ಕಾಲಕ್ಕೆ ಜಾರಿಯಾಯಿತೆಂದು ಭಾವಿಸತಕ್ಕುದು.

[1][ಪರಂತು, ಪದಾಧಿಕಾರಿಗಳ ಚುನಾವಣೆಯ ಉದ್ದೇಶಕ್ಕಾಗಿ ನಡೆಸುವ ಸಭೆಯನ್ನು ಹೊರತುಪಡಿಸಿ ಸಹಕಾರ ಸಂಘದ ಯಾವುದೇ ಸಭೆಗೆ ಅಥವಾ ಚುನಾವಣೆಗೆ ಸಂಬಂಧಪಟ್ಟಂತೆ ನೋಟೀಸನ್ನು ಅಂಚೆ ಪ್ರಮಾಣಪತ್ರದ ಮೂಲಕ ನೀಡತಕ್ಕುದು.][1]

**125. ದಾವೆಗಳಲ್ಲಿ ನೋಟೀಸು ಅವಶ್ಯವಾಗಿರುವುದು:-** ಸಂಘದ ಸಂಘಟನೆಗೆ, ವ್ಯವಸ್ಥಾಪನೆಗೆ ಅಥವಾ ವ್ಯವಹಾರಕ್ಕೆ ಸಂಬಂಧಿಸಿದ ಯಾವುದೇ ಕಾರ್ಯದ ಸಂಬಂಧದಲ್ಲಿ, ವ್ಯಾಜ್ಯ ಕಾರಣವನ್ನು, ವಾದಿಯ ಹೆಸರನ್ನು ಮತ್ತು ಅವನ ವಾಸಸ್ಥಳ ಮತ್ತು ವಿವರವನ್ನು, ಮತ್ತು ಅವನು ಕ್ಲೇಮು ಮಾಡುವ ಪರಿಹಾರವನ್ನು ನಿರೂಪಿಸುವ ಲಿಖಿತ ನೋಟೀಸನ್ನು ರಿಜಿಸ್ಟ್ರಾರನಿಗೆ ಅಥವಾ ಆತನ ಕಚೇರಿಯಲ್ಲಿ ತಲುಪಿಸಿದ ತರುವಾಯ, ಎರಡು ತಿಂಗಳುಗಳು ಗತಿಸಿದ ಹೊರತು ಸಹಕಾರ ಸಂಘದ ಅಥವಾ ಅದರ ಯಾರೇ ಅಧಿಕಾರಿಯ ವಿರುದ್ಧ ಯಾವುದೇ ದಾವೆಯನ್ನು ಹೂಡತಕ್ಕುದಲ್ಲ ಮತ್ತು ಅಂಥ ನೋಟೀಸನ್ನು ಹಾಗೆ ತಲುಪಿಸಲಾಗಿದೆ ಎಂಬ ಹೇಳಿಕೆಯನ್ನು ಆ ವಾದ ಪತ್ರವು ಒಳಗೊಂಡಿರತಕ್ಕುದು.

**126. ಸಹಕಾರ ಸಂಘಗಳ ಕಾರ್ಯಗಳು ಕೆಲವೊಂದು ದೋಷಗಳಿಂದಾಗಿ ಅವಿಧಿಮಾನ್ಯವಾಗದಿರುವುದು:-** ಸಹಕಾರ ಸಂಘದ ಅಥವಾ ಯಾವುದೇ ಸಮಿತಿಯ ಅಥವಾ ಯಾರೇ ಅಧಿಕಾರಿಯ ಯಾವ ಕೃತ್ಯವೂ, ಸಂಘವನ್ನು ಅಥವಾ ಸಮಿತಿಯನ್ನು ರಚಿಸುವಲ್ಲಿ, ಅಥವಾ ಅಧಿಕಾರಿಯ ನೇಮಕದಲ್ಲಿ ಅಥವಾ ಚುನಾವಣೆಯಲ್ಲಿ ಯಾವುದೇ ದೋಷವಿದ್ದಿತೆಂಬ ಕಾರಣ ಮಾತ್ರದಿಂದ ಅಥವಾ ಅಂಥ ಅಧಿಕಾರಿಯು ನೇಮಕಕ್ಕೆ ಅರ್ಹನಾಗಿರಲಿಲ್ಲವೆಂಬ ಕಾರಣದ ಮೇಲೆ, ಅವಿಧಿಮಾನ್ಯವಾಗಿರುವುದಾಗಿ ಭಾವಿಸತಕ್ಕುದಲ್ಲ.

[2][**126ಎ.** XXX ][2]

**127. ನಷ್ಟಭರ್ತಿ:-** ಈ ಅಧಿನಿಯಮದ ಮೇರೆಗೆ ಸದ್ಭಾವನೆಯಿಂದ ಮಾಡಲಾದ ಅಥವಾ ಮಾಡಲಾಯಿತೆಂದು ತಾತ್ಪರ್ಯವಾಗುವ ಯಾವುದೇ ಕಾರ್ಯದ ಸಂಬಂಧದಲ್ಲಿ ರಿಜಿಸ್ಟ್ರಾರನ ಅಥವಾ ಅವನ ಅಧೀನದಲ್ಲಿರುವ ಅಥವಾ ಅವನ ಪ್ರಾಧಿಕಾರದ ಮೇಲೆ ಕೆಲಸ ಮಾಡುವ ಯಾರೇ ವ್ಯಕ್ತಿಯ ವಿರುದ್ಧ [3][ಅಥವಾ [4][ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕನ][4] ಅಥವಾ ಅವನಿಂದ ಅಧಿಕೃತನಾಗಿ ಕಾರ್ಯ ನಿರ್ವಹಿಸುತ್ತಿರುವ ಇತರ ಯಾರೇ ಅಧೀನ ಅಧಿಕಾರಿಯ][3] ವಿರುದ್ಧ [5][ಅಥವಾ ಸಹಕಾರ ಸಂಘದ ಹೊಸ ಸಮಿತಿಯ ವಿರುದ್ಧ ಅಥವಾ 30ನೇ ಪ್ರಕರಣ ಅಥವಾ 30ಎ ಪ್ರಕರಣದ ಮೇರೆಗೆ ನೇಮಿಸಲಾದ ಆಡಳಿತಗಾರ ಅಥವಾ ವಿಶೇಷಾಧಿಕಾರಿ][5]ಯ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಶನ್ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡಲು ಅವಕಾಶವಿರತಕ್ಕುದಲ್ಲ.

[6][**127ಎ. ಸಹಕಾರ ಸಂಘಗಳ [7][ಪದಾಧಿಕಾರಿಗಳು, ಸದಸ್ಯರು ಮತ್ತು ನೌಕರರು][7] ಸರ್ಕಾರಿ ನೌಕರರಾಗಿರುವುದು:-** ಮಾರಾಟ ಹಾಗೂ ವಸೂಲಿ ಅಧಿಕಾರಿಗಳೂ ಸೇರಿದಂತೆ ಸಹಕಾರ ಸಂಘದ [7][ಪ್ರತಿಯೊಬ್ಬ ಪದಾಧಿಕಾರಿಯನ್ನು, ಸಮಿತಿಯ ಪ್ರತಿಯೊಬ್ಬ ಸದಸ್ಯನನ್ನು ಮತ್ತು ಪ್ರತಿಯೋಬ್ಬ ನೌಕರನನ್ನು][7] ಭಾರತ ದಂಡ ಸಂಹಿತೆಯ 21ನೇ ಪ್ರಕರಣದ ಅರ್ಥವ್ಯಾಪ್ತಿಯಲ್ಲಿ ಸರ್ಕಾರಿ ನೌಕರನೆಂದು ಭಾವಿಸತಕ್ಕುದು.][6]

**128. ಕಂಪನಿಗಳ ಅಧಿನಿಯಮ, 1956 ಅನ್ವಯವಾಗದಿರುವುದು:-** ಕಂಪನಿಗಳ ಅಧಿನಿಯಮ, 1956ರ (ಕೇಂದ್ರ ಅಧಿನಿಯಮ 1956ರ 1) ಉಪಬಂಧಗಳು ಸಹಕಾರ ಸಂಘಗಳಿಗೆ ಅನ್ವಯವಾಗತಕ್ಕುದಲ್ಲ.

[4][**128ಎ. ಸಾಮಾನ್ಯ ಕೇಡರಿನ ರಚನೆ:-** (1) ಈ ಅಧಿನಿಯಮದಲ್ಲಿ, ನಿಯಮಗಳಲ್ಲಿ ಅಥವಾ ಉಪವಿಧಿಗಳಲ್ಲಿ ಏನೇ ಅಡಕವಾಗಿದ್ದರೂ, ರಿಜಿಸ್ಟ್ರಾರನು ಸಹಕಾರ ಚಳುವಳಿಯ ಹಿತಾಸಕ್ತಿಯಲ್ಲಿ, ಯಾವುದೇ ವರ್ಗದ ಸಹಕಾರ ಸಂಘಕ್ಕಾಗಿ ನೌಕರರ ಕೇಡರನ್ನು ರಚಿಸುವುದು ಅವಶ್ಯವೆಂದು ಪರಿಗಣಿಸಿದರೆ, ಆ ಸಹಕಾರ ಸಂಘಗಳ ವರ್ಗವು ಸಂಯೋಜಿತವಾಗಿರುವ ಒಂದು ಅಥವಾ ಹೆಚ್ಚು ಒಕ್ಕೂಟ ಸಂಘಗಳಿಗೆ, ತಾನು ನಿರ್ದಿಷ್ಟಪಡಿಸಬಹುದಾದಂಥ ಸಹಕಾರ ಸಂಘಗಳ ವರ್ಗದ ಅಂಥ ನೌಕರರ ಪ್ರವರ್ಗಗಳ ಸಂಬಂಧದಲ್ಲಿ ನೇಮಕಾತಿ, ವರ್ಗಾವಣೆ ಮತ್ತು ಶಿಸ್ತು ಕ್ರಮಗಳನ್ನು ಕುರಿತ ಅಧಿಕಾರವನ್ನು ಚಲಾಯಿಸಲು ಅಧಿಕಾರ ನೀಡತಕ್ಕುದು ಮತ್ತು ಸದರಿ ಉದ್ದೇಶವನ್ನು ಜಾರಿಗೆ ತರಲು ಅವಶ್ಯವಾಗಬಹುದಾದಂಥ ವಿನಿಯಮಗಳನ್ನು ರಚಿಸತಕ್ಕುದು. ಅಂಥ ಒಕ್ಕೂಟದ ಸಂಘಗಳಿಗೆ ರಿಜಿಸ್ಟ್ರಾರನು ಹಾಗೆ ಅಧಿಕಾರ ನೀಡಿರುವಲ್ಲಿ, ಸಂಯೋಜಿತ ಸಹಕಾರ ಸಂಘಗಳು, ವಿನಿಯಮಗಳು ಅವಕಾಶ ನೀಡುವಷ್ಟರಮಟ್ಟಿಗೆ ಹೊರತು ಅಂಥ ನೌಕರರ ಪ್ರವರ್ಗಗಳನ್ನು ಕುರಿತು ವ್ಯವಹರಿಸಲು ಅಧಿಕಾರ ಹೊಂದಿರತಕ್ಕುದಲ್ಲ.

1. 2001ರ ಅಧಿನಿಯಮ ಸಂಖ್ಯೆ 24ರ ಮೂಲಕ ಸೇರಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
3. 1980ರ ಅಧಿನಿಯಮ ಸಂಖ್ಯೆ 3ರ ಮೂಲಕ 11.8.1977 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1976ರ ಅಧಿನಿಯಮ ಸಂಖ್ಯೆ 70ರ ಮೂಲಕ 19.7.1976 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
6. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
7. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ರಿಜಿಸ್ಟ್ರಾರನು, ಈ ಉದ್ದೇಶಕ್ಕಾಗಿ ಒಕ್ಕೂಟ ಸಂಘವು ವಹಿಸಬಹುದಾದ ಅಥವಾ ವಹಿಸಿರುವ ವೆಚ್ಚ ಭರಿಸಲು ಅಂಥ ಮೊಬಲಗನ್ನು ಪ್ರತಿ ವರ್ಷವೂ ವಂತಿಗೆ ನೀಡಲು ಸಂಯೋಜಿತ ಸಹಕಾರ ಸಂಘಗಳನ್ನು ಅಗತ್ಯಪಡಿಸುವ ಅಧಿಕಾರವನ್ನು ಹೊಂದಿರತಕ್ಕುದು. ರಿಜಿಸ್ಟ್ರಾರನು ನಿರ್ದಿಷ್ಟಪಡಿಸಬಹುದಾದಂಥ ಮೊಬಲಗನ್ನು ಅಂಥ ಪ್ರಾಧಿಕಾರಕ್ಕೆ ಮತ್ತು ಆತನು ನಿರ್ದಿಷ್ಟಪಡಿಸಿದ ಸಮಯದೊಳಗೆ ಸಂದಾಯಮಾಡಲು ಯಾವುದೇ ಸಹಕಾರ ಸಂಘವು ತಪ್ಪಿದಲ್ಲಿ, ರಿಜಿಸ್ಟ್ರಾರನು ಆ ಪ್ರಾಧಿಕರವು ಸಲ್ಲಿಸಿದ ಅರ್ಜಿಯ ಮೇಲೆ ಹಾಗೂ ತಾನು ಅವಶ್ಯವೆಂದು ಪರಿಗಣಿಸಬಹುದಾದಂಥ ವಿಚಾರಣೆ ನಡೆಸಿದ ತರುವಾಯ, ಮೊಬಲಗನ್ನು ಸಂದಾಯ ಮಾಡುವಂತೆ ಸಹಕಾರ ಸಂಘವನ್ನು ಅಗತ್ಯಪಡಿಸುವ ಆದೇಶವನ್ನು ಮಾಡಬಹುದು, ಮತ್ತು ಅಂಥ ಪ್ರತಿಯೊಂದು ಆದೇಶವು 71ನೇ ಪ್ರಕರಣದ ಮೇರೆಗಿನ ಐತೀರ್ಪು ಆಗಿದ್ದರೆ ಹೇಗೋ ಹಾಗೆ ಆ ಸಹಕಾರ ಸಂಘದ ವಿರುದ್ಧ ಜಾರಿಯೋಗ್ಯವಾಗಿರತಕ್ಕುದು.][4]

[1][**128ಬಿ. ಪೋಲಿಸ್ ಅಧಿಕಾರಿಯ ಕರ್ತವ್ಯಗಳು:-** ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ ಅಥವಾ ಉಪ ಕಾನೂನಿನ ಮೇರೆಗೆ ರಿಜಿಸ್ಟ್ರಾರನಲ್ಲಿ ಅಥವಾ ಅಂಥ ಇತರ ವ್ಯಕ್ತಿಯಲ್ಲಿ ನಿಹಿತವಾಗಿರುವ ಯಾವುದೇ ಅಧಿಕಾರವನ್ನು ಕಾನೂನು ರೀತ್ಯಾ ಚಲಾಯಿಸಲು ಪೊಲೀಸ್ ಅಧಿಕಾರಿಯ ನೆರವನ್ನು ನ್ಯಾಯೋಚಿತವಾಗಿ ಕೇಳುವ ರಿಜಿಸ್ಟ್ರಾರನಿಗೆ ಅಥವಾ ರಿಜಿಸ್ಟ್ರಾರನ ಯಾರೇ ಅಧೀನ ವ್ಯಕ್ತಿಗೆ ನೆರವು ನೀಡುವುದು ಪ್ರತಿಯೊಬ್ಬ ಪೊಲೀಸ್ ಅಧಿಕಾರಿಯ ಕರ್ತವ್ಯವಾಗಿರತಕ್ಕುದು.][1]

**129. ನಿಯಮಗಳನ್ನು ರಚಿಸುವ ಅಧಿಕಾರಗಳು:-** (1) ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯರೂಪಕ್ಕೆ ತರುವ ಸಲುವಾಗಿ ಪೂರ್ವ ಪ್ರಕಟಣೆಯ ತರುವಾಯ ರಾಜ್ಯ ಸರಕಾರವು, ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ, ಇಡೀ ರಾಜ್ಯಕ್ಕಾಗಿ ಅಥವಾ ಅದರ ಯಾವುದೇ ಭಾಗಕ್ಕಾಗಿ ಮತ್ತು ಸಹಕಾರ ಸಂಘದ ಯಾವುದೇ ವರ್ಗಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಹಿಂದೆ ಹೇಳಿರುವ ಅಧಿಕಾರದ ಸಾಮಾನ್ಯತೆಗೆ ಬಾಧಕವಾಗದಂತೆ, ಅಂಥ ನಿಯಮಗಳು, ಈ ಮುಂಚೆ ಹೇಳಿರುವ ಎಲ್ಲ ಅಥವಾ ಅವುಗಳಲ್ಲಿ ಯಾವುವೇ ವಿಷಯಗಳ ಬಗ್ಗೆ ಉಪಬಂಧಿಸಬಹುದು, ಎಂದರೆ:-

(ಎ) ಸಹಕಾರ ಸಂಘದ ನೋಂದಣಿಯನ್ನು ನಿರಾಕರಿಸುವ ಆದೇಶವನ್ನು ರಿಜಿಸ್ಟ್ರಾರನು ಯಾವ ಅರ್ಜಿದಾರನಿಗೆ ಕಳಿಸಬಹುದು;

(ಬಿ) ಸಹಕಾರ ಸಂಘದ ಹೊಣೆಯ ಸ್ವರೂಪ ಮತ್ತು ವ್ಯಾಪ್ತಿ ಇವುಗಳಲ್ಲಿ ಬದಲಾವಣೆ ಮಾಡುವ ಪ್ರಕ್ರಿಯೆ ಮತ್ತು ಷರತ್ತುಗಳು;

(ಸಿ) ಸಹಕಾರ ಸಂಘದ ಯಾವ ವಿಷಯಗಳ ಬಗ್ಗೆ ಉಪವಿಧಿಗಳನ್ನು ರಚಿಸತಕ್ಕುದು ಅಥವಾ ರಚಿಸಬಹುದು;

(ಡಿ) ಉಪವಿಧಿಗಳ ತಿದ್ದುಪಡಿಯ ಸಲುವಾಗಿ ಸಹಕಾರ ಸಂಘವು ಅನುಸರಿಸಬೇಕಾದ ಪ್ರಕ್ರಿಯೆ;

(ಇ) ಸಹಕಾರ ಸಂಘಗಳ ಸದಸ್ಯರಾಗಿ ಪ್ರವೇಶವನ್ನು ಯಾವ ವ್ಯಕ್ತಿಗಳಿಗೆ ಕೊಡಬಹುದೋ ಆ ವ್ಯಕ್ತಿಗಳ ಅರ್ಹತೆಗಳು;

(ಎಫ್) ಸಹಕಾರ ಸಂಘದ ಸಭೆಯ ಅಧ್ಯಕ್ಷನಿಗೆ ದ್ವಿತೀಯ ಅಥವಾ ನಿರ್ಣಾಯಕ ಮತದ ವ್ಯವಸ್ಥೆ;

(ಜಿ) ಸಹಕಾರ ಸಂಘವು ತಾನು ಸದಸ್ಯನಾಗಿರುವ ಇನ್ನೊಂದು ಸಹಕಾರ ಸಂಘದ ಸಭೆಯಲ್ಲಿ ತನ್ನನ್ನು ಪ್ರತಿನಿಧಿಸಲು ಮತ್ತು ತನ್ನ ಪರವಾಗಿ ಮತನೀಡಲು, ಆ ಸಹಕಾರ ಸಂಘವು ತನ್ನ ಸದಸ್ಯರುಗಳ ಪೈಕಿ ಒಬ್ಬ ಸದಸ್ಯನನ್ನು ನೇಮಕ ಮಾಡುವುದು;

[2][(ಹೆಚ್) XXX ][2]

(ಐ) ಸದಸ್ಯನು ಮೃತನಾದ ಮೇಲೆ ಅವನ ಷೇರನ್ನು ಮತ್ತು ಹಿತಾಸಕ್ತಿಯನ್ನು ಯಾರಿಗೆ ವರ್ಗಾಯಿಸಬಹುದೋ ಅಥವಾ ಅದರ ಮೌಲ್ಯವನ್ನು ಸಂದಾಯ ಮಾಡಬಹುದೋ ಆ ವ್ಯಕ್ತಿಯ ನಾಮನಿರ್ದೇಶನದ ಪ್ರಕ್ರಿಯೆ;

(ಜೆ) ಮೃತ ಸದಸ್ಯನ ಷೇರಿನ ಮೌಲ್ಯವನ್ನು ಖಚಿತಗೊಳಿಸತಕ್ಕ ರೀತಿ;

[3][(ಕೆ) ರಿಟರ್ನಿಂಗ್ ಆಫೀಸರುಗಳ, ಪೋಲಿಂಗ್ ಅಧಿಕಾರಿಗಳ ಮತ್ತು ಅಂಥ ಇತರ ಅಧಿಕಾರಿಗಳ ನೇಮಕಾತಿ ಮತ್ತು ಅವರ ಅಧಿಕಾರಿಗಳು ಮತ್ತು ಪ್ರಕಾರ್ಯಗಳನ್ನು ಒಳಗೊಂಡಂತೆ ಸಹಕಾರ ಸಂಘದ ಸಮಿತಿಯ ಸದಸ್ಯರ ಮತ್ತು ಪದಾಧಿಕಾರಿಗಳ ಚುನಾವಣೆಯನ್ನು ನಡೆಸುವುದು.][3]

(ಎಲ್) ಸಹಕಾರ ಸಂಘದ ಸರ್ವ ಸದಸ್ಯರ ಸಭೆ ಸೇರುವಿಕೆಯನ್ನು ಅಗತ್ಯಗೊಳಿಸುವುದು;

[3][(ಎಂ) ರಿಜಿಸ್ಟ್ರಾರನು ತೆಗೆದುಹಾಕಿದ ಸಮಿತಿಯ ಬದಲಾಗಿ ನೇಮಕಗೊಂಡ ಸಮಿತಿಯ ಸದಸ್ಯರಿಗೆ ಮತ್ತು ಆಡಳಿತಾಧಿಕಾರಿಗೆ ಅಥವಾ ವಿಶೇಷ ಅಧಿಕಾರಿಗೆ ಸಂದಾಯವಾಗತಕ್ಕ ಸಂಭಾವನೆ.][3]

---

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಎನ್) ಸಹಕಾರ ಸಂಘದ ಸಮಿತಿಯ ಸದಸ್ಯತ್ವಕ್ಕೆ ಅರ್ಹತೆಗಳು, [1][xxx][1] [2][ಅನರ್ಹತೆಯ ಪ್ರಶ್ನೆಗಳನ್ನು ತೀರ್ಮಾನಿಸಲು ಸಕ್ಷಮವಾದ ಪ್ರಾಧಿಕಾರ ಮತ್ತು ಅಂಥ ತೀರ್ಮಾನಗಳ ಮೇಲಿನ ಅಪೀಲುಗಳು;][2]

[3][(ಒ) ಸಹಕಾರ ಸಂಘಗಳ ನೌಕರರ ನೇಮಕಾತಿಗಾಗಿ ವಿದ್ಯಾರ್ಹತೆ ಮತ್ತು ಸೇವಾ ಷರತ್ತುಗಳೂ ಒಳಗೊಂಡಂತೆ ನೇಮಕಾತಿ;][3]

(ಪಿ) ಸಹಕಾರ ಸಂಘದೊಡನೆ ಮಾಡಿಕೊಳ್ಳಲಾಗುವ ಕರಾರುಗಳಲ್ಲಿ ಹಿತಾಸಕ್ತಿ ಹೊಂದಿರಲು ಸಹಕಾರ ಸಂಘದ ಅಧಿಕಾರಿಗಳ ವಿರುದ್ಧ ನಿಷೇಧ;

(ಕ್ಯೂ) ಸಹಕಾರ ಸಂಘಗಳಲ್ಲಿ ರಾಜ್ಯ ಸರ್ಕಾರವು ಹೊಂದಿರುವ ಪ್ರತ್ಯಕ್ಷ ಮತ್ತು ಪರೋಕ್ಷ ಪಾಲುಗಾರಿಕೆಗೆ ಸಂಬಂಧಿಸಿದ ವಿಷಯಗಳು;

(ಆರ್) ಸಹಕಾರ ಸಂಘಗಳು ಲಾಭಾಂಶಗಳನ್ನು ಸಂದಾಯಮಾಡಬಹುದಾದ ದರ;

(ಎಸ್) ಸಹಕಾರ ಸಂಘದ ಮೀಸಲು ನಿಧಿಯ ಉದ್ದೇಶಗಳು ಮತ್ತು ಅದರ ಹೂಡಿಕೆಯ ರೀತಿ;

(ಟಿ) ಸಹಕಾರ ಸಂಘದ ಸಮಾಪನವಾದ ಮೇಲೆ ಅದರ ಮೀಸಲು ನಿಧಿಯ ವಿಲೆಯ ರೀತಿ;

(ಯು) ಸಹಕಾರ ಸಂಘವು ಯಾವ ಪರಿಮಿತಿಗೆ ಮತ್ತು ಯಾವ ಷರತ್ತುಗಳಿಗೆ ಒಳಪಟ್ಟು ಠೇವಣಿಗಳನ್ನು ಮತ್ತು ಸಾಲಗಳನ್ನು ಪಡೆಯಬಹುದು;

(ವಿ) ಸದಸ್ಯೇತರರೊಡನೆ ಸಹಕಾರ ಸಂಘವು ನಡೆಸುವ ವಹಿವಾಟುಗಳ ಬಗ್ಗೆ ನಿರ್ಬಂಧಗಳು;

(ಡಬ್ಲ್ಯೂ) ಸಹಕಾರ ಸಂಘವು ತನ್ನ ಷೇರುಗಳನ್ನು ಆಧರಿಸಿ ಸಾಲಗಳನ್ನು ಮಂಜೂರು ಮಾಡುವುದರ ಬಗ್ಗೆ ನಿರ್ಬಂಧಗಳು;

(ಎಕ್ಸ್) ಠೇವಣಿಗಳನ್ನು ಸ್ವೀಕರಿಸುವ ಮತ್ತು ನಗದು ಸಾಲಗಳನ್ನು ಮಂಜೂರು ಮಾಡುವ ಸಹಕಾರ ಸಂಘಗಳು ದ್ರವ್ಯರೂಪದ ಸಂಪನ್ಮೂಲಗಳನ್ನು ಯಾವ ರೂಪದಲ್ಲಿ ಮತ್ತು ಯಾವ ಪ್ರಮಾಣಗಳಲ್ಲಿ ಇಡಬೇಕು;

(ವೈ) ಸಹಕಾರ ಸಂಘಗಳ ಮೇಲೆ ಲೆಕ್ಕ ಪರಿಶೋಧನೆಯ ಫೀಜುಗಳನ್ನು ವಿಧಿಸುವುದು;

(ಝಡ್) ರಿಜಿಸ್ಟ್ರಾರನ, ಮಧ್ಯಸ್ಥಗಾರನ ಅಥವಾ ವಿವಾದಗಳನ್ನು ತೀರ್ಮಾನಿಸುವ ಇತರ ವ್ಯಕ್ತಿಗಳ ಮುಂದಿರುವ ವ್ಯವಹರಣೆಗಳಲ್ಲಿ ಅನುಸರಿಸಬೇಕಾದ ಪ್ರಕ್ರಿಯೆ [2][ಮತ್ತು ಮಧ್ಯಸ್ಥದಾರರಿಗೆ ಸಂದಾಯವಾಗತಕ್ಕ ಫೀಜು;][2]

(ಎಎ) ಸಹಕಾರ ಸಂಘದ ಆಸ್ತಿಯು ಯಾವ ಷರತ್ತುಗಳಿಗೊಳಪಟ್ಟು ಸಮಾಪಕನಲ್ಲಿ ನಿಹಿತಗೊಳ್ಳತಕ್ಕುದು; ಮತ್ತು ಸಹಕಾರ ಸಂಘದ ಸಮಾಪನದಲ್ಲಿ ಅಂಗೀಕರಿಸಬೇಕಾದ ಪ್ರಕ್ರಿಯೆ;

[4][(ಬಿಬಿ) ಸಹಕಾರ ಸಂಘಕ್ಕೆ ಸಲ್ಲಬೇಕಾದ ಅಥವಾ ಸಂದಾಯವಾಗಬೇಕಾದ ಮೊಬಲಗುಗಳು ವಸೂಲಿಯ ಮತ್ತು 101-ಬಿ ಪ್ರಕರಣದ ಮೇರೆಗೆ ಸ್ವತ್ತಿನ ವರ್ಗಾವಣೆಯ ಪ್ರಕ್ರಿಯೆ;][4]

(ಸಿಸಿ) ತೀರ್ಪಿಗೆ ಮುಂಚೆ ಜಪ್ತಿಯನ್ನು ಮಾಡುವ ರೀತಿ;

[4][(ಡಿಡಿ) XIನೇ ಅಧ್ಯಾಯವು ಅನ್ವಯವಾಗುವ ಸಂಘವು ಹೊರಡಿಸಿದ ಡಿಬೆಂಚರುಗಳ ನೀಡಿಕೆ, ವಿಮೋಚನೆ, ಮರುನೀಡಿಕೆ, ವರ್ಗಾವಣೆ, ಪ್ರತಿಸ್ಥಾಪನೆ ಅಥವಾ ಪರಿವರ್ತನೆ ಇವುಗಳ ಸಂಬಂಧದಲ್ಲಿ ಪ್ರಕ್ರಿಯೆ ಮತ್ತು ಷರತ್ತುಗಳು;

(ಡಿಡಿ-1) XIನೇ ಅಧ್ಯಾಯವು ಯಾವ ಸಂಘಕ್ಕೆ ಅನ್ವಯಿಸುವುದೋ ಆ ಸಂಘವು ಹೊರಡಿಸಿದ ಡಿಬೆಂಚರುಗಳ ಖಾತರಿಗಾಗಿ ಅಸಲು ಮೊಬಲಗಿನ ಗರಿಷ್ಠ ಮಿತಿ, ಬಡ್ಡಿ ದರ ಮತ್ತು ಇತರ ಷರತ್ತುಗಳು;

(ಡಿಡಿ-2) 89ನೇ ಪ್ರಕರಣದ ಮೇರೆಗೆ ಮಾರಾಟವನ್ನು ಜಾರಿಗೊಳಿಸುವ ಅಧಿಕಾರಿಯ ನೇಮಕಾತಿಗೆ ಅರ್ಹತೆಗಳು ಮತ್ತು ವಿಧಾನಗಳು ಮತ್ತು ಅಂಥ ಅಧಿಕಾರಿಯು ಚಲಾಯಿಸಬಹುದಾದ ಅಧಿಕಾರಗಳು ಮತ್ತು ಪ್ರಕಾರ್ಯ;

(ಡಿಡಿ-3) 89ನೇ ಪ್ರಕರಣದ ಮೇರೆಗೆ ಮಾರಾಟಕ್ಕಾಗಿ ನಿಗದಿಪಡಿಸಿದ ಅಡಮಾನ ಸ್ವತ್ತಿನ ಉತ್ಪನ್ನ ಮತ್ತು ವರಮಾನದ ರಿಸೀವರನ ನೇಮಕಾತಿ, ಅವನನ್ನು ಯಾವ ಷರತ್ತುಗಳಿಗೊಳಪಟ್ಟು ನೇಮಿಸಬಹುದೋ ಅಥವಾ ತೆಗೆದು ಹಾಕಬಹುದೋ ಆ ಷರತ್ತುಗಳು, ಮತ್ತು ಅವನು ಚಲಾಯಿಸಬಹುದಾದಂಥ ಅಧಿಕಾರಗಳು ಮತ್ತು ಪ್ರಕಾರ್ಯಗಳು ಮತ್ತು ಅವನು ಸ್ವೀಕರಿಸಬಹುದಾದ ವ್ಯವಸ್ಥಾಪನಾ ವೆಚ್ಚಗಳು ಮತ್ತು ಪರಿಶ್ರಮಧನ;

1. 1975ರ ಅಧಿನಿಯಮ ಸಂಖ್ಯೆ 39ರ ಮೂಲಕ 23.9.1975 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
2. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
3. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
4. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಡಿಡಿ-4) [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] 91ನೇ ಪ್ರಕರಣದ ಮೇರೆಗೆ ಅಡಮಾನಕಾರನ ವಿರುದ್ಧ ಯಾವ ವಿದ್ಯಮಾನಗಳಲ್ಲಿ ಕ್ರಮ ಕೈಗೊಳ್ಳಬಹುದೋ ಆ ವಿದ್ಯಮಾನಗಳು;

(ಡಿಡಿ-5) XIನೇ ಅಧ್ಯಾಯದ ಮೇರೆಗೆ ಸ್ಥಿರ ಸ್ವತ್ತಿನ ಮಾರಾಟದ ಸಂದರ್ಭದಲ್ಲಿ -

(i) ಮಾರಾಟದ ಉದ್ಘೋಷಣೆಯ ಪ್ರಕ್ರಿಯೆ ಮತ್ತು ಮಾರಾಟವನ್ನು ನಡೆಸುವುದು ಮತ್ತು ಪ್ರಸ್ತಾವಿತ ಮಾರಾಟವನ್ನು ಯಾವ ಷರತ್ತುಗಳ ಮೇಲೆ ಬಿಟ್ಟು ಬಿಡಬಹುದೋ ಆ ಷರತ್ತುಗಳು;

(ii) ಮಾರಾಟಕ್ಕೆ ಅಥವಾ ಪ್ರಸ್ತಾವಿತ ಮಾರಾಟಕ್ಕೆ ಪ್ರಾಸಂಗಿಕವಾದ ವೆಚ್ಚಗಳನ್ನು ಲೆಕ್ಕ ಮಾಡುವ ವಿಧಾನ;

(iii) ಠೇವಣಿಗಳನ್ನು ಸ್ವೀಕರಿಸುವ ಪ್ರಕ್ರಿಯೆ ಮತ್ತು ಮಾರಾಟದ ಉತ್ಪನ್ನಗಳ ವಿಲೆ;

(iv) ಪ್ರಸ್ತಾವಿತ ಮಾರಾಟವನ್ನು ಬಿಟ್ಟುಕೊಟ್ಟಿರುವಲ್ಲಿ ಅಥವಾ ಖರೀದಿಯ ಹಣವನ್ನು ನಿಯಮಿಸಲಾದ ಕಾಲದೊಳಗಾಗಿ ಠೇವಣಿ ಇಡದಿದ್ದರೆ, ಮರು ಮಾರಾಟದ ಪ್ರಕ್ರಿಯೆ ಮತ್ತು ಖರೀದಿ ಹಣವನ್ನು ಹಾಗೆ ಠೇವಣಿ ಇಡಲು ತಪ್ಪುವ ಖರೀದಿದಾರನ ವಿರುದ್ಧ ವಿಧಿಸಬಹುದಾದ ದಂಡನೆ;

(v) 89-ಬಿ ಪ್ರಕರಣದ ಮೇರೆಗೆ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಹಣ ವಿಲೆ ಮಾಡುವ ನಮೂನೆ ಮತ್ತು ವಿಧಾನ;

(vi) 89-ಸಿ ಪ್ರಕರಣದ ಮೇರೆಗಿನ ಮಾರಾಟ ಪ್ರಮಾಣ ಪತ್ರದ ನಮೂನೆ;

(vii) 89-ಸಿ ಪ್ರಕರಣದ ಮೇರೆಗೆ ಖರೀದಿಸಲಾದ ಸ್ವತ್ತನ್ನು ನ್ಯಾಯಾಲಯವು ಖರೀದಿದಾರನಿಗೆ ವಶಾವಣೆ ಮಾಡುವ ಪ್ರಕ್ರಿಯೆ;

(viii) 97ನೇ ಪ್ರಕರಣದಲ್ಲಿ ಉಲ್ಲೇಖಿಸಲಾದ ನೋಟೀಸಿನ ನಮೂನೆ; ಮತ್ತು

(ix) ಅಂಥ ನೋಟೀಸುಗಳ ಜಾರಿಗೆ ಸಂದಾಯವಾಗಬೇಕಾದ ಫೀಜು ಮತ್ತು ಅಂಥ ನೋಟೀಸುಗಳಲ್ಲಿ ನಮೂದಿಸಿದ ಭೂ ಮಾಲೀಕನಿಗೆ ಅಂಥ ನೋಟೀಸುಗಳನ್ನು ಜಾರಿ ಮಾಡುವ ರೀತಿ;

(ಡಿಡಿ-6) xiನೇ ಅಧ್ಯಾಯದ ಮೇರೆಗೆ ಸ್ಥಿರ ಸ್ವತ್ತಿನ ಮಾರಾಟದ ಸಮಯದಲ್ಲಿ [1][ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು][1] ಖರೀದಿಸಿದ ಸ್ವತ್ತನ್ನು ಆ ಬ್ಯಾಂಕು ಯಾವ ಸಮಯದೊಳಗಾಗಿ ಮತ್ತು ಯಾವ ಪ್ರಕ್ರಿಯೆಗನುಸಾರ ವಿಲೆ ಮಾಡತಕ್ಕುದೋ ಆ ಸಮಯ ಮತ್ತು ಪ್ರಕ್ರಿಯೆ;][4]

(ಇಇ) ಸಹಕಾರ ಸಂಘದ ವಿಳಾಸವನ್ನು ನೋಂದಾಯಿಸುವ ರೀತಿ;

(ಎಫ್ಎಫ್) ಸಹಕಾರ ಸಂಘವು ಇಡಬೇಕಾದ [1][ಲೆಕ್ಕ ಪುಸ್ತಕಗಳು ಹಾಗೂ ದಾಖಲೆಗಳು][1]ಮತ್ತು ರಿಜಿಸ್ಟರುಗಳು ಮತ್ತು ಲೆಕ್ಕಗಳನ್ನು ಮತ್ತು ಪುಸ್ತಕಗಳನ್ನು ಬರೆದಿಡುವಂತೆ ನಿರ್ದೇಶಿಸುವ ರಿಜಿಸ್ಟ್ರಾರನ ಅಧಿಕಾರ;

(ಜಿಜಿ) ಸಹಕಾರ ಸಂಘದ ಪುಸ್ತಕಗಳಲ್ಲಿರುವ ನಮೂದುಗಳನ್ನು ಪ್ರಮಾಣೀಕರಿಸುವ ರೀತಿ ಮತ್ತು ಅದು ತನ್ನ ವ್ಯವಹಾರ ಕ್ರಮದಲ್ಲಿ ಇಟ್ಟುಕೊಂಡಿರುವ ದಸ್ತಾವೇಜುಗಳ ಪ್ರತಿಗಳು;

(ಹೆಚ್ಹೆಚ್) ಸಹಕಾರ ಸಂಘಗಳು ರಿಜಿಸ್ಟ್ರಾರನಿಗೆ ಒದಗಿಸಬೇಕಾದ ವಿವರಣೆಗಳು ಮತ್ತು ವಿವರಪಟ್ಟಿಕೆಗಳು;

(ಐಐ) ವಕೀಲರಾಗಿ ಹಾಜರಾಗುವ ವ್ಯಕ್ತಿಗಳ ಮೇಲೆ ನಿರ್ಬಂಧಗಳು;

(ಜೆಜೆ) ದಸ್ತಾವೇಜುಗಳ ಪರಿಶೀಲನೆ ಮತ್ತು ಅವುಗಳ ಪ್ರಮಾಣಿತ ಪ್ರತಿಗಳನ್ನು ನೀಡಲು ಫೀಜುಗಳನ್ನು ವಿಧಿಸುವುದು; ಮತ್ತು

(ಕೆಕೆ) ನಿಯಮಿಸಬೇಕೆಂದು ಈ ಅಧಿನಿಯಮದ ಮೂಲಕ ಸ್ಪಷ್ಟವಾಗಿ ಅಗತ್ಯಪಡಿಸಿದ ಅಥವಾ ಅನುಮತಿಸಿದ ವಿಷಯಗಳು;

[2][(ಎಲ್ಎಲ್) ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ಅವಶ್ಯವಿರುವ ಇತರ ಯಾವುದೇ ವಿಷಯ.][2]

(3) ಈ ಪ್ರಕರಣದ ಮೇರೆಗೆ ನಿಯಮವನ್ನು ರಚಿಸುವಲ್ಲಿ, ರಾಜ್ಯ ಸರ್ಕಾರವು, ಅದನ್ನು ಉಲ್ಲಂಘಿಸುವ ತಪ್ಪಿತಸ್ಥ ವ್ಯಕ್ತಿಯು, ಎರಡು ನೂರು ರೂಪಾಯಿವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕುದೆಂದು ಉಪಬಂಧಿಸಬಹುದು.

[2][(4) ಈ ಅಧಿನಿಯಮದ ಮೇರೆಗೆ ನಿಯಮವನ್ನು ಪೂರ್ವಾನ್ವಯ ಪರಿಣಾಮ ಹೊಂದಿರುವಂತೆ ರಚಿಸಬಹುದು ಮತ್ತು ಅಂಥ ನಿಯಮವನ್ನು ರಚಿಸಿದಾಗ, ಆ ನಿಯಮವನ್ನು ರಚಿಸುವ ಬಗ್ಗೆ ಕಾರಣಗಳನ್ನು ರಾಜ್ಯ ವಿಧಾನ ಮಂಡಲದ ಎರಡೂ ಸದನಗಳ

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1964ರ ಅಧಿನಿಯಮ ಸಂಖ್ಯೆ 40ರ ಮೂಲಕ 26.6.1965 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

ಮುಂದೆ ಮಂಡಿಸಲಾಗುವ ಹೇಳಿಕೆಯಲ್ಲಿ ನಿರ್ದಿಷ್ಟಪಡಿಸತಕ್ಕುದು. ಈ ಅಧಿನಿಯಮದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮವು, 130ನೇ ಪ್ರಕರಣದ ಮೇರೆಗೆ ಮಾಡಲಾದ ಯಾವುದೇ ಮಾರ್ಪಾಟಿಗೊಳಪಟ್ಟು, ಈ ಅಧಿನಿಯಮದಲ್ಲಿ ಅಧಿನಿಯಮಿಸಿದ್ದರೆ ಹೇಗೋ ಹಾಗೆ ಪರಿಣಾಮ ಹೊಂದಿರತಕ್ಕುದು.][2]

[1][**129ಎ. ಮಾದರಿ ಉಪ ವಿಧಿಗಳು:–** (1) 129ನೇ ಪ್ರಕರಣದ (2)ನೇ ಉಪ-ಪ್ರಕರಣದ (ಸಿ) ಖಂಡದ ಅನುಸಾರ ರಚಿಸಿದ ನಿಯಮಗಳಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ವಿಷಯಗಳಿಗೆ ಸಂಬಂಧಪಟ್ಟಂತೆ ರಿಜಿಸ್ಟ್ರಾರನು, ಅಧಿಸೂಚನೆಯ ಮೂಲಕ, ಮಾದರಿ ವಿಧಿಗಳನ್ನು ರಚಿಸಬಹುದು ಮತ್ತು ವಿವಿಧ ವರ್ಗದ ಸಂಘಗಳಿಗೆ ವಿವಿಧ ಮಾದರಿ ವಿಧಿಗಳನ್ನು ರಚಿಸಬಹುದು.

(2) ರಿಜಿಸ್ಟ್ರಾರನು, ಆದೇಶದ ಮೂಲಕ, ಯಾವುದೇ ಸಹಕಾರ ಸಂಘವನ್ನು, ಅಥವಾ ಸಹಕಾರ ಸಂಘಗಳ ವರ್ಗವನ್ನು ಅಥವಾ ವರ್ಗಗಳನ್ನು, ಯಾವುದೇ ವಿಷಯಕ್ಕೆ ಸಂಬಂಧಪಟ್ಟ ಮಾದರಿ ಉಪ ವಿಧಿಗಳನ್ನು, ಸಂಘದಿಂದ ನಿರ್ದೇಶನವು ಸ್ವೀಕೃತವಾದ ದಿನಾಂಕದಿಂದ ಮೂರು ತಿಂಗಳಿಗಿಂತಲೂ ಕಡಿಮೆಯಿಲ್ಲದ ಅಂಥ ಅವಧಿಯೊಳಗೆ ಅಳವಡಿಸಿಕೊಳ್ಳುವಂತೆ ನಿರ್ದೇಶಿಸಬಹುದು.

(3) ಸಹಕಾರ ಸಂಘವು, ಮಾರ್ಪಾಟುಗಳೊಂದಿಗೆ ಅಥವಾ ಮಾರ್ಪಾಟುಗಳಿಲ್ಲದೆ ಮಾದರಿ ವಿಧಿಗಳನ್ನು ಅಳವಡಿಸಿಕೊಳ್ಳುವುದಕ್ಕೆ ಯಾವುದೇ ಕ್ರಮವನ್ನು ತೆಗೆದುಕೊಳ್ಳಲು ತಪ್ಪಿದಲ್ಲಿ, ರಿಜಿಸ್ಟ್ರಾರನು, ಆದೇಶದ ಮೂಲಕ ಸದರಿ ಮಾದರಿ ಉಪ ವಿಧಿಗಳನ್ನು ಅಂಥ ಸಹಕಾರ ಸಂಘವು ಅಂಥ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ ಅಳವಡಿಸಿಕೊಂಡಿದೆಯೆಂದು, ತದನುಸಾರವಾಗಿ ಅಂಥ ವಿಧಿಗಳು ಜಾರಿಗೆ ಬಂದಿರುವುದಾಗಿ ಭಾವಿಸತಕ್ಕುದೆಂದು ಘೋಷಿಸಬಹುದು.][1]

**130. ನಿಯಮಗಳನ್ನು ಮತ್ತು ಆದೇಶಗಳನ್ನು ರಾಜ್ಯ ವಿಧಾನ ಮಂಡಲದ ಮುಂದೆ ಇಡುವುದು:–** 37ನೇ, 54ನೇ ಮತ್ತು 132ನೇ ಪ್ರಕರಣಗಳ ಮೇರೆಗೆ ಹೊರಡಿಸಿದ ಪ್ರತಿಯೊಂದು ಅಧಿಸೂಚನೆಯನ್ನು, 120ನೇ ಮತ್ತು 121ನೇ ಪ್ರಕರಣಗಳ ಮೇರೆಗೆ ಮಾಡಿದ ಪ್ರತಿಯೊಂದು ಆದೇಶವನ್ನು ಮತ್ತು 129ನೇ ಪ್ರಕರಣದ ಮೇರೆಗೆ ಮಾಡಿದ ಪ್ರತಿಯೊಂದು ನಿಯಮವನ್ನು, ಅದನ್ನು ಹೊರಡಿಸಿದ ಅಥವಾ ಮಾಡಿದ ತರುವಾಯ ಆದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಇಡತಕ್ಕುದು; ಮತ್ತು ಸದರಿ ಅವಧಿಯ ಮುಕ್ತಾಯಕ್ಕೆ ಮುಂಚೆ ರಾಜ್ಯ ವಿಧಾನ ಮಂಡಲದ ಯಾವೊಂದು ಸದನವು ಆ ಅಧಿಸೂಚನೆಯಲ್ಲಿ, ಆದೇಶದಲ್ಲಿ ಅಥವಾ ನಿಯಮದಲ್ಲಿ ಯಾವುದೇ ಮಾರ್ಪಾಟು ಮಾಡಿದರೆ ಅಥವಾ ಆ ಅಧಿಸೂಚನೆ ಅಥವಾ ಆದೇಶ ಅಥವಾ ನಿಯಮವು ಪರಿಣಾಮಕಾರಿಯಾಗತಕ್ಕುದಲ್ಲವೆಂದು ನಿರ್ದೇಶಿಸಿದರೆ, ಮತ್ತು ಆ ಮಾರ್ಪಾಟನ್ನು ಅಥವಾ ನಿರ್ದೇಶನವನ್ನು ಇನ್ನೊಂದು ಸದನವು ಒಪ್ಪಿದರೆ ಆ ಅಧಿಸೂಚನೆ, ಆದೇಶ ಅಥವಾ ನಿಯಮವು ಸಂದರ್ಭಾನುಸಾರ, ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರವೇ ಪರಿಣಾಮಕಾರಿಯಾಗಿರತಕ್ಕುದು ಅಥವಾ ಯಾವುದೇ ರೀತಿಯಲ್ಲಿ ಪರಿಣಾಮಕಾರಿಯಾಗಿರತಕ್ಕುದಲ್ಲ.

**131. ನಿರಸನ ಮತ್ತು ಉಳಿಸುವಿಕೆಗಳು:–** [2][ಬೆಳಗಾಂವ ಪ್ರದೇಶದಲ್ಲಿ][2] ಜಾರಿಯಲ್ಲಿದ್ದ ಮುಂಬಯಿ ಸಹಕಾರ ಸಂಘಗಳ ಅಧಿನಿಯಮ, 1925 (ಮುಂಬಯಿ ಅಧಿನಿಯಮ, 1925ರ VII), [2][ಮಂಗಳೂರು ಮತ್ತು ಕೊಳ್ಳೇಗಾಲ ಪ್ರದೇಶದಲ್ಲಿ][2] ಜಾರಿಯಲ್ಲಿದ್ದ ಮದ್ರಾಸು ಸಹಕಾರ ಸಂಘಗಳ ಅಧಿನಿಯಮ, 1932 (ಮದ್ರಾಸು ಅಧಿನಿಯಮ, 1932ರ IV), ಮತ್ತು ಮದ್ರಾಸು ಸಹಕಾರ ಭೂ ಅಡಮಾನ ಬ್ಯಾಂಕುಗಳ ಅಧಿನಿಯಮ, 1934 (ಮದ್ರಾಸು ಅಧಿನಿಯಮ 1934ರ X), ಕೊಡಗು ಜಿಲ್ಲೆಯಲ್ಲಿ ಜಾರಿಯಲ್ಲಿದ್ದ ಕೊಡಗು ಸಹಕಾರ ಸಂಘಗಳ ಅಧಿನಿಯಮ, 1936 (ಕೊಡಗು ಅಧಿನಿಯಮ, 1936ರ II) ಮೈಸೂರು ಪ್ರದೇಶದಲ್ಲಿ ಜಾರಿಯಲ್ಲಿದ್ದ ಮೈಸೂರು ಸಹಕಾರ ಸಂಘಗಳ ಅಧಿನಿಯಮ, 1948 (ಮೈಸೂರು ಅಧಿನಿಯಮ, 1948ರ LII), [2][ಗುಲ್ಬರ್ಗಾ ಪ್ರದೇಶದಲ್ಲಿ][2] ಜಾರಿಯಲ್ಲಿದ್ದ ಹೈದರಾಬಾದು ಸಹಕಾರ ಸಂಘಗಳ ಅಧಿನಿಯಮ, 1952 (ಹೈದರಾಬಾದು ಅಧಿನಿಯಮ, 1952ರ XVI),ಮತ್ತು ಹೈದರಾಬಾದು ಸಹಕಾರ ಭೂ ಅಡಮಾನ ಬ್ಯಾಂಕುಗಳ ಅಧಿನಿಯಮ,1349 ಫಸಲಿ (ಹೈದರಾಬಾದು ಅಧಿನಿಯಮ,1349ರ ಫಸಲಿ II), ಇವುಗಳನ್ನು ಈ ಮೂಲಕ ನಿರಸಗೊಳಿಸಲಾಗಿದೆ:

ಪರಂತು, ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಅಸ್ತಿತ್ವದಲ್ಲಿದ್ದು, ಮೇಲೆ ಹೇಳಿರುವ ನಿರಸನಗೊಳಿಸಿದ ಯಾವುವೇ ಅಧಿನಿಯಮಗಳ ಮೇರೆಗೆ ನೋಂದಾಯಿಸಿದ ಅಥವಾ ನೋಂದಾಯಿಸಲಾಗಿದೆಯೆಂದು ಭಾವಿಸಲಾದ ಯಾವುದೇ ಸಹಕಾರ ಸಂಘವು, ಈ ಅಧಿನಿಯಮದ ಮೇರೆಗೆ ನೋಂದಾಯಿಸಲಾಗಿದೆಯೆಂದು ಭಾವಿಸತಕ್ಕುದು; ಮತ್ತು ಅಂಥ ಸಂಘದ ಉಪವಿಧಿಗಳು ಈ ಅಧಿನಿಯಮದ ಅಥವಾ ಅದರ ಮೇರೆಗೆ ಮಾಡಿದ ನಿಯಮಗಳ ಉಪಬಂಧಗಳಿಗೆ ಅಸಂಗತವಾಗಿಲ್ಲದಷ್ಟು ಮಟ್ಟಿಗೆ ಮತ್ತು ಈ ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳ ಉಪಬಂಧಗಳ ಮೇರೆಗೆ ಬದಲಾಯಿಸುವ ಅಥವಾ ರದ್ದುಗೊಳಿಸುವವರೆಗೆ ಜಾರಿಯಲ್ಲಿ ಮುಂದುವರಿಯತಕ್ಕುದು:

ಮತ್ತೂ ಪರಂತು, ಈ ಹಿಂದಿನ ಪರಂತುಕಕ್ಕೊಳಪಟ್ಟು ಮೈಸೂರು ಸಾಮಾನ್ಯ ಖಂಡಗಳ ಅಧಿನಿಯಮ, 1899 (ಮೈಸೂರು ಅಧಿನಿಯಮ, 1899ರ III) ರ 6ನೇ ಪ್ರಕರಣವು, ಸದರಿ ಅಧಿನಿಯಮಗಳ ರದ್ದಿಯಾತಿಗೆ ಸಂಬಂಧಿಸಿ ಅನ್ವಯವಾಗತಕ್ಕುದು ಮತ್ತು ಸದರಿ ಅಧಿನಿಯಮದ 8ನೇ ಮತ್ತು 24ನೇ ಪ್ರಕರಣಗಳು, ಸದರಿ ಅಧಿನಿಯಮಗಳನ್ನು ರದ್ದುಗೊಳಿಸಿ ಮೈಸೂರು ಅಧಿನಿಯಮದ ಮೂಲಕ ಪುನಃ ಅಧಿನಿಯಮಿಸಿದ್ದರೆ ಹೇಗೋ ಹಾಗೆ ಅನ್ವಯವಾಗತಕ್ಕುದು.

---

1. 1998ರ ಅಧಿನಿಯಮ ಸಂಖ್ಯೆ 25ರ ಮೂಲಕ 15.8.1998 ರಂತೆ ಜಾರಿಗೆ ಬರುವಂತೆ ಸೇರಿಸಲಾಗಿದೆ
2. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

132. **ತೊಂದರೆಗಳನ್ನು ನಿವಾರಿಸುವ ಅಧಿಕಾರ:-** (1) ಈ ಅಧಿನಿಯಮದ ಪ್ರಾರಂಭಕ್ಕೆ ನಿಕಟಪೂರ್ವದಲ್ಲಿ ಜಾರಿಯಲ್ಲಿದ್ದ ಅಧಿನಿಯಮಗಳ ಉಪಬಂಧಗಳಿಂದ ಈ ಅಧಿನಿಯಮದ ಉಪಬಂಧಗಳಿಗೆ ಪರಿವರ್ತನೆಯಾದ ಪರಿಣಾಮವಾಗಿ, ಸದರಿ ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವಲ್ಲಿ, ಯಾವುದೇ ತೊಂದರೆಯು ಉದ್ಭವಿಸಿದರೆ, ರಾಜ್ಯ ಸರ್ಕಾರವು ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ಆ ತೊಂದರೆಯನ್ನು ನಿವಾರಿಸುವುದಕ್ಕಾಗಿ ತನಗೆ ಅವಶ್ಯವೆಂದು ಅಥವಾ ಯುಕ್ತವೆಂದು ಕಂಡುಬರುವಂಥ ಉಪಬಂಧಗಳನ್ನು ಮಾಡಬಹುದು.

(2) ಈ ಅಧಿನಿಯಮದ ಪ್ರಾರಂಭಕ್ಕೆ ನಿಕಟಪೂರ್ವದಲ್ಲಿ ಜಾರಿಯಲ್ಲಿದ್ದ ಅಧಿನಿಯಮಗಳ ಉಪಬಂಧಗಳ ಪರಿವರ್ತನೆಗೆ ಸಂಬಂಧಿಸಿದುದನ್ನು ಬಿಟ್ಟು ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಯಾವುದೇ ತೊಂದರೆಯು ಉದ್ಭವಿಸಿದರೆ, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ, ಆ ತೊಂದರೆಯನ್ನು ನಿವಾರಿಸಲು ಅವಶ್ಯವೆಂದು ಅಥವಾ ಯುಕ್ತವೆಂದು ತನಗೆ ಕಂಡುಬರುವಂಥ ಮತ್ತು ಈ ಅಧಿನಿಯಮದ ಉದ್ದೇಶಗಳಿಗೆ ಅಸಂಗತವಾಗಿರುವಂಥ ಉಪಬಂಧಗಳನ್ನು ರಚಿಸಬಹುದು.

* * * *

**ಅಧಿಸೂಚನೆ - I**

**ಬೆಂಗಳೂರು, ದಿನಾಂಕ: 25ನೇ ಮೇ, 1960 [ಸಂಖ್ಯೆ: ಎ ಮತ್ತು ಎಫ್ 21 ಸಿಎಡಿ 59 (II)]**

ಮೈಸೂರು ಸಹಕಾರ ಸಂಘಗಳ ಅಧಿನಿಯಮ, 1959 (1959ರ ಮೈಸೂರು ಅಧಿನಿಯಮ II)ರ 1ನೇ ಪ್ರಕರಣದ (3)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, 1960ರ ಜೂನ್ 1ನೇ ದಿನವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸಿದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಬೀರಪ್ಪ**

ಸರ್ಕಾರದ ಕಾರ್ಯದರ್ಶಿ, ಕೃಷಿ ಮತ್ತು ಅರಣ್ಯ ಇಲಾಖೆ.

**ಅಧಿಸೂಚನೆ - II**

**ಬೆಂಗಳೂರು, ದಿನಾಂಕ: 22/23ನೇ ಜೂನ್, 1965 [ಸಂಖ್ಯೆ: ಡಿಪಿಸಿ 88 ಸಿಬಿಎ 64]**

**ಎಸ್.ಓ. 2640:-** ಮೈಸೂರು ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 1964 (1964ರ ಮೈಸೂರು ಅಧಿನಿಯಮ 40)ರ 1ನೇ ಪ್ರಕರಣದ (2)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, 1965ರ ಜೂನ್ 26ನೇ ದಿನವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸಿದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಲ್.ಎಸ್. ಗೈ**

ಅಧೀನ ಕಾರ್ಯದರ್ಶಿ.

**ಅಧಿಸೂಚನೆ - III**

**ಬೆಂಗಳೂರು, ದಿನಾಂಕ: 11ನೇ ಏಪ್ರಿಲ್, 1968 [ಸಂಖ್ಯೆ: ಡಿಪಿಸಿ 257 ಸಿಎಂಡಿ 65]**

**ಎಸ್.ಓ. 526:-** ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆ (ವಿನಿಯಮನ) ಅಧಿನಿಯಮ, 1966 (1966ರ ಮೈಸೂರು ಅಧಿನಿಯಮ 27)ರ 1ನೇ ಪ್ರಕರಣದ (3)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, 1968ರ ಮೇ ಒಂದನೇ ದಿನವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸಿದೆ.

(ಕರ್ನಾಟಕ ರಾಜ್ಯಪತ್ರ ವಿಶೇಷ ಸಂಚಿಕೆ, ಭಾಗ-IV-2ಸಿ (ii) ಸಂಖ್ಯೆ: 314, ದಿನಾಂಕ: 11ನೇ ಏಪ್ರಿಲ್, 1968 ರಲ್ಲಿ ಪ್ರಕಟಿಸಲಾಗಿದೆ.)

**ಅಧಿಸೂಚನೆ - IV**

**ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್, 1967 [ಸಂಖ್ಯೆ: ಎಫ್‌ಡಿ 421 ಸಿಎಸ್‌ಎಲ್ 67]**

**ಎಸ್.ಓ. 2511:-** ಮೈಸೂರು ಮಾರಾಟ ತೆರಿಗೆ (ತಿದ್ದುಪಡಿ ಅಧಿನಿಯಮ, 1967 (1967ರ ಅಧಿನಿಯಮ ಸಂಖ್ಯೆ 16)ರ 1ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಮೈಸೂರು ಸರ್ಕಾರವು, 1968ರ ಜೂನ್ 1ನೇ ದಿನವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸಿದೆ.

ಮೈಸೂರು ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಎಸ್. ಭರಥ್**

ಸರ್ಕಾರದ ಉಪ ಕಾರ್ಯದರ್ಶಿ, ಹಣಕಾಸು ಇಲಾಖೆ.

**ಅಧಿಸೂಚನೆ - V**

**ಬೆಂಗಳೂರು, ದಿನಾಂಕ: 17ನೇ ಜುಲೈ, 1975 [ಸಂಖ್ಯೆ: ಡಿಪಿ 87 ಪಿಸಿಎಂ 71]**

**ಎಸ್.ಓ. 2050:-** ಕರ್ನಾಟಕ ಕೃಷಿ ಪತ್ತಿನ ಕಾರ್ಯಕ್ಷೇತ್ರಗಳು ಮತ್ತು ಸಂಕೀರ್ಣಗಳ ಉಪಬಂಧಗಳ ಅಧಿನಿಯಮ, 1974 (1975ರ ಕರ್ನಾಟಕ ಅಧಿನಿಯಮ 2)ರ 1ನೇ ಪ್ರಕರಣದ (3)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1975ರ ಜುಲೈ ಹದಿನೇಳನೆಯ ದಿನವನ್ನು ಸದರಿ ಅಧಿನಿಯಮವು ಕರ್ನಾಟಕ ರಾಜ್ಯದಾದ್ಯಂತ ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಧೀರೇಂದ್ರ ಸಿಂಘ್**

ಸರ್ಕಾರದ ಉಪ ಕಾರ್ಯದರ್ಶಿ, ಯೋಜನೆ ಇಲಾಖೆ.

ಅಧಿಸೂಚನೆ – VI

**ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್, 1975 [ಸಂಖ್ಯೆ: ಆರ್‌ಡಿಸಿ 322 ಸೀಇಎ 75]**

**ಎಸ್.ಓ. 3077:–** ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 1975 (1975ರ ಕರ್ನಾಟಕ ಅಧಿನಿಯಮ ಸಂಖ್ಯೆ 39)ರ 1ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1975ರ ಸೆಪ್ಟೆಂಬರ್ ಇಪ್ಪತ್ತಮೂರನೇ ದಿನವನ್ನು ಸದರಿ ಅಧಿನಿಯಮವು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಎಸ್. ಹುಬಳಿ**

ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಸಹಕಾರ ಇಲಾಖೆ.

(ರಾಜ್ಯಪತ್ರ ವಿಶೇಷ ಸಂಚಿಕೆ ದಿನಾಂಕ: 23.09.1975ರ ಸಂಖ್ಯೆ: 3471ರ ಭಾಗ-IV-2ಸಿ (ii) ರಲ್ಲಿ ಎಸ್.ಓ. 3077 ಎಂದು ಪ್ರಕಟಿಸಲಾಗಿದೆ.)

ಅಧಿಸೂಚನೆ – VII

**ಬೆಂಗಳೂರು, ದಿನಾಂಕ: 12ನೇ ಆಗಸ್ಟ್, 1998 [ಸಂಖ್ಯೆ: ಸಿಎಂಡಬ್ಲ್ಯು 131 ಸಿಎಲ್‌ಎಂ 98]**

ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 1997 (1998ರ ಕರ್ನಾಟಕ ಅಧಿನಿಯಮ 25)ರ 1ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1998ರ ಆಗಸ್ಟ್ ಹದಿನೈದನೇ ದಿನವನ್ನು, 5ನೇ ಪ್ರಕರಣದ ಮೂಲಕ 6(2)(iv)ನೇ ಪ್ರಕರಣದ, 29ನೇ ಪ್ರಕರಣದ ಮೂಲಕ ಸೇರಿಸಿದ 29ಜಿ ಪ್ರಕರಣ, 36ನೇ ಪ್ರಕರಣದ ಮೂಲಕ ಸೇರಿಸಿದ 39(ಎ) (3) ಪ್ರಕರಣ, 46ನೇ ಪ್ರಕರಣದ ಮೂಲಕ ಸೇರಿಸಿದ 63(3) ಪ್ರಕರಣ ಮತ್ತು ಈ ಅಧಿನಿಯಮದ 61ನೇ ಪ್ರಕರಣದ ಮೂಲಕ ಬಿಟ್ಟುಬಿಡಲಾದ 111ಎ ಪ್ರಕರಣದ ಉಪಬಂಧಗಳ ಹೊರತಾಗಿ, ಸದರಿ ಅಧಿನಿಯಮದ ಎಲ್ಲಾ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ವಿಶೇಷ ಕರ್ತವ್ಯ ಅಧಿಕಾರಿ,

ಸಹಕಾರಿ ಇಲಾಖೆ.

ಅಧಿಸೂಚನೆ – VIII

**ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್, 1998 [ಸಂಖ್ಯೆ: ಸಿಎಂಡಬ್ಲ್ಯು 131 ಸಿಎಲ್‌ಎಂ 98]**

ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 1997 (1998ರ ಕರ್ನಾಟಕ ಅಧಿನಿಯಮ 25)ರ 1ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1998ರ ಅಕ್ಟೋಬರ್ ಇಪ್ಪತ್ತೋಳನೇ ದಿನವನ್ನು, 5ನೇ ಪ್ರಕರಣದ ಮೂಲಕ ಸೇರಿಸಿದ 6(2)(iv) ಪ್ರಕರಣ, 29ನೇ ಪ್ರಕರಣದ ಮೂಲಕ ಸೇರಿಸಿದ 29ಜಿ ಪ್ರಕರಣ, 36ನೇ ಪ್ರಕರಣದ ಮೂಲಕ ಸೇರಿಸಿದ 39ಎ(3) ಪ್ರಕರಣ, 46ನೇ ಪ್ರಕರಣದ ಮೂಲಕ ಸೇರಿಸಿದ 63(3) ಪ್ರಕರಣದ ಮತ್ತು ಸದರಿ ಅಧಿನಿಯಮದ 61ನೇ ಪ್ರಕರಣದ ಮೂಲಕ ಬಿಟ್ಟುಬಿಡಲಾದ 111ಎ ಪ್ರಕರಣದ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಆರ್. ರಂಗನಾಥ್**

ವಿಶೇಷ ಕರ್ತವ್ಯ ಅಧಿಕಾರಿ,

ಸಹಕಾರ ಇಲಾಖೆ.

ಅಧಿಸೂಚನೆ – XI

**ಬೆಂಗಳೂರು, ದಿನಾಂಕ: 20ನೇ ಜೂನ್, 2000 [ಸಂಖ್ಯೆ: ಸಿಎಂಡಬ್ಲ್ಯು 60 ಸಿಎಲ್‌ಎಂ 99]**

ಕರ್ನಾಟಕ ಸಹಕಾರ ಸಂಘಗಳ (ಎರಡನೇ ತಿದ್ದುಪಡಿ) ಅಧಿನಿಯಮ, 1997 (2000ರ ಕರ್ನಾಟಕ ಅಧಿನಿಯಮ 2)ರ 1ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 2000ದ ಜೂನ್ ಇಪ್ಪತ್ತನೆಯ ದಿನವನ್ನು, 26ಎ ಪ್ರಕರಣದ ಮೂಲಕ ಸೇರಿಸಿದ 26ಬಿ ಪ್ರಕರಣದ ಹೊರತಾಗಿ, ಸದರಿ ಅಧಿನಿಯಮದ ಎಲ್ಲಾ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಿರ್‍ಯ್ಲು ಫಿಲಿಪ್ಸ್**

ವಿಶೇಷ ಕರ್ತವ್ಯ ಅಧಿಕಾರಿ,

ಸಹಕಾರ ಇಲಾಖೆ.

The above translation of the Karnataka Co-Operative Societies Act 1959 (11 of 1959) shall be the authoritative text in the Kannada Language under section 5A of the Karnataka Official Language Act, 1963 (Karnataka Act No.26 of 1963).

**GOVERNOR OF KARNATAKA**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ದಕ್ಷಿಣಾಮೂರ್ತಿ**

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ಪಿ.ಆರ್. 225